ಕನ್ನಡ ಕವಿಕಾವ್ಯಮಾಲೆ—೪೬

# ಕನ್ನಡ ಕಾವ್ಯಪ್ರಕಾಶ

(ಮಮ್ಮಟನ ಮೂಲಗ್ರಂಥದ ಅನುವಾದ)

## ಸಂಪುಟ—೧

**ಡಾ. ಕೆ. ಕೃಷ್ಣಮೂರ್ತಿ, ಎಂ.ಎ., ಬಿ.ಟಿ., ಪಿಎಚ್.ಡಿ.**

ಸಂಸ್ಕೃತ ಪ್ರಧಾನಾಧ್ಯಾಪಕರು, ಕೆನರಾ ಕಾಲೇಜು, ಕುಮಟಾ (ಉ.ಕ.)



ಪ್ರಕಾಶಕರು :

ಶಾರದಾ ಮಂದಿರ

ಕೃಷ್ಣರಾಜವನಂ, ಮೈಸೂರು

ಕನ್ನಡ ಕವಿಕಾವ್ಯಮಾಲೆ—೪೬

# ಕನ್ನಡ ಕಾವ್ಯಪ್ರಕಾಶ

(ಮಮ್ಮಟನ ಮೂಲಗ್ರಂಥದ ಅನುವಾದ)

ಸಂಪುಟ—೧

(ಉಲ್ಲಾಸಗಳು—೧—೬)

**ಡಾ|| ಕೆ. ಕೃಷ್ಣಮೂರ್ತಿ, ಎಂ.ಎ., ಬಿ.ಟಿ., ಪಿಎಚ್.ಡಿ.**

ಸಂಸ್ಕೃತ ಪ್ರಧಾನಾಧ್ಯಾಪಕರು, ಕೆನರಾ ಕಾಲೇಜು, ಕುಮಟಾ (ಉ.ಕ.)



ಪ್ರಕಾಶಕರು

ಶಾರದಾ ಮಂದಿರ

೫೭೮ ಕೃಷ್ಣರಾಜವನಂ, ಮೈಸೂರು

# ಮುಡಿಪು

**ಸಹಧರ್ಮಿಣಿ ಸೌ॥ ಸರೋಜಳಿಗೆ**

ಮನೆವಾರ್ತೆಯ ತಾಪತ್ರಯ
ಮನಗಿನಿತುಂ ಸೋಂಕದಂತೆ ಗೈಯುತ್ತನಿಶಂ
ಮನದೊಳ್ಪಿಂ ಮತ್ಕೃತಿಗಳ
ಜನನಿಗೆ ಗೃಹಲಕ್ಷ್ಮಿಗಕ್ಕೆ ಮುಡಿಪೀ ಗ್ರಂಥಂ.

# ಅರಿಕೆ

ಸಂಸ್ಕೃತ ಕಾವ್ಯವಿಮರ್ಶೆಯ ಸಿದ್ಧಾಂತಗಳಲ್ಲಿ ಆಸಕ್ತರಾದ ಅನೇಕ ಮಿತ್ರರ ಮತ್ತು ಮಹಾಜನರ ಅಪೇಕ್ಷೆಯ ಮೇರೆಗೆ ಈಗ ಅಚ್ಚಾಗಿ ಮುಗಿದಿರುವ **ಕನ್ನಡ ಕಾವ್ಯಪ್ರಕಾಶದ** ಮೊದಲ ಆರು ಉಲ್ಲಾಸಗಳನ್ನೇ ಪ್ರಥಮ ಸಂಪುಟವಾಗಿ ಪ್ರಕಟಿಸ ಲಾಗಿದೆ. ಇನ್ನೊಂದು ವರ್ಷದ ಅವಧಿಯಲ್ಲಿ ಉಳಿದ ನಾಲ್ಕು ಉಲ್ಲಾಸಗಳನ್ನೂ ಇದೇ ಗಾತ್ರದ ಎರಡನೆಯ ಸಂಪುಟವಾಗಿ ಪ್ರಕಟಿಸುವ ನಿರೀಕ್ಷೆಯಿದೆ.

*   *   *   *   *

ಸಂಸ್ಕೃತ ಕಾವ್ಯಮೀಮಾಂಸೆಯ ಕ್ಷೇತ್ರದಲ್ಲಿ ಮಮ್ಮಟನ ಮಹತ್ತ್ವವನ್ನು ಸ್ಥೂಲವಾಗಿ ಸೂಚಿಸಿ, ಕೆಲವು ಆಶಂಕೆಗಳನ್ನು ನಿವಾರಿಸಿ, ಮಮ್ಮಟನ ಕಾಲ, ದೇಶ ಗಳನ್ನು ನಿರ್ದೇಶಿಸುವ ಸಣ್ಣ ಪೀಠಿಕೆಯೊಂದನ್ನು ಈ ಸಂಪುಟದ ಆದಿಯಲ್ಲಿ ಸೇರಿಸ ಲಾಗಿದೆ. ಪ್ರತಿಯೊಂದು ಅಧ್ಯಾಯದ ಆರಂಭದಲ್ಲಿಯೂ ಆಯಾಯಾ ಕಾವ್ಯಪ್ರಕ್ರಿಯೆ ಗಳ ವಿಸ್ತಾರವಾದ ವಿವೇಚನೆ ಅಡಿಟಿಪ್ಪಣಿಗಳಲ್ಲಿ ಬಂದಿದೆ. ಮಮ್ಮಟನ ಕಾವ್ಯ ವಿಚಾರಗಳೆಲ್ಲವನ್ನೂ ಸಮಗ್ರವಾಗಿ ಮತ್ತು ತುಲನಾತ್ಮಕವಾಗಿ ವಿವೇಚಿಸುವ ವಿಸ್ತೃತ ಸಮೀಕ್ಷೆಯನ್ನು ಬರಲಿರುವ ಎರಡನೆಯ ಸಂಪುಟಕ್ಕೆ ಪೀಠಿಕೆಯಾಗಿ ಜೋಡಿಸ ಲಾಗುತ್ತದೆ. ಹಾಗೆಯೇ ಸೂತ್ರಗಳ ಮತ್ತು ಲಕ್ಷ್ಯಗಳ ಅಕಾರಾದಿ ಪಟ್ಟಿಗಳನ್ನೂ ಎರಡನೆಯ ಸಂಪುಟದ ಕಡೆಯಲ್ಲಿ ಕೊಡಲಾಗುತ್ತದೆ.

ಮಮ್ಮಟನ ಸಂಸ್ಕೃತ ಮೂಲವು ಕಾರಿಕೆ (=ಶ್ಲೋಕಬದ್ಧವಾದ ಸೂತ್ರ), ಮತ್ತು ವೃತ್ತಿ (=ಗದ್ಯವಿವರಣೆ)ಗಳನ್ನೊಳಗೊಂಡಿದೆ. ವೃತ್ತಿಯ ಅಂಗವಾಗಿ ಅನೇಕ ಲಕ್ಷ್ಯ ಪದ್ಯಗಳು ಉದಾಹೃತವಾಗಿವೆ. **ಕನ್ನಡ ಕಾವ್ಯಪ್ರಕಾಶದಲ್ಲಿ** ಸಂಸ್ಕೃತ ಮೂಲ ಕಾರಿಕೆಗಳ ಮತ್ತು ಸಂಸ್ಕೃತ ಉದಾಹರಣಪದ್ಯಗಳ ಪಾಠವನ್ನೂ ಕೊಟ್ಟು ಕನ್ನಡ ಅನುವಾದವನ್ನು ಬರೆದಿದೆ. 'ವೃತ್ತಿ'ಯ ಮೂಲಪಾಠವನ್ನು ಕೊಟ್ಟಿಲ್ಲ; ಅದರ ಸಮಗ್ರ ಕನ್ನಡ ಅನುವಾದವನ್ನು ಮಾತ್ರ ಕೊಡಲಾಗಿದೆ. ಇಂತಹ ಉದ್ಗ್ರಂಥದ ಅನುವಾದವು ಅತ್ಯಂತ ನಿಷ್ಕೃಷ್ಟವಾಗಿರಬೇಕೆಂಬ ದೃಷ್ಟಿಯಿಂದ ಬರೆದಿರುವುದರಿಂದ, ಅರ್ಥಪ್ರತೀತಿಗೆ ಅಗತ್ಯವೆಂದೆನಿಸಿದ ಅನುವಾದಕನ ಅಧ್ಯಾಹೃತ ಪದಗಳನ್ನು ಆವರಣಚಿಹ್ನೆಗಳಲ್ಲಿ ಕಾಣಿಸಿದೆ. ಮೂಲದ ಲಕ್ಷ್ಯಪದ್ಯಗಳನ್ನೆಲ್ಲ ಪದ್ಯಮಯವಾಗಿಯೇ ಭಾಷಾಂತರಿಸಿರು ವುದು **ಕನ್ನಡ ಕಾವ್ಯಪ್ರಕಾಶದ** ವಿಶೇಷ. ಮಮ್ಮಟನ ಉಕ್ತಿಗಳ ವಿವರಣೆ ಮತ್ತು ವಿವೇಚನೆಗಳಿಗಾಗಿ ಅಡಿಟಿಪ್ಪಣಿಗಳನ್ನು ವಿನಿಯೋಗಿಸಿದೆ.

*   *   *   *   *

**ಕನ್ನಡ ಕಾವ್ಯಪ್ರಕಾಶ**ವನ್ನು ಧಾರಾವಾಹಿಯಾಗಿ ಪ್ರಕಟಿಸುತ್ತ ಬಂದು, ನನ್ನ ವಿದ್ವದುದ್ಯಮಗಳಿಗೆ ಪ್ರೋತ್ಸಾಹವನ್ನೂ ನೆರವನ್ನೂ ಒಂದೇಸಮವಾಗಿ ನೀಡುತ್ತಿರುವ **ಪ್ರಬುದ್ಧ ಕರ್ಣಾಟಕ**ದ ಸಂಪಾದಕ ಮಂಡಲಿಗೆ ನಾನು ಅತ್ಯಂತ ಕೃತಜ್ಞ ನಾಗಿದ್ದೇನೆ. ಅವರ ಕೃಪೆಯ ಜತೆಗೆ ಎಂದಿನಂತೆ ನನ್ನ ಪ್ರಿಯಮಿತ್ರರಾದ ಪ್ರೊ|| ಎಚ್. ಎಂ. ಶಂಕರನಾರಾಯಣರಾಯರ ಆಶ್ರಯವೂ ಸೇರಿ ಇದು ಪುಸ್ತಕ ರೂಪವನ್ನು ಪಡೆಯುವ ಯೋಗ ಬಂದಿದೆ. ಅವರಿಗೆ ನನ್ನ ಕೃತಜ್ಞತೆಯನ್ನು ಸೂಚಿಸಲು ಮಾತು ಶಕ್ತವಲ್ಲ. ಅಲಂಕಾರಶಾಸ್ತ್ರದ ನನ್ನ ಇತರ ಕೃತಿಗಳಿಗೆ ಸಂಭಾವನಾದ್ರವ್ಯ ಅಥವಾ ಸಹಾಯಧನವನ್ನಿತ್ತು ನನಗೆ ಉತ್ತೇಜನವಿತ್ತಿರುವ ಬೆಂಗಳೂರಿನ ದೇವರಾಜ ಬಹದ್ದೂರ್ ಸಾಹಿತ್ಯಸಮಿತಿಗೂ, ಮದ್ರಾಸಿನ ಸ್ಕೂಲ್ ಬುಕ್ ಎಂಡ್ ಲಿಟರೇಚರ್ ಸೊಸೈಟಿಗೂ, ನನ್ನ ವಿದ್ಯಾಮಾತೆ ಮೈಸೂರು ವಿಶ್ವವಿದ್ಯಾನಿಲಯಕ್ಕೂ ನನ್ನ ಹೃತ್ಪೂರ್ವಕ ಧನ್ಯವಾದಗಳನ್ನು ಸಮರ್ಪಿಸಲು ಈ ಸಂದರ್ಭವನ್ನು ಪಯೋಗಿಸಿಕೊಳ್ಳು ತ್ತೇನೆ. ಪ್ರತ್ಯಕ್ಷವಾಗಿ ಅಥವಾ ಅಪ್ರತ್ಯಕ್ಷವಾಗಿ ನನ್ನ ಕೃತಿಗಳನ್ನು ಮೆಚ್ಚಿ ನನ್ನ ಲೇಖನಿಯನ್ನು ಮುಂದೆ ಸಾಗಿಸುತ್ತಿರುವ ನಾಡಿನ ಕವಿಸಹೃದಯರೆಲ್ಲರಿಗೂ ನಾನು ಋಣಿ.

ಕೆನರಾ ಕಾಲೇಜು
ಕುಮಟಾ
೧೮-೬-೧೯೫೬

**ಕೆ. ಕೃಷ್ಣಮೂರ್ತಿ**

# ಪೀಠಿಕೆ

ಸಂಸ್ಕೃತ ಅಲಂಕಾರಶಾಸ್ತ್ರದ ಇತಿಹಾಸದಲ್ಲಿ ಮಮ್ಮಟನ ಕಾವ್ಯಪ್ರಕಾಶಕ್ಕೆ ಇರುವ ಪ್ರಾಶಸ್ತ್ಯ ಅದ್ವಿತೀಯವಾದುದು. ವೇದಾಂತ ದರ್ಶನದಲ್ಲಿ ಶಂಕರ ಭಗವತ್ಪಾದರ ಭಾಷ್ಯಗಳಿಗೆ ಯಾವ ಪರಮಮಹತ್ತ್ವವುಂಟೋ ಅದೇ ಮಹತ್ತ್ವವನ್ನು, ಅದೇ ಗೌರವವನ್ನು, ಆಸೇತುಹಿಮಾಚಲಪರ್ಯಂತ ಭಾರತವರ್ಷದ ವಿದ್ವಾಂಸರೆಲ್ಲ ಕಾವ್ಯಪ್ರಕಾಶ ಹುಟ್ಟಿದ ದಿನದಿಂದಲೂ ಅದಕ್ಕೆ ಸಲ್ಲಿಸುತ್ತ ಬಂದಿದ್ದಾರೆ. ಅಲಂಕಾರ ಶಾಸ್ತ್ರದ ಯಾವ ಚರ್ಚೆಗೇ ಆಗಲಿ ಮಮ್ಮಟನ ಮಾತೆಂದರೆ ಕಡೆಯ ಮಾತು. ಅಲಂಕಾರ ಶಾಸ್ತ್ರದಲ್ಲಿ ಮಮ್ಮಟನು ಚರ್ಚಿಸದ ವಿಷಯವಿಲ್ಲ; ನಿರ್ಣಯಿಸದ ವಿಷಯವೂ ಇಲ್ಲ. ಚರ್ಚೆಯೆಂದರೆ ಎಂತಹ ಚರ್ಚೆ! ಹಿಂದಿನವರ ಅಭಿಪ್ರಾಯಗಳೆಲ್ಲವನ್ನೂ ಒಂದೂ ಬಿಡದಂತೆ ಪ್ರತಿಪಾದಿಸಿ, ಕೂಲಂಕಷವಾಗಿ ಪರ್ಯಾಲೋಚಿಸಿ, ಸಂದೇಹಲೇಶಕ್ಕೂ ಅವಕಾಶವಿಲ್ಲದಂತೆ ಕೊನೆಯ ನಿರ್ಣಯವನ್ನು ಹೇಳುವ ಸಾಮರ್ಥ್ಯ ಮಮ್ಮಟನ ವೈಶಿಷ್ಟ್ಯ. ಸಾವಿರಾರು ವರ್ಷಗಳ ಬೆಳೆವಣಿಗೆಯಿಂದ ನಿಷ್ಕೃಷ್ಟವೂ ನಿರ್ದುಷ್ಟವೂ ಸೂಕ್ಷ್ಮವಿಚಾರ ಪ್ರಕಟನಾಪ್ರಗಲ್ಭವೂ ಆದ ಸಂಸ್ಕೃತ ದರ್ಶನಗಳ ಪರಿಭಾಷೆಯೇ ಮಮ್ಮಟನ ಭಾಷೆ. ಮಮ್ಮಟನ ಶಾಸ್ತ್ರೀಯ ವಿಚಾರಶೈಲಿಯಲ್ಲಿ ಒಂದು ಅನಗತ್ಯ ಚಕಾರಕ್ಕೂ ಎಡೆಯಿಲ್ಲ; ಒಂದು ಅಗತ್ಯ ಶಬ್ದಕ್ಕೂ ಲೋಪವಿಲ್ಲ. ಮಮ್ಮಟನಿಗಿಂತ ಹಿಂದಿನವರಾದ ಭಾಮಹ, ದಂಡಿ, ವಾಮನ, ಉದ್ಭಟ, ರುದ್ರಟ, ಆನಂದವರ್ಧನ, ಮಹಿಮಭಟ್ಟ, ಕುಂತಕ, ಅಭಿನವಗುಪ್ತ, ಈ ಎಲ್ಲ ಕಾವ್ಯಲಕ್ಷಣಕಾರರನ್ನೂ ಪುನಃ ಪುನಃ ಹತ್ತಾರು ಸಲ ಓದಿ ಮುಗಿಸಿ ಅವರ ವಿಶಿಷ್ಟ ವಿಚಾರಗಳನ್ನು ಮೆಚ್ಚಿ ತಲೆದೂಗಬಹುದು; ಅಲಂಕಾರಶಾಸ್ತ್ರದ ಇತಿಹಾಸವನ್ನು ಸ್ಥೂಲವಾಗಿ ಅರಿಯಬಹುದು. ಆದರೆ ಈ ಮಹಾಮೇಧಾವಿಗಳ ಮೂಲತತ್ತ್ವಗಳಲ್ಲಿ ಸಾಮ್ಯವಿರುವ ಅಂಶವೆಷ್ಟು? ವೈಷಮ್ಯವಿರುವ ಅಂಶವೆಷ್ಟು? ಯಾರ ಯಾರ ವಿಚಾರ ಎಷ್ಟೆಷ್ಟು ತಲಸ್ಪರ್ಶಿಯಾಗಿದೆ? ಯಾವ ಸಿದ್ಧಾಂತ ಎಲ್ಲಿಯ ವರೆಗೆ ಗ್ರಾಹ್ಯ, ಎಲ್ಲಿಂದಾಚೆಗೆ ಅಗ್ರಾಹ್ಯ? ಇವೇ ಮುಂತಾದ ಮೂಲಭೂತ ಪ್ರಶ್ನೆಗಳಿಗೆ ನಿಸ್ಸಂದಿಗ್ಧವಾದ ಮಾರ್ಗದರ್ಶನ ಮಾಡಬಲ್ಲ ಅದ್ಭುತ ಶಕ್ತಿ ಮಮ್ಮಟನಲ್ಲಿ ಮಾತ್ರ ಗೋಚರವಾಗುತ್ತದೆ. ಸಂಸ್ಕೃತ ಅಲಂಕಾರ ಗ್ರಂಥಗಳನ್ನೆಲ್ಲ ಓದಿದರೂ ಮಮ್ಮಟನನ್ನು ಅಭ್ಯಾಸ ಮಾಡದೆ ಹೋದರೆ ಸಂಸ್ಕೃತ ಲಾಕ್ಷಣಿಕರೆಲ್ಲರಿಗೂ ಒಪ್ಪಿಗೆಯಾಗುವಂತಹ ಕಾವ್ಯತತ್ತ್ವಗಳ ಸುಸ್ಪಷ್ಟ ಕಲ್ಪನೆಯಾಗುವುದು ಅಸಂಭವ. ಮಮ್ಮಟನ ಸಮರ್ಥ ವಿಮರ್ಶೆಯನ್ನು ಆದ್ಯಂತವಾಗಿ ಅಭ್ಯಾಸಮಾಡಿದ ಮೇಲೆ

ಉಳಿದ ಅಲಂಕಾರ ಗ್ರಂಥಗಳನ್ನು ಓದದಿದ್ದರೂ ಹಾನಿಯಿಲ್ಲವೆನ್ನಬಹುದು. ಏಕೆಂದರೆ ಅವನ ಪ್ರಮಾಣಗ್ರಂಥವಾದ ಕಾವ್ಯಪ್ರಕಾಶದಲ್ಲಿ ಹಿಂದಿನವರ ವಿಚಾರಗಳೆಲ್ಲವೂ ಯಥೋಚಿತವಾಗಿ ಐಕ್ಯಹೊಂದಿವೆ ; ಮುಂದಿನವರ ಗ್ರಂಥಗಳಿಗೆಲ್ಲ ಕಾವ್ಯಪ್ರಕಾಶವೇ ಮಾದರಿಯಾಗಿಬಿಟ್ಟಿದೆ. ಹೀಗೆ ಅಭೂತಪೂರ್ವವೂ ಅದ್ವಿತೀಯವೂ ಆದ 'ಕಾವ್ಯ ಪ್ರಕಾಶ'ವನ್ನು ಅರ್ಥಮಾಡಿಕೊಳ್ಳದವನು 'ಭಟ್ಟಾಚಾರ್ಯ' ಅಥವಾ ವಿದ್ವಾಂಸನೆನಿಸಲಾರನೆಂದು ಭಾರತೀಯ ವಿದ್ವಾಂಸರು ಸಾವಿರ ವರ್ಷಗಳಿಂದಲೂ ತಿಳಿಯುತ್ತ ಬಂದಿದ್ದಾರೆ. ಕಾವ್ಯಾಭ್ಯಾಸವು ಪೂರ್ಣತೆಯನ್ನು ಪಡೆದುದಕ್ಕೆ 'ಕಾವ್ಯಪ್ರಕಾಶ'ದ ಅಧ್ಯಯನವೇ ಒರೆಗಲ್ಲೆಂದು ಕಾಶ್ಮೀರದಿಂದ ಕನ್ಯಾಕುಮಾರಿಯ ವರೆಗೂ ರೂಢ ಮೂಲವಾದ ಭಾವನೆ ನಮ್ಮಲ್ಲಿ ಪರಂಪರಾಗತವಾಗಿದೆ. ಇಂತಹ ಏಕೈಕ ಕೃತಿಯನ್ನು ರಚಿಸಿದ ಮಮ್ಮಟನು ವಾಗ್ದೇವಿಯ ಅವತಾರವೆಂದೇ ಸಂಸ್ಕೃತಜ್ಞರು ಪರಿಗಣಿಸುತ್ತಾರೆ. ಒಂದು ಕಡೆ ಮಹಾಸಾಗರದಂತೆ ವಿಪುಲವೂ ಗಂಭೀರವೂ ಆದ ಸಂಸ್ಕೃತ ಕಾವ್ಯರಾಶಿಯನ್ನೆಲ್ಲ ಮಥಿಸಿ, ಇನ್ನೊಂದು ಕಡೆ ಅಷ್ಟೇ ದುಸ್ತರವೂ ಜಟಿಲವೂ ಆದ ಮಹಾಲಾಕ್ಷಣಿಕರ ಸಿದ್ಧಾಂತಗಳ ಸಾರವನ್ನೆಲ್ಲ ಸಂಗ್ರಹಿಸಿ, ಎರಡಕ್ಕೂ ನಿಷ್ಕೃಷ್ಟ ಸಾಮಂಜಸ್ಯವನ್ನೂ ಸುಂದರ ಸಮನ್ವಯವನ್ನೂ ಕಲ್ಪಿಸುವ ಕೆಲಸವೆಂದರೆ ಮಹಾಸಾಧನೆಯೇ ಸರಿ. ಭಾರತೀಯರ ರಸಜ್ಞತೆ ಮತ್ತು ವಿಚಾರಶಕ್ತಿಗಳು ಯಾವ ಎತ್ತರಗಳನ್ನು ಮುಟ್ಟಿದ್ದುವೆಂಬುದನ್ನು ಇಂದಿಗೂ ಗೌರೀಶಿಖರದಂತೆ ತೋರಿಸುವ ಉದ್ಗ್ರಂಥವೇ 'ಕಾವ್ಯಪ್ರಕಾಶ.' ಪಾಶ್ಚಾತ್ಯರ ಕೆಲವು ಗ್ರಂಥಗಳನ್ನೋದಿಕೊಂಡು ಕಾವ್ಯಮೀಮಾಂಸೆಯ ಪರಮರಹಸ್ಯವನ್ನು ತಾವೇ ಬಲ್ಲವರೆಂದುಕೊಳ್ಳುವ ಅತ್ಯಾಧುನಿಕ ಪಂಡಿತಂಮನ್ಯರಿಗೆ ಪ್ರಾಚೀನಭಾರತವು 'ಕಾವ್ಯಪ್ರಕಾಶ'ದ ಮೂಲಕ ಬುದ್ಧಿಪರೀಕ್ಷೆಯ ಆಹ್ವಾನವೀಯುವಂತಿದೆ. ಕಾವ್ಯದ ಬಾಹ್ಯಾಂಗಗಳಾದ (Form) 'ಅಲಂಕಾರ', 'ರೀತಿ'ಗಳ ವಿವೇಚನೆಯಲ್ಲಾಗಲಿ ಅಥವಾ ಅಂತರಂಗಗಳಾದ (Matter) 'ರಸ', 'ಧ್ವನಿ' ಗಳ ಪ್ರತಿಪಾದನೆಯಲ್ಲಾಗಲಿ, ಕಾವ್ಯಸ್ವರೂಪದ ನಿರ್ಣಯದಲ್ಲಾಗಲಿ, ಅಥವಾ ಕಾವ್ಯದೋಷಗಳ ನಿರೂಪಣೆಯಲ್ಲಾಗಲಿ, 'ಕಾವ್ಯ ಪ್ರಕಾಶ'ದಲ್ಲಿ ಉಕ್ತವಾಗದ ಅಥವಾ ಸೂಚಿತವಾಗದ ಅಂಶ ವಿಶ್ವದ ಕಾವ್ಯ ಮೀಮಾಂಸೆಯಲ್ಲೇ ದುರ್ಮಿಳವೆಂದು ಈ ಲೇಖಕನಿಗೆ ಕಂಡುಬಂದಿದೆ. ಸಂಸ್ಕೃತದಲ್ಲಿ ಪರಮ ಪ್ರತಿಷ್ಠೆಗೆ 'ಕಾವ್ಯಪ್ರಕಾಶ' ಪಾತ್ರವಾಗಲು ಅದರ ಪರಿನಿಷ್ಠಿತಾರ್ಥವೇ ಮುಖ್ಯ ಕಾರಣ, ಅಂಧ ಪರಂಪರೆಯಲ್ಲವೆಂಬುದನ್ನು ಮನಸ್ಸಿನಲ್ಲಿಟ್ಟು ಕಾವ್ಯಪ್ರಕಾಶದ ತತ್ತ್ವವನ್ನು ಆಮೂಲಾಗ್ರವಾಗಿ ಮನನ ಮಾಡಿದರೆ, ಇಂದಿನ ಸಾಹಿತ್ಯಕ್ಷೇತ್ರದಲ್ಲಿಯೂ ಕತ್ತಲೆ ದೂರವಾಗಿ ಬೆಳಕು ಮೂಡುವುದರಲ್ಲಿ ಸಂಶಯವಿಲ್ಲ. ಭಾರತದ ಮಹಾಮತಿಗಳೆಲ್ಲರೂ ಕಾವ್ಯಪ್ರಕಾಶಕ್ಕೆ ವ್ಯಾಖ್ಯಾನ ಬರೆಯುವುದೇ ಒಂದು ದೊಡ್ಡ

ಸಾಧನೆಯೆಂದು ಬಗೆಯುತ್ತಿದ್ದುದರಿಂದ ಮನೆಮನೆಯಲ್ಲಿಯೂ ವ್ಯಾಖ್ಯಾನ ಬರೆಯುತ್ತಿದ್ದುದು ಹಿಂದೆ ನಿತ್ಯಸಂಗತಿಯಾಗಿತ್ತು. 'ಕಾವ್ಯಪ್ರಕಾಶಸ್ಯ ಕೃತಾ ಗೃಹೇ ಗೃಹೇ ಟೀಕಾಸ್ತಥಾಪ್ಯೇಷ ತಥೈವ ದುರ್ಗಮಃ,' ಎಂದು ಮಹೇಶ್ವರ (ಒಬ್ಬ ಟೀಕಾಕಾರ) ನೆನ್ನುವ ಮಾತು ಪಂಡಿತಮಂಡಲಿಯ ಮನಃಪೂರ್ವಕ ಆದರದ ದ್ಯೋತಕ. ಮನೆಮನೆಯಲ್ಲಿ ಟೀಕೆಗಳು ಹುಟ್ಟಿದರೂ ಸಹ, ಕಾವ್ಯಪ್ರಕಾಶ ದುರ್ಗಮವಾಗಿಯೇ ಉಳಿದಿರುವುದು ಅದರ ಹಿರಿಮೆಯ ಮಾಪಕ. ಹೀಗೆ ನಮ್ಮ ಪೂರ್ವಿಕರ ಸಾಹಿತ್ಯಾಭಿರುಚಿಯನ್ನು ಅರಿಯುವುದಕ್ಕೂ ಅವರ ವಿಮರ್ಶನಸೂತ್ರಗಳಂತೆ ವಿಮರ್ಶನ ರೀತಿಯನ್ನು ಅಸಂದಿಗ್ಧವಾಗಿ ತಿಳಿಯುವುದಕ್ಕೂ ಮಮ್ಮಟನ 'ಕಾವ್ಯಪ್ರಕಾಶ'ವು ಕಲ್ಪವೃಕ್ಷದಂತಿರುವುದಲ್ಲದೆ ಅವರ ಶಾಸ್ತ್ರೀಯ ಚರ್ಚೆಯ ನಿಷ್ಕೃಷ್ಟ ಶೈಲಿಗೂ ಉತ್ತಮ ಉದಾಹರಣೆಯಾಗಿರುವುದರಿಂದ ಇದು ಕಾವ್ಯಮೀಮಾಂಸೆಯ ವ್ಯಾಜದಿಂದ ಶಾಸ್ತ್ರಮರ್ಯಾದೆಯನ್ನೆಲ್ಲ ಪರಿಚಯ ಮಾಡಿಕೊಡಬಲ್ಲ ಪ್ರವೇಶಗ್ರಂಥವೂ ಆಗಿದೆಯೆನ್ನಬಹುದು.

ಮಮ್ಮಟನು ಸಂತತವಾದ ಕಾವ್ಯಾನುಶೀಲನದಿಂದ 'ವಿಶದೀಭೂತ ಮನೋಮುಕುರ'ನಾದ ಸಹೃದಯಶಿರೋಮಣಿಯಷ್ಟೇ ಅಲ್ಲ; ಸರ್ವದರ್ಶನಗಳಲ್ಲಿಯೂ, ವ್ಯಾಕರಣಾದಿ ಸಕಲ ವಿದ್ಯೆಗಳಲ್ಲಿಯೂ ಪಾರಂಗತನಾದ ಪಂಡಿತಪ್ರಕಾಂಡ. ಮಮ್ಮಟನು ಲೀಲೆಯಿಂದ ಹೊರುವ ಪಾಂಡಿತ್ಯಕವಚವು ಅಪಂಡಿತರಿಗೆ ಅತಿ ಭಾರವೆನಿಸುವುದು ಸಹಜವಾಗಿದೆ. ಈ ಭಾರವನ್ನು ಕಂಡು ಅನೇಕರು ಹಿಂದೆಯೇ ಬೆದರಿದ್ದುಂಟು. ಮತ್ತೆ ಕೆಲವರು ರಸಿಕಂಮನ್ಯರು "ಕಾವ್ಯಪ್ರಕಾಶವೆಂಬ ಒರಟ ಯವನನು ಕಾವ್ಯವೆಂಬ ಕುಲಾಂಗನೆಯನ್ನು ಕುತ್ತಿಗೆಯೆಳೆದು ಹಿಂಸಿಸುವಾಗ ಅವಳ ಅವಸ್ಥೆ ಶೋಚನೀಯವಾಗುತ್ತದೆ" ("ಕಾವ್ಯಪ್ರಕಾಶೋ ಯವನೋ ಕಾವ್ಯಾಲೀ ಚ ಕುಲಾಂಗನಾ | ಅನೇನ ಪ್ರಸಭಾಕೃಷ್ಟಾ ಕಷ್ಟಾಮೇಷಾಶ್ನುತೇ ದಶಾಮ್ ||") ಎಂದೂ, "ಕಾವ್ಯಪ್ರಕಾಶಕಾರನು ಕಾವ್ಯರಮಣಿಯನ್ನು ಚುಂಬಿಸಲಾರದೆ ಮತ್ತೆ ಮತ್ತೆ ಆಕೆಯ ಕೋಮಲ ತುಟಿಗಳನ್ನು ಕಚ್ಚುವ ನಪುಂಸಕ"ನೆಂದೂ ಟೀಕಿಸಿದ್ದುಂಟು. ವಿಶಿಷ್ಟಕಾವ್ಯಭಾಗಗಳ ಸರಸವಿಮರ್ಶೆಯಷ್ಟೇ ಕಾವ್ಯವಿಮರ್ಶಕನ ಕೆಲಸವಿರಬಹುದು. ಆದರೆ ಕಾವ್ಯಮೀಮಾಂಸಾಶಾಸ್ತ್ರವನ್ನು ಬರೆಯುವಾತನು ಆ ವಿಮರ್ಶೆಗಳ ಮೂಲದಲ್ಲಿರುವ ತತ್ತ್ವಗಳನ್ನು ನಿರ್ವಚನ ಮಾಡಿದಲ್ಲದೆ ಕೃತಕೃತ್ಯನಾಗಲಾರ. ಮಮ್ಮಟನನ್ನು ಕೇವಲ ವಿಮರ್ಶಕನೆಂದು ತಿಳಿದರೆ ಮೇಲೆ ಹೇಳಿದಂತಹ ಅಸಭ್ಯ ಟೀಕೆಗಳಿಗೆ ಆಸ್ಪದ ದೊರೆಯಬಹುದಾದರೂ, ವಸ್ತುತಃ ಮಮ್ಮಟನು ವಿಮರ್ಶನ ಶಾಸ್ತ್ರಕಾರನೆಂಬ ಮಾತನ್ನೂ ನೆನಪಿನಲ್ಲಿಟ್ಟರೆ ಅವನ ಶಾಸ್ತ್ರನಿಶಿತ ಸರಣಿಯ ಅನಿವಾರ್ಯತೆಯೂ ಸಾಮಂಜಸ್ಯವೂ ವ್ಯಕ್ತವಾಗುತ್ತವೆ. ಮಮ್ಮಟನು ರಸಿಕನೇ,

ಅಥವಾ ಅರಸಿಕನೇ ಎಂಬುದನ್ನು ಅವನು ಉತ್ತಮವೆಂದು ಆರಿಸಿಕೊಂಡಿರುವ ಲಕ್ಷ್ಯಗಳ ಮೇಲಿಂದ ಮಾತ್ರ ನಿರ್ಣಯಿಸಬೇಕಾದುದು; ಹೇಯವೆಂದು ಅವನಾಯ್ದು ಕೊಂಡಿರುವ ಲಕ್ಷ್ಯಗಳ ಮೇಲಿಂದಲ್ಲ. ಕಾವ್ಯಪ್ರಕಾಶಕಾರನ ದೋಷಪ್ರಕರಣ ಬಹಳ ದೊಡ್ಡದಾಗಿರುವುದರಿಂದಲೂ, ಕಾಳಿದಾಸಾದಿ ಮಹಾಕವಿಗಳನ್ನೂ ಬಿಡದೆ ನೂರಾರು ದೋಷಲಕ್ಷ್ಯಗಳನ್ನೆತ್ತಿಕೊಂಡಿರುವುದರಿಂದಲೂ ಮಮ್ಮಟನನ್ನು "ದೋಷೈಕದೃಷ್ಟಿ"ಯೆಂದು ಭಾವಿಸುವುದು—ಹಿಂದೆಯೇ ಅಮರುಶತಕದ ಟೀಕಾ ಕಾರನಾದ ಅರ್ಜುನವರ್ಮ ಮುಂತಾದವರು ಹೀಗೆ ಭಾವಿಸಿದ್ದರು—ಯೋಗ್ಯ ವಿಮರ್ಶೆಯೆನಿಸಲಾರದು. ಒಳ್ಳೆಯ ಹೊಸ ರೇಶಿಮೆ ವಸ್ತ್ರದಲ್ಲಿ ಸಣ್ಣ ಕೊಳೆಯೂ ಎದ್ದು ಕಾಣುವಂತೆ ಮಾಸಿದ ಹಳೆ ಬಟ್ಟೆಯಲ್ಲಿ ಕಾಣಲಾರದು. ದೋಷದ ಸುಸ್ಪಷ್ಟ ಕಲ್ಪನೆ ಬರಬೇಕಾದರೆ ಪ್ರಾಯಃ ನಿರ್ದುಷ್ಟನಿರ್ಮಾಣಪ್ರಸಿದ್ಧರಾದ ಮಹಾಕವಿ ಗಳಲ್ಲಿ ಆಕಸ್ಮಿಕವಾಗಿ ತಲೆದೋರುವ ದೋಷಗಳನ್ನು ಬೆರಳುಮಾಡಿ ತೋರಿಸುವುದು ಅತ್ಯಂತ ಉಪಯುಕ್ತವಾಗುತ್ತದೆ. ಮಮ್ಮಟನ ದೋಷವಿವೇಚನೆಯನ್ನು ಈ ದೃಷ್ಟಿ ಯಿಂದ ಪರಿಶೀಲಿಸಬೇಕು. ಅವನನ್ನು ಕೇವಲ ರಂಧ್ರಾನ್ವೇಷಿಯೆಂದು ಟೀಕಿಸುವುದು ಸರಿಯಲ್ಲ. ಕಾವ್ಯಮೀಮಾಂಸಾಶಾಸ್ತ್ರದಲ್ಲಿ ಗುಣಾಲಂಕಾರಾದಿವಿವೇಚನೆಗಳಿಗೂ ಪೂರ್ವಭಾವಿಯಾಗಿ ದೋಷನಿರೂಪಣೆ ಅಗತ್ಯವೆಂದು ಭಾವಿಸುವುದು ಸಂಸ್ಕೃತ ಲಾಕ್ಷಣಿಕರೆಲ್ಲರ ಸಂಪ್ರದಾಯ. ರಸ, ಧ್ವನಿ, ಗುಣ, ಅಲಂಕಾರಗಳನ್ನು ಅವನು ಎಷ್ಟು ಸಮಗ್ರವಾಗಿ ಪ್ರತಿಪಾದಿಸಿದನೋ ಅಷ್ಟೇ ಸಮಗ್ರವಾಗಿ ದೋಷಪ್ರಕರಣ ವನ್ನೂ ನಿರೂಪಿಸಿರುವುದು ಮಮ್ಮಟನಿಗೆ ಭೂಷಣವೇ ಹೊರತು ದೂಷಣವಲ್ಲ. ಆದರೆ ರಸಗುಣಾಲಂಕಾರಾದಿಗಳಿಗೆ ಮಮ್ಮಟನು ಆರಿಸಿಕೊಂಡಿರುವ ಉದಾಹರಣೆಗಳು ಅವನ ಅರಸಿಕತೆಯನ್ನು ತೋರಿಸುತ್ತವೆಂದರೆ ಅದು ಬೇರೆಯ ಮಾತು. ಇಂತಹ ಲಕ್ಷ್ಯಗಳು ನಾನೂರೈವತ್ತು. ಇವುಗಳಲ್ಲಿ ಕಾಲುವಾಸಿ ಉದಾಹರಣೆಗಳು ರಾಜ ಸ್ತುತಿ ಇಲ್ಲವೆ ಸ್ತ್ರೀವರ್ಣನೆಗೆ ಮಾತ್ರ ಮೀಸಲಾದ ಚಾಟುಪದ್ಯಗಳೆಂದರೂ ಉಳಿದ ಮುಕ್ಕಾಲುವಾಸಿ ಉದಾಹರಣೆಗಳು ಪ್ರಸಿದ್ಧ ಮಹಾಕವಿಗಳ ಉತ್ತಮ ಕೃತಿಗಳಿಂದಾಯ್ದುಕೊಂಡ ಸೂಕ್ತಿರತ್ನಗಳಾಗಿರುವುದರಿಂದ ಮಮ್ಮಟನು ಅರಸಿಕ ನೆಂದು ನಿರ್ಣಯಿಸಲಾಸ್ಪದವಿಲ್ಲ. ಇಂದಿನ ಅಭಿರುಚಿಗೂ ಮಮ್ಮಟನ ಅಭಿರುಚಿಗೂ ಮಮ್ಮಟನ ಕಾಲದ ಅಭಿರುಚಿಗೂ ಐಕ್ಯವನ್ನು ಆರೋಪಿಸುವುದು ಕೂಡ ಅಸಂಗತ. ಮಮ್ಮಟನಲ್ಲಿ ಒಂದು ವೇಳೆ ಇಂದಿನ ಅಭಿರುಚಿಗೆ ನೀರಸವಾಗಿ ಕಾಣುವ ಅಂಶ ಕಂಡರೆ ಅದನ್ನು ಮಮ್ಮಟನ ಕಾಲದ ಅಭಿರುಚಿಯ ಪ್ರತಿಬಿಂಬವೆನ್ನಬೇಕೇ ಹೊರತು ಮಮ್ಮಟನ ಅಭಿರುಚಿಯೆಂದು ಭ್ರಮಿಸಲಾಗದು. ಇನ್ನು ಮೂರನೆಯದಾಗಿ, ಉತ್ತಮ ಕಾವ್ಯವನ್ನು ಅಧಮಕಾವ್ಯವೆಂದು ಉದಾಹರಿಸುವ ಮಮ್ಮಟನಿಗೆ

ರಸಿಕತೆ ಸಾಲದೆಂಬ ಅಭಿಪ್ರಾಯವೂ ಉಂಟು. ಕಾವ್ಯಪ್ರದೀಪಕಾರ ಮತ್ತು ಜಗನ್ನಾಥ ಪಂಡಿತರು ಈ ಬಗೆಯ ಟೀಕೆಯನ್ನು ಮಮ್ಮಟನ ಮೇಲೆ ಮಾಡಿದ್ದಕ್ಕೆ ತಮ್ಮ ಸಮ್ಮತಿಯನ್ನಿತ್ತು ಪ್ರೊ|| ತೀ. ನಂ. ಶ್ರೀಕಂಠಯ್ಯನವರು ಹೀಗೆ ಬರೆದಿದ್ದಾರೆ (ಭಾರತೀಯ ಕಾವ್ಯಮೀಮಾಂಸೆ, ಪು. ೯೫) :—

"ರಸಿಕತೆ ಸಾಲದೆಂಬ ಅಪವಾದಕ್ಕೇನೋ ಅವನು ಸರ್ವಥಾ ಅಪಾತ್ರನೆಂದು ಹೇಳುವುದು ಕಷ್ಟ. ಅವನು ಅಲ್ಲಗಳೆಯುವ ಪದ್ಯಗಳಲ್ಲಿ ಕೆಲವು ನಮಗೆ ಉತ್ತಮವಾಗಿ ಕಾಣುತ್ತವೆ; ಧ್ವನಿಕಾವ್ಯವೆಂದು ಎತ್ತಿ ಹಿಡಿಯತಕ್ಕವುಗಳಲ್ಲಿ ಕೆಲವು ಸೌಂದರ್ಯ ವಿರಹಿತವಾಗಿ ಕಾಣುತ್ತವೆ. ಇದಕ್ಕೆ ದೃಷ್ಟಿಭೇದವೂ ಕಾಲಪರಿವರ್ತನೆಯಿಂದ ಅಭಿರುಚಿ ವ್ಯತ್ಯಾಸ ಹೊಂದಿರುವುದೂ ಕೆಲಮಟ್ಟಿಗೆ ಕಾರಣವಾಗಿರಬಹುದು. ಆದರೆ ಈ ಸಂದರ್ಭದಲ್ಲಿ, ಹಿಂದಿನವರ ಆಕ್ಷೇಪಣೆಗೇ ಅವಕಾಶಕೊಟ್ಟ ಒಂದು ನಿದರ್ಶನ ವನ್ನು ಇಲ್ಲಿ ಕೊಡಬೇಕೆನ್ನಿಸುತ್ತದೆ. ಹಯಗ್ರೀವನೆಂಬ ದೈತ್ಯನ ಪ್ರತಾಪ ಎಷ್ಟರ ಮಟ್ಟಿಗಿತ್ತೆಂಬುದನ್ನು ವರ್ಣಿಸುವ ಒಂದು ಪದ್ಯ ಹೀಗಿದೆ :—

ವಿನಿರ್ಗತಂ ಮಾನದಮಾತ್ಮಮಂದಿರಾತ್
ಭವತ್ಯುಪಶ್ರುತ್ಯ ಯದೃಚ್ಛಯಾಪಿ ಯಂ |
ಸಸಂಭ್ರಮೇಂದ್ರದ್ರುತಪಾತಿತಾರ್ಗಲಾ
ನಿಮೀಲಿತಾಕ್ಷೀವ ಭಿಯಾಮರಾವತೀ ||

(ಕನ್ನಡ ಕಾವ್ಯಪ್ರಕಾಶ, ಪು. ೧೮)

ಇದರಲ್ಲಿ ವ್ಯಂಗ್ಯಾರ್ಥವೇನೂ ಸ್ಫುಟವಾಗಿ ತೋರುವುದಿಲ್ಲವೆಂದೂ ಆದಕಾರಣ ಇದು ಅಧಮಕಾವ್ಯವೆಂದೂ ಮಮ್ಮಟನ ಅಭಿಪ್ರಾಯ. ವಾಚ್ಯಾಲಂಕಾರವನ್ನು ಪ್ರಧಾನವಾಗಿ ಉಳ್ಳ ವಾಚ್ಯಚಿತ್ರಕ್ಕೆ ಇದನ್ನು ಉದಾಹರಣೆಯಾಗಿ ಕೊಡುತ್ತಾನೆ. (ಕಾವ್ಯಪ್ರಕಾಶ, i. ೫ ಪ್ರಯೋಗ). ಆದರೆ ಮಮ್ಮಟನ ಈ ನಿರ್ಣಯವು 'ಕಾವ್ಯ ಪ್ರದೀಪ'ಕಾರನಿಗೆ ರುಚಿಸಿಲ್ಲ ." ಇಲ್ಲಿ ಉತ್ಪ್ರೇಕ್ಷೆ ಅರ್ಥಾಲಂಕಾರ. ಆದರೆ [ಕವಿಗೆ] ರಸಾದಿಯಲ್ಲಿ ತಾತ್ಪರ್ಯವಿರಲಿಲ್ಲವೆಂಬುದಾಗಲಿ, ಅದು ಅಸ್ಫುಟತರವೆಂಬುದಾಗಲಿ ಹೇಗೋ, ತಿಳಿಯದು. ಹಯಗ್ರೀವನೇ ಇಲ್ಲಿ ವರ್ಣನೀಯ ವಿಷಯ; ಅವನ ಪ್ರಭಾವವು ಸ್ಫುಟವಾಗಿ ಪ್ರತೀತವಾಗುತ್ತದೆ" (ಕಾವ್ಯಪ್ರದೀಪ, ಪು. ೧೯). ಈ ಪದ್ಯಜಾತಿಯನ್ನು "ಅಧಮ" ಕಾವ್ಯವೆಂದು ಕರೆದದ್ದಕ್ಕಾಗಿ ಮಮ್ಮಟನು ಜಗನ್ನಾಥಪಂಡಿತನ ಚಾವಟಿಯೇಟಿಗೂ ಸಿಕ್ಕಿದ್ದಾನೆ (ರಸಗಂಗಾಧರ, ಪು. ೨೦).

ಇದರ ಅಡಿಟಿಪ್ಪಣಿಯಲ್ಲಿ ". . . ಈ ಪದ್ಯದಲ್ಲಂತೂ ಅದು (= ಕವಿ ತಾತ್ಪರ್ಯವು) ರಸಭಾವನಿರಪೇಕ್ಷವಾಗಿರಲಿಲ್ಲವೆಂದು ದೃಢವಾಗಿ ಹೇಳಬಹುದು" ಎಂದು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಪ್ರಸ್ತುತಪದ್ಯದಲ್ಲಿಯ

ರಸಾದಿಯನ್ನು ಕುರಿತು ಪ್ರೊ|| ತೀ. ನಂ. ಶ್ರೀಕಂಠಯ್ಯನವರು ಟಿಪ್ಪಣಿಯಲ್ಲಿ ಹೀಗೆ ನಿರೂಪಿಸಿದ್ದಾರೆ—"ಈ ಪದ್ಯದಲ್ಲಿರುವ ಉತ್ಪ್ರೇಕ್ಷಾಲಂಕಾರದಿಂದ ಭೀತಿಭಾವವು ಸ್ಫುಟವಾಗಿ ಅಭಿವ್ಯಕ್ತವಾಗುತ್ತದೆ. 'ಭಿಯಾ' (ಭೀತಿಯಿಂದ) ಎಂದು ಭಾವದ ಹೆಸರನ್ನೂ ಕವಿ ಹೇಳಿಬಿಟ್ಟಿರುವುದರಿಂದ ಸೂಚ್ಯವಾಗಬೇಕಾದದ್ದು ವಾಚ್ಯವಾಯಿತೆಂಬ ಆಕ್ಷೇಪಣೆಯೇಳಬಹುದು. ಈ ದೋಷವನ್ನು ಒಪ್ಪಿಕೊಂಡರೂ ಬಾಧಕವಿಲ್ಲ; ಏಕೆಂದರೆ ಇಲ್ಲಿ ಭಯವು ಎಂತಿದ್ದರೂ ತನ್ನಲ್ಲೇ ವಿಶ್ರಾಂತವಾಗದೆ ಹಯಗ್ರೀವನ ಪೌರುಷಾತಿಶಯವನ್ನು ಸೂಚಿಸಿ ಭಾವಧ್ವನಿಗೆ ವ್ಯಂಜಕವಾಗಿಯೇ ನಿಲ್ಲುತ್ತದೆ. ಅರ್ಥಪ್ರತೀತಿಗೆ ಈ ಕೊನೆಯ ಭಾವವೇ ವಿಶ್ರಾಂತಿಸ್ಥಾನ."

ಇದನ್ನು ಸ್ವಲ್ಪ ವಿವರವಾಗಿ ನೋಡೋಣ. ಈ ಲಕ್ಷ್ಯವನ್ನು ಕೊಡುವ ಮುಂಚೆ ಆರಂಭದಲ್ಲಿಯೇ ಮಮ್ಮಟನು—'ಕಾವ್ಯದಲ್ಲಿ ಶಬ್ದ, ಅರ್ಥ, ಎರಡೂ ತಮ್ಮ ಪ್ರಾಧಾನ್ಯವನ್ನು ಕಳೆದುಕೊಂಡು ರಸಪ್ರತೀತಿಗೆ ಅನುಕೂಲಿಸುವ ಕ್ರಿಯೆಯಲ್ಲಿ ಮಾತ್ರ ನಿರತವಾಗಿಬಿಡುತ್ತವೆ.' (ಪು. ೬) ಎಂದಿದ್ದಾನೆ. ಮುಂದೆ ಅರ್ಥಾಲಂಕಾರ ಪ್ರಕರಣವನ್ನು ಆರಂಭಮಾಡುವಾಗಲೇ (ಉಲ್ಲಾಸ—೧೦)—"ರಸಾದಿವ್ಯಂಗ್ಯಾರ್ಥವೂ ಅಲಂಕಾರಾಂತರಗಳೂ ಯಾವಾಗಲೂ ಜತೆಜತೆಗೇ ಇರತಕ್ಕವುಗಳು. ರಸಾದಿರಹಿತವಾದ ಅಲಂಕಾರಗಳನ್ನು ಉದಾಹರಿಸಿದರೆ ವಿರಸತ್ವವೆಂಬ ದೋಷವೇ ತಪ್ಪಲಾರದು. ಆದ್ದರಿಂದ ರಸಾದಿ ವ್ಯಂಗ್ಯಾರ್ಥದ ಅಸ್ತಿತ್ವವನ್ನು ಗಣನೆಗೆ ತಾರದೆ ಅಲಂಕಾರಗಳನ್ನು ಉದಾಹರಿಸಲಾಗಿದೆ. ಪೂರ್ವಾಪರ ವಿರೋಧ ಬಂದಿತೆಂದು ಶಂಕಿಸಲಾಗದು" ಎನ್ನುತ್ತಾನೆ. ಇವೆರಡನ್ನೂ ಅನುಲಕ್ಷಿಸಿ ಅರ್ಥಮಾಡಿದರೆ ಪ್ರಸ್ತುತ ಪದ್ಯವು ಅವ್ಯಂಗ್ಯ ಅಥವಾ ಅಸ್ಫುಟವ್ಯಂಗ್ಯವೆನಿಸುವುದು ರಸಾದಿವ್ಯಂಗ್ಯದ ಅಭಾವದಿಂದಲ್ಲ; ಆದರೆ ವ್ಯಂಗ್ಯವಾದ ವಸ್ತು, ಅಲಂಕಾರಗಳ ಅಭಾವದಿಂದ ಮಾತ್ರ ಎಂಬ ಅಭಿಪ್ರಾಯಕ್ಕೆ ಬರಬಹುದು. ಮಮ್ಮಟನ ಸಿದ್ಧಾಂತದಲ್ಲಿ ಸುಂದರವಲ್ಲದ್ದು ಕಾವ್ಯವೇ ಅಲ್ಲ. ಸುಂದರವಾದ ಕಾವ್ಯದ ಮೂರು ಬಗೆಗಳೆಂದರೆ—**(೧) ಧ್ವನಿ, (೨) ಗುಣೀಭೂತ ವ್ಯಂಗ್ಯ,** ಮತ್ತು **(೩) ಚಿತ್ರ**. ಸೌಂದರ್ಯವನ್ನು ವ್ಯಂಗ್ಯಮೂಲ ಮತ್ತು ವಾಚ್ಯಮೂಲವೆಂದು ವಿಭಾಗಿಸಿಕೊಳ್ಳಬಹುದು. ಯಾವ ವಿಶಿಷ್ಟ ಲಕ್ಷ್ಯದಲ್ಲಿಯೇ ಆಗಲಿ, ಎರಡರ ಸಂಸ್ಪರ್ಶವೂ ಇರುವುದು ಸಹಜ. ಆದರೆ ವ್ಯಂಗ್ಯವಾದ ವಸ್ತು, ಅಲಂಕಾರ ರಸಾದಿಗಳಿಂದ ಬರುವ ಚಮತ್ಕಾರ ವಾಚ್ಯಮೂಲವಾದ ಅಲಂಕಾರಗಳ ಚಮತ್ಕಾರಕ್ಕಿಂತ ಆಕರ್ಷಕವಾಗಿದ್ದರೆ ಧ್ವನಿಕಾವ್ಯ; ವ್ಯಂಗ್ಯಮೂಲ ಚಮತ್ಕಾರಕ್ಕಿಂತಲೂ ವಾಚ್ಯಮೂಲಸೌಂದರ್ಯವೇ ಆಕರ್ಷಕವಾಗಿದ್ದರೆ ಗುಣೀಭೂತ ವ್ಯಂಗ್ಯಕಾವ್ಯ. ವಾಚ್ಯಮೂಲ ಚಮತ್ಕಾರವೊಂದೇ ಅತಿ ಪ್ರಬಲವಾಗಿದ್ದು ವ್ಯಂಗ್ಯಮೂಲ ಚಮತ್ಕಾರ ಅತಿದುರ್ಬಲವಾಗಿಬಿಡುವುದಾದರೆ ಚಿತ್ರಕಾವ್ಯ. ಆದ್ದರಿಂದ ಯಾವುದೇ

ನಿಯತ ಲಕ್ಷ್ಯವನ್ನು ನಿಯತ ಕಾವ್ಯಪ್ರಕಾರಗಳಲ್ಲಿ ವರ್ಗೀಕರಿಸುವ ಮೊದಲು ಕವಿಗೆ ಯಾವ ಅರ್ಥದಲ್ಲಿ ನಿಸ್ಸಂದಿಗ್ಧವಾಗಿ 'ತಾತ್ಪರ್ಯ' ಅಥವಾ ಪ್ರಾಧಾನ್ಯವಿವಕ್ಷೆಯಿದೆ ಯೆಂಬುದನ್ನು ನಿರ್ಧರಿಸಬೇಕಾಗುತ್ತದೆ. ಧ್ವನಿಕಾವ್ಯವೆನಿಸಲು ಒಂದು ವ್ಯಂಗ್ಯಾರ್ಥ ಅತಿಸ್ಫುಟವಾಗಿದ್ದರೂ ಸಾಲದು; ಅಸ್ಫುಟವಾಗಿದ್ದರೂ ಸಾಲದು (ಇದು ಗುಣೀ ಭೂತ ವ್ಯಂಗ್ಯವೆಂದೇ ೫ ನೆಯ ಉಲ್ಲಾಸದಲ್ಲಿ ನಿರ್ಣಯಿಸಲಾಗಿದೆ); ವಾಚ್ಯಾಂಶ ಕ್ಕಿಂತ ಪ್ರಧಾನವೆಂದು ಸ್ಪಷ್ಟವಾಗಿ ತೋರುತ್ತಿರಬೇಕು. ಅಮುಖ್ಯವಾದ ವ್ಯಂಗ್ಯಾರ್ಥ ಅತಿಸ್ಫುಟವಾಗಿದ್ದ ಮಾತ್ರಕ್ಕೆ ಧ್ವನಿಕಾವ್ಯವೆನಿಸುವುದಿಲ್ಲ. ರಸಾದಿ ವ್ಯಂಗ್ಯಾಂಶವು ಸುತರಾಂ ಇಲ್ಲದ ಕಾವ್ಯವೇ ಇಲ್ಲವೆಂದಮೇಲೆ ಅದು (=ರಸಾದಿ) ನಿಯತ ಲಕ್ಷ್ಯದಲ್ಲಿ ಪ್ರಧಾನವೇ, ಅಪ್ರಧಾನವೇ, ಅಥವಾ ಅಸ್ಫುಟಪ್ರಾಯವೇ ಎಂದು ನಿರ್ಣಯಿಸುವ ಕೆಲಸ ವಿಮರ್ಶಕನ ಮೇಲೆ ಬೀಳುತ್ತದೆ. ಮಹಾಕವಿಗಳ ಲಕ್ಷ್ಯಗಳನ್ನು ಪರೀಕ್ಷಿಸುವಾಗ ಸಹೃದಯರ ರುಚಿಭೇದದಿಂದ ಅಭಿಪ್ರಾಯ ಭೇದ ಗಳು ಅನಿವಾರ್ಯವಾಗುತ್ತವೆ. ಧ್ವನಿಕಾವ್ಯವೆಂದು ಒಬ್ಬ ಸಹೃದಯನು ಹೇಳುವುದನ್ನು ಇನ್ನೊಬ್ಬನು ಗುಣೀಭೂತವ್ಯಂಗ್ಯವೆಂದೂ ಮತ್ತೊಬ್ಬನು ಚಿತ್ರವೆಂದೂ ಹೇಳುವ ಪರಿಸ್ಥಿತಿ ತಪ್ಪುವುದಿಲ್ಲ. ಮೊದಲನೆಯವನಿಗೆ ರಸಾದಿಯೇ ಉಳಿದ ಅಲಂಕಾರಾದಿಗಳಿ ಗಿಂತ ಪ್ರಧಾನವೆಂದು ತೋರಿದರೆ, ಎರಡನೆಯವನಿಗೆ ಅಲಂಕಾರಾದಿಗಳೇ ರಸಾದಿ ಗಳಿಗಿಂತ ಪ್ರಧಾನವೆನಿಸಬಹುದು. ಮೂರನೆಯವನಿಗೆ ರಸಾದಿಗಳ ಕಲ್ಪನೆಯೇ ಬಾರದಿರಬಹುದು. ಹೀಗೆ ಉದಾಹರಣೆಗಳಲ್ಲಿ ಸಾಂಕರ್ಯ ಬಂದರೆ ಶಾಸ್ತ್ರಸ್ಥಿತಿಗೆ ಸಲ್ಲದೆಂಬುದು ಮಮ್ಮಟನಿಗೆ ಚೆನ್ನಾಗಿ ಗೊತ್ತು. ಅಭಿಪ್ರಾಯಭೇದಕ್ಕೆ ಅವಕಾಶವೇ ಬಾರದಂತಹ ಲಕ್ಷ್ಯಗಳನ್ನು ಕೊಡಬೇಕೆಂದು ಅವನು ಹೊರಟಿದ್ದಾನೆ. ಅದಕ್ಕಾಗಿಯೇ ಅವನು ಧ್ವನಿಕಾವ್ಯ ಮತ್ತು ಗುಣೀಭೂತವ್ಯಂಗ್ಯಕಾವ್ಯಗಳನ್ನು ಉದಾಹರಿಸುವಾಗ (ರಸಾದಿ, ವಸ್ತು, ಅಲಂಕಾರಗಳೆಂಬ) ವ್ಯಂಗ್ಯತ್ರಯದಲ್ಲಿ ಪ್ರಾಣರೂಪಿಯಾಗಿರು ವಂತಹ ರಸಾದಿ ವ್ಯಂಗ್ಯವನ್ನೇ ಕೈಬಿಡುತ್ತಾನೆ. ರಸಾದಿ ವ್ಯಂಗ್ಯದ ವಿಷಯದಲ್ಲಿ ಅಭಿ ಪ್ರಾಯಭೇದಕ್ಕೆಡೆ ತಪ್ಪದೆಂಬುದೇ ಅವನ ಈ ವಿಚಿತ್ರವೆನಿಸಬಹುದಾದ ವರ್ತನೆಗೆ ಕಾರಣ. ರಸಾದಿಯ ವಿಮರ್ಶೆಯನ್ನು ಮಾಡುತ್ತ ಹೊರಟರೆ—ಕಾವ್ಯವಿಮರ್ಶೆಯಲ್ಲಿ ಇದು ಅತ್ಯಂತ ಅಗತ್ಯ—ಲಕ್ಷ್ಯಗಳಲ್ಲೆಲ್ಲೂ ಕಾವ್ಯದ ಪ್ರಕಾರಭೇದಗಳು ಗೋಚರಿ ಸುವ ಬದಲು, ಪರ್ಯವಸಾನದಲ್ಲಿ ರಸತಾತ್ಪರ್ಯವೊಂದೇ ಭಾಸವಾದೀತು; ಎಲ್ಲವೂ ಧ್ವನಿಮಯವಾಗಿಯೇ ಕಂಡೀತು. ಮಮ್ಮಟನು ಇದನ್ನು ತಪ್ಪೆನ್ನುವುದಿಲ್ಲ. ಕಾವ್ಯದ ಅಲೌಕಿಕ ಚಮತ್ಕಾರದ ರಹಸ್ಯವೇ ಇದು. ಆದರೆ ಕಾವ್ಯವಿಭಾಗದ ಕಲ್ಪನೆ ಯುಂಟಾಗಬೇಕಾದರೆ ರಸಪ್ರತೀತಿಯ ದೃಷ್ಟಿಯನ್ನು ತಾತ್ಕಾಲಿಕವಾಗಿ ಬದಿಗಿರಿಸ ಬೇಕೆಂಬುದೇ ಅವನ ಅಭಿಸಂಧಿ. ಹಿಂದೆ ಆನಂದವರ್ಧನನೂ ಹೀಗೆಯೇ ಧ್ವನಿಯ

ಅಸ್ತಿತ್ವವನ್ನು ಸ್ಥಾಪಿಸಲು ರಸಧ್ವನಿಯ ಉದಾಹರಣೆಗಳನ್ನು ಕೊಡುವ ಬದಲು ವಸ್ತುಧ್ವನಿಯ ಉದಾಹರಣೆಗಳನ್ನೇ ಕೊಟ್ಟಿದ್ದನು. ಮಮ್ಮಟನೂ ಅದೇ ಮಾರ್ಗವನ್ನನುಸರಿಸಿ ಧ್ವನಿಕಾವ್ಯ, ಮತ್ತು ಗುಣೀಭೂತವ್ಯಂಗ್ಯಕಾವ್ಯಗಳಿಗೆ ವಸ್ತುಧ್ವನಿಯ ಲಕ್ಷ್ಯಗಳನ್ನೇ ಉದಾಹರಿಸಿ ಅನಂತರ ಚಿತ್ರಕಾವ್ಯಕ್ಕೆ ಉದಾಹರಣೆಯೆಂದು ಈ ಸುಂದರ ಉತ್ಪ್ರೇಕ್ಷೆಯ ಲಕ್ಷ್ಯವನ್ನು ಸೂಚಿಸಿದ್ದಾನೆ.

ಈ ದೃಷ್ಟಿಯಿಂದ ಮಮ್ಮಟನ ಅಭಿಪ್ರಾಯವನ್ನು ಗಮನಿಸಿದರೆ, ಅಲಂಕಾರಗಳ ಚಮತ್ಕಾರ ಅತಿಶಯವಾಗಿರುವಾಗ, ಅಲಂಕಾರದ ಚಮತ್ಕಾರವನ್ನನುಲಕ್ಷಿಸಿ ಅದನ್ನು ಚಿತ್ರಕಾವ್ಯವೆಂದೇ ತಿಳಿಯಬೇಕೆಂಬ ಸಿದ್ಧಾಂತ ಸ್ಪಷ್ಟವಾಗುತ್ತದೆ. ಲಕ್ಷ್ಯದಲ್ಲಿ ವ್ಯಂಗ್ಯಾರ್ಥ ಪ್ರಧಾನವಾಗುವುದೆಂದರೆ ಸುಮ್ಮನೆ ಪ್ರತೀತಿವಿಷಯವಾಗುವುದೆಂದರ್ಥವಲ್ಲ, ವ್ಯಂಗ್ಯಾರ್ಥವಿಲ್ಲದೆ ಕವಿಯ ವಿವಕ್ಷೆಯೇ ವಿಸಂಗತವಾಗುವಂತಿರುವುದೆಂದಭಿಪ್ರಾಯ. ಉದಾಹರಣೆಗೆ, ವ್ಯಂಗ್ಯಾರ್ಥ ಪ್ರಧಾನವಾಗಿರುವ 'ನಿಶ್ಶೇಷಚ್ಯುತಚಂದನಂ . . . (ಪು. ೧೫)' ಎಂಬ ಲಕ್ಷ್ಯದಲ್ಲಿ 'ನೀನು ಹೋಗಲಿಲ್ಲ' ಎಂಬ ವಾಚ್ಯಾರ್ಥವನ್ನಷ್ಟನ್ನೇ ಗ್ರಹಿಸಿದರೆ 'ಹೋಗಿಯೇ ಇದ್ದೆ' ಎಂಬ ಕವಿಯ ವಿವಕ್ಷೆಗೆ ವಿರೋಧವುಂಟಾಗುತ್ತದೆ. ಅದೇ ಕವಿಯ ತಾತ್ಪರ್ಯವಾಗಿರುವುದೆಂದ ಮಾತ್ರಕ್ಕೆ ಧ್ವನಿಕಾವ್ಯವಲ್ಲ ; ಅದು ಸುಂದರವಾಗಿಯೂ ಇದ್ದಾಗ ಮಾತ್ರ ಧ್ವನಿಕಾವ್ಯ. ಅಸುಂದರವಾದರೆ ಅದೂ ಗುಣೀಭೂತವ್ಯಂಗ್ಯವೇ. ಚಿತ್ರಕಾವ್ಯದ ಉದಾಹರಣೆಯಲ್ಲಿಯೂ ಹಾಗೆಯೇ ಸೌಂದರ್ಯವು ಮುಖ್ಯವಾಗಿ ಗೋಚರಿಸುವುದು ವಾಚ್ಯಾಂಶದಲ್ಲಿಯೇ ಅಥವಾ ರಸನಿರಪೇಕ್ಷವಾದ ವ್ಯಂಗ್ಯಾಂಶದಲ್ಲಿಯೇ ಎಂಬುದೊಂದೇ ವಿಚಾರಾರ್ಹವಾದ ಅಂಶ. ಹಾಗೆ ವಿಚಾರ ಮಾಡಿದಾಗ ಉತ್ಪ್ರೇಕ್ಷಾಲಂಕಾರದ ಚಮತ್ಕಾರವನ್ನು ಯಾರೂ ಅಲ್ಲಗಳೆಯುವುದು ಅಸಂಭವವಾದ್ದರಿಂದ ಅದು ಸಹಜವಾಗಿಯೇ ಚಿತ್ರಕಾವ್ಯವೆಂದೆನಿಸುತ್ತದೆ. ನಾವು ರಸದ ಕಡೆಯ ಗಮನವನ್ನು ಕ್ಷಣಮಾತ್ರವೂ ಬಿಡಲಾರೆವೆನ್ನುವ ಸಹೃದಯರು ಅದನ್ನು ಧ್ವನಿಕಾವ್ಯವೆಂದೇ ತಿಳಿಯಬಹುದು. ಅಂತಹ ಸಹೃದಯರಿಗೆ ಮಹಾಕವಿಗಳ ಲಕ್ಷ್ಯದಲ್ಲೆಲ್ಲ ದೊರೆಯುವುದು 'ಧ್ವನಿಕಾವ್ಯ'ದ ಒಂದೇ ಸವಿ. ಗುಣೀಭೂತವ್ಯಂಗ್ಯ, ಚಿತ್ರ, ಎಂಬ ವಿಕಲ್ಪಗಳಿಗೇ ಅವರ ಚಿತ್ತದಲ್ಲಿ ಎಡೆಯಿರುವುದಿಲ್ಲ. ಆದರೆ ಕಾವ್ಯತತ್ತ್ವಗಳನ್ನು ವಿಭಜಿಸಿ ತೋರಿಸುವುದೇ ಶಾಸ್ತ್ರಕಾರನಾದ ಮಮ್ಮಟನ ಗುರಿಯಾದ್ದರಿಂದ ಅವನು ಸರ್ವಗ್ರಾಸಿಯಾದ ರಸದೃಷ್ಟಿಯನ್ನು ರಸಪ್ರಕರಣವೊಂದರಲ್ಲಿ ಮಾತ್ರ ವಿಸ್ತರಿಸಿ, ಉಳಿದೆಡೆಗಳಲ್ಲಿ ಅದನ್ನು ಬುದ್ಧಿಪೂರ್ವಕವಾಗಿ ತಡೆಹಿಡಿದುಕೊಂಡು ಶಾಸ್ತ್ರರಚನೆ ಮಾಡಿದ್ದಾನೆ. ಇದನ್ನು ಅರಸಿಕತೆಯೆಂದು ನಿರ್ಧರಿಸಲು ಆಧಾರ ಸಾಲದು. ರಸಪ್ರಕರಣದಲ್ಲಿ ಇದೇ ಲಕ್ಷ್ಯವನ್ನು ಎತ್ತಿಕೊಂಡಿದ್ದರೆ ಅಲ್ಲಿ ಆತನೂ ಅದನ್ನು ಧ್ವನಿಕಾವ್ಯವೆಂದೇ ತೋರಿಸುತ್ತಿದ್ದನೋ

ಏನೋ! ರಸಾದಿಧ್ವನಿಗಳ, ಗುಣೀಭೂತವ್ಯಂಗ್ಯಗಳ, ಮತ್ತು ಶಬ್ದಾರ್ಥಚಿತ್ರಗಳ ವಿಸ್ತೃತ ನಿರ್ಣಯಕ್ಕೆ ಮಮ್ಮಟನ ೪, ೫, ೬ ನೆಯ ಉಲ್ಲಾಸಗಳನ್ನೋದಬೇಕೇ ಹೊರತು ಮೊದಲನೆಯ ಉಲ್ಲಾಸದಲ್ಲಿ ಕೇವಲ ದಿಗ್ದರ್ಶನಕ್ಕಾಗಿ ಹೇಳಿದ ಒಂದೇ ಪದ್ಯದಿಂದ ಅವನ ರಸಿಕತೆಯ ಮಟ್ಟವನ್ನು ಅಳೆಯುವುದು ಸರಿಯಾಗಲಾರದು. ಪ್ರಸ್ತುತ ಪದ್ಯದಲ್ಲಿ ಹಯಗ್ರೀವನ ಪೌರುಷಾತಿಶಯ ವ್ಯಂಗ್ಯವಾಗಿದ್ದರೂ ಅದರ ನೈಜಸೌಂದರ್ಯ ಅತ್ಯಲ್ಪ, ಅಥವಾ ಉಪೇಕ್ಷ್ಯ (ಅವನೊಬ್ಬ ಪ್ರತಿನಾಯಕನಾದ ರಾಕ್ಷಸನಾದ್ದರಿಂದ); ಅಮರಾವತಿಯ ಬಗೆಗೆ ಕವಿ ಕೊಟ್ಟಿರುವ ಉತ್ಪ್ರೇಕ್ಷಾಲಂಕಾರದ ಸೌಂದರ್ಯ ಅತ್ಯಧಿಕವೆಂಬುದನ್ನು ಸಾಧಿಸಬೇಕಾದ ಅಗತ್ಯವಿಲ್ಲ. ಇಲ್ಲಿ ಇನ್ನೊಂದು ತತ್ತ್ವವಡಗಿದೆ. ಅಲಂಕಾರದ ಸಹಜಸೌಂದರ್ಯ ಅಂಗಾಶ್ರಿತವಾದುದು (ಹಾರಾದಿಗಳಂತೆ); ರಸಾದಿಗಳ ಸೌಂದರ್ಯ ಆತ್ಮವಿಶ್ರಾಂತವಾದುದು. ರಸಾದಿಗಳು ಕಾವ್ಯದ ಆತ್ಮಸ್ಥಾನೀಯವಾದ ಕಾರಣ ಅವುಗಳ ಸೌಂದರ್ಯ ಅನ್ಯನಿರಪೇಕ್ಷ, ಸ್ವಯಂಪೂರ್ಣ. ಅಲಂಕಾರವೇ ಇಲ್ಲದಿದ್ದರೂ ಒಂದು ಕಾವ್ಯ ಹೃದಯಂಗಮವಾಗಬಲ್ಲದು. ಆದರೆ ಕಾವ್ಯದ ಅಂಗಗಳಾದ ಶಬ್ದ ಅರ್ಥಗಳಲ್ಲಿಯೂ ಚಮತ್ಕಾರವಿರುವುದೇ ಕಾವ್ಯದಲ್ಲಿ ರೂಢಿ. ರಸವಿಲ್ಲದೆಡೆಯಲ್ಲಿ ಅಲಂಕಾರವಿದೆಯೆಂದು ಹೇಳುವುದೇ ಹೆಣದ ಸಿಂಗಾರದಂತೆ ಹಾಸ್ಯಾಸ್ಪದವಾಗುತ್ತದೆ. ಅಲಂಕಾರಗಳ ಚಮತ್ಕಾರ ಸ್ಫುರಿಸುತ್ತಿರುವಾಗ ಅವುಗಳ ಚಮತ್ಕಾರ ಹೆಚ್ಚೋ, ರಸದ ಚಮತ್ಕಾರ ಹೆಚ್ಚೋ ಎಂಬ ಪ್ರಶ್ನೆಯೇ ಅಪ್ರಾಸಂಗಿಕ; ಕಾವ್ಯಗಾಯನದಲ್ಲಿ ಸಂಗೀತ ಹೆಚ್ಚೋ ಸಾಹಿತ್ಯ ಹೆಚ್ಚೋ ಎಂಬ ಪ್ರಶ್ನೆಯಂತೆ. ಸಂಗೀತ ಸಾಹಿತ್ಯಗಳ ಚಮತ್ಕಾರದ ಜಾತಿಯೇ ಬೇರೆ ಬೇರೆಯಾದ್ದರಿಂದ ಎರಡಕ್ಕೂ ಹೋಲಿಕೆಯ ಪ್ರಶ್ನೆ ಅಸಂಗತ. ಹಾಗೆಯೇ ಅಲಂಕಾರ ರಸಾದಿಗಳ ಸೌಂದರ್ಯ ಭಿನ್ನಜಾತೀಯವಾದ್ದರಿಂದ (ಒಂದು ಬುದ್ಧಿವೇದ್ಯ, ಇನ್ನೊಂದು ಭಾವನಾವೇದ್ಯ) ತಾರತಮ್ಯದ ಪ್ರಶ್ನೆಯೇ ಏಳುವುದಿಲ್ಲ. ಅಲಂಕಾರ ರಸಾದಿಗೆ ಪೋಷಕವೋ ಇಲ್ಲವೇ ಬಾಧಕವೋ ಎಂಬುದಷ್ಟೇ ಪ್ರಶ್ನೆ. ಪೋಷಕವಾಗಿದ್ದಾಗ ಮಾತ್ರ ಅದಕ್ಕೆ ಅಲಂಕಾರವೆಂಬ ಹೆಸರು. ಬಾಧಕವಾದರೆ ಅದು ನಿಷ್ಫಲ, ಅಲಂಕಾರವೇ ಅಲ್ಲ. ಆದ್ದರಿಂದ ಬುದ್ಧಿಪೂರ್ವಕವಾಗಿ ಅಲಂಕಾರ ಚಮತ್ಕಾರವನ್ನು ರಸಚಮತ್ಕಾರದಿಂದ ಪೃಥಕ್ಕರಿಸಿಕೊಂಡಲ್ಲದೆ ಕಾವ್ಯಶಾಸ್ತ್ರವೇ ಮುಂದುವರಿಯಲಾರದು. ಹೀಗೆ ಪೃಥಕ್ಕರಿಸಿಕೊಂಡು ಮಾತನಾಡುವುದು ಅರಸಿಕತೆಯ ಲಕ್ಷಣವಾದರೆ ಅದು ಯಾವ ಲಕ್ಷಣಕಾರನನ್ನೂ ಬಿಡದೆ ಅಂಟಿಕೊಳ್ಳುವ ದೋಷವೇ ಹೊರತು ಮಮ್ಮಟನೊಬ್ಬನ ದೋಷವೆನಿಸಲಾರದು.

ಪ್ರೊ|| ತೀ. ನಂ. ಶ್ರೀಕಂಠಯ್ಯನವರು ಹೇಳುವ ಕಡೆಯ ಅಂಶ—ಇದನ್ನು 'ಅಧಮ' ವೆಂಬುದು ಸರಿಯಲ್ಲವೆಂಬುದು. ಸಂಸ್ಕೃತಸಾಹಿತ್ಯದಲ್ಲಿ ಸುಪ್ರಸಿದ್ಧವಾಗಿದ್ದ

ಕಾವ್ಯಗಳನ್ನೆಲ್ಲ ಮೂರಾಗಿ ವಿಂಗಡಿಸುವಾಗ ನಾವು ಒಂದು, ಎರಡು, ಮೂರು ಎಂಬ ಸಂಖ್ಯೆಗಳನ್ನು ಕೊಡುವಂತೆ ಉತ್ತಮ, ಮಧ್ಯಮ, ಅಧಮ ಎಂಬ ಪದಗಳನ್ನು ಮಮ್ಮಟನು ಪ್ರಯೋಗಿಸಿರುವನೇ ಹೊರತು "ಹೀನ ದರ್ಜೆಯ" ಎಂಬ ಅಭಿಪ್ರಾಯವನ್ನು ಅವನಿಗೆ ಆರೋಪಿಸುವ ಕಾರಣವಿಲ್ಲ. ಸಂಸ್ಕೃತದಲ್ಲಿ 'ಉತ್ತಮ' ಎಂದರೆ 'ಮೊದಲನೆಯದು' 'ಅವರ', 'ಅವಮ', ಅಥವಾ 'ಅಧಮ' ಎಂದರೆ 'ಕಡೆಯದು' ಎಂಬುದೇ ಯೌಗಿಕಾರ್ಥ. ಇವಕ್ಕೆ ಧ್ವನಿ, ಗುಣೀಭೂತವ್ಯಂಗ್ಯ, ಚಿತ್ರಗಳೆಂಬ ಹೆಸರೂ ಉಂಟು. 'ಕೇವಲ ಧ್ವನಿಯೊಂದೇ ಒಳ್ಳೆಯದೆನ್ನಬಾರದು; ಗುಣೀಭೂತ ವ್ಯಂಗ್ಯವೂ ಸುಖಾವಹವಾಗಿರುತ್ತದೆ' (ನ ಸರ್ವತ್ರ ಧ್ವನಿರಾಗಿಣಾ ಭವಿತವ್ಯಮ್) ಎಂದು ಆನಂದವರ್ಧನನೇ ಹೇಳಿರುವುದನ್ನು ಚಿತ್ರಕ್ಕೂ ಮಮ್ಮಟನು ವಿಸ್ತರಿಸಿದ್ದಾನೆ. ಅರ್ಥ ಚಿತ್ರವೂ—ಅಸ್ಫುಟವ್ಯಂಗ್ಯಸಹಿತವೆಂಬುದನ್ನು ಮರೆಯಬಾರದು—ಉಪಾದೇಯವೆಂಬ ಅಂಶ ಮಮ್ಮಟನಲ್ಲಿ ಇಲ್ಲದಿದ್ದರೆ ಅವನು ಅಷ್ಟು ವಿಸ್ತಾರವಾಗಿ ಶಬ್ದಾರ್ಥಾಲಂಕಾರಗಳನ್ನು ವಿವೇಚಿಸುತ್ತಿರಲಿಲ್ಲ.

ಹೀಗೆ ಎಷ್ಟೆಷ್ಟು ಪರಿಯಿಂದ ನೋಡಿದರೂ ಮಮ್ಮಟನಲ್ಲಿ ದೋಷಾನ್ವೇಷಣೆಗೆ ಹೊರಡುವುದು 'ಆತ್ಮನ ಏವ ದೂಷಣಂ ಭವತಿ' ಎನ್ನುವ ಘಟ್ಟಕ್ಕೆ ಬರುತ್ತದೆ. ಈ ಮಾತನ್ನು ಕೂಡ ಭೀಮಸೇನ, ದೇವನಾಥ ಮುಂತಾದ ಹಿಂದಿನ ಟೀಕಾಕಾರರೇ ಒತ್ತಿ ಒತ್ತಿ ಆಡಿದ್ದಾರೆ. "ನ ಹಿ ಗೀರ್ವಾಣಗುರವೋಽಪಿ ಶ್ರೀವಾಗ್ದೇವತಾರೋಕ್ತಿಮಾಕ್ಷೇಪ್ತುಂ ಪ್ರಭವನ್ತಿ, ಕಿಂ ಪುನರ್ಮಾನುಷಾ ಮಶಕಾಃ" ('ದೇವತೆಗಳಿಗೆಲ್ಲ ಗುರುವಾದ ಬೃಹಸ್ಪತಿಯೇ ಬಂದರೂ ವಾಗ್ದೇವತಾವತಾರನಾದ ಮಮ್ಮಟನ ಉಕ್ತಿಗಳನ್ನು ತಪ್ಪೆನಿಸಲಾರನೆಂದಮೇಲೆ ನಮ್ಮಂತಹ ಮನುಷ್ಯ ಸೊಳ್ಳೆಗಳ ಪಾಡೇನು?') ಎಂದು ಭೀಮಸೇನನು ಕೇಳಿದರೆ

ಯ ಏಷ ಕುರುತೇ ಮನೋ ವಿಪದಿ ಗೌರವೀಣಾಂ ಗಿರಾಂ
ಸ ವಾಮನ ಇವಾಂಬರೇ ಹರಿಣಲಾಂಛನಂ ವಾಂಛತಿ
ಲಿಲಂಘಿಷತಿ ಸಿಂಹಿಕಾರಮಣಕೇಸರಂ ಫೇರುವತ್
ಪತಂಗ ಇವ ಪಾವಕಂ ನೃಹರಿಮಾವಕಂ ಧಾವತಿ

('ಗುರುವರ್ಯ ಮಮ್ಮಟರ ಮಾತುಗಳಲ್ಲಿ ಕುಂದಿಡಲು ಬಯಸುವವನು ಆಕಾಶದ ಚಂದ್ರನನ್ನು ಹಿಡಿಯಲೆಳಸುವ ಗುಜ್ಜಾರಿಯಂತೆ; ಮಹಾಸಿಂಹದ ಕೇಸರವನ್ನೆಳೆಯ ಹೊರಟ ನರಿಯಂತೆ; ಬೆಂಕಿಯನ್ನು ನುಂಗಲೋಡುವ ಪತಂಗದಂತೆ; ನರಸಿಂಹನೊಡನೆ ಸೆಣಸಿ ನಿಂತ ಕುರಿವಿಂಡಿನಂತೆ!') ಎಂದು ದೇವನಾಥನು ತನ್ನ ಭಕ್ತಿ ನಿರ್ಭರತೆಯನ್ನು ಪ್ರಕಟಿಸಿದ್ದಾನೆ. ಇಂದೂ ಈ ಭಕ್ತಿಯ ಆವೇಶದಲ್ಲಿ ಮೈಮರೆತು ಮಮ್ಮಟನನ್ನು ಆರಾಧಿಸುತ್ತಲೇ ನಿಲ್ಲಬೇಕೆಂದು ನಮ್ಮ ಅಭಿಪ್ರಾಯವಲ್ಲ. ಆದರೆ ಮಮ್ಮಟನ

ಪಂಕ್ತಿಗಳಲ್ಲಿ ತರ್ಕದೋಷಗಳು ಸಿಕ್ಕುವ ಸಂಭವ ಕಡಿಮೆ; ರಸಿಕತೆಯ ವಿಮರ್ಶೆ ವೈಯಕ್ತಿಕ ವಿಷಯವಷ್ಟೆ. ಎಂದಿಗಿಂತಲೂ ಹೆಚ್ಚಾಗಿ ಇಂದಿನವರ ಪಾಂಡಿತ್ಯದ ಅಪೂರ್ಣತೆಯ ಕಾರಣದಿಂದಲೇ ಮಮ್ಮಟನ ಪಾಂಡಿತ್ಯಾತಿಶಯದಲ್ಲಿ ಲೋಪ ದೋಷಗಳು ತೋರುವ ಸಂಭವಗಳಿರುತ್ತವೆ. ಕಾವ್ಯಪ್ರಕಾಶದ ಪ್ರಾಚೀನ ವ್ಯಾಖ್ಯಾತೃಗಳೆಲ್ಲರೂ ವ್ಯಾಕರಣ, ತರ್ಕ, ಮೀಮಾಂಸಾ, ಮುಂತಾದ ಸರ್ವ ಶಾಸ್ತ್ರ ಗಳಲ್ಲಿಯೂ ಪರಿಣತಮತಿಗಳಾಗಿರುತ್ತಿದ್ದರು. ಆಯಾಯಾ ಶಾಸ್ತ್ರಮರ್ಯಾದೆ ತಪ್ಪ ದಂತೆ ಮಮ್ಮಟನ ಅಲಂಕಾರಶಾಸ್ತ್ರಪ್ರಕ್ರಿಯೆಗಳನ್ನು ವಿವರಿಸಲು ಎಲ್ಲರೂ ಯತ್ನಿ ಸಿದ್ದಾರೆ. ಮಮ್ಮಟನ ಶಬ್ದಾರ್ಥಗಳ ವಿವೇಚನೆ, ಧ್ವನಿತತ್ತ್ವಪ್ರತಿಷ್ಠಾಪನೆ ಮತ್ತು ಅಲಂಕಾರಭೇದ ವ್ಯವಸ್ಥಾಪನೆಗಳ ರಹಸ್ಯವನ್ನರಿಯಲು ಇಂದೂ ಈ ಶಾಸ್ತ್ರಗಳ ಪರಿಚಯ ಅಗತ್ಯವೇ ಆಗುತ್ತದೆ. ಆದರೆ ಬೇರೆ ಬೇರೆ ಆಲಂಕಾರಿಕರ ಸಿದ್ಧಾಂತಗಳ ವಿಮರ್ಶೆ ಬರುವ ಪ್ರಸಂಗಗಳಲ್ಲಿ ಪ್ರಾಚೀನ ವ್ಯಾಖ್ಯಾನಕಾರರಿಂದ ಆಗುವ ಉಪಕಾ ರಕ್ಕಿಂತಲೂ ಇಂದಿನ ಅಲಂಕಾರಶಾಸ್ತ್ರದ ಇತಿಹಾಸಕಾರರ ಸಂಶೋಧನೆಗಳಿಂದ ಹೆಚ್ಚಿನ ಉಪಕಾರವಾಗುತ್ತದೆ. ಐತಿಹಾಸಿಕ ದೃಷ್ಟಿ ಬೆಳೆಯದಿದ್ದ ಕಾರಣದಿಂದ ಪೂರ್ವದ ಟೀಕಾಕಾರರು ಜನಶ್ರುತಿಗಳ ಆಧಾರದ ಮೇಲೆ ಒಬ್ಬನ ಮತವನ್ನು ಇನ್ನೊಬ್ಬನಿಗೆ ಆರೋಪಿಸಿ ಅನವಶ್ಯವಾದ ಖಂಡನ ಮಂಡನಗಳಲ್ಲಿ ಆಸಕ್ತರಾಗುವು ದುಂಟು. ಉದಾಹರಣೆಗೆ ರುಯ್ಯಕನ ಅಲಂಕಾರಸರ್ವಸ್ವವನ್ನು ಮಮ್ಮಟನು ಟೀಕಿಸುತ್ತಿರುವನೆಂದು ತಿಳಿದು ಉದ್ದಾಮಪಂಡಿತರೂ ಈಚಿನವರೂ ಆದ 'ಬಾಲ ಬೋಧಿನೀ'ಕಾರರೇ (ವಾಮನಾಚಾರ್ಯ ಝಳಕೀಕರ) ಅನೇಕ ಸ್ಥಳಗಳಲ್ಲಿ ಮೂಲಕ್ಕೆ ಅಪಾರ್ಥಗಳನ್ನು ಮಾಡುವಂತಾಗಿದೆ. (ವಸ್ತುತಃ ರುಯ್ಯಕನೇ ಈಚಿನವನು.) ಈ ಕೊರತೆಯನ್ನು ತಪ್ಪಿಸಿರುವ ಕೀರ್ತಿ ಡಾ|| ಡೇ, ಡಾ|| ಕಾಣೆ, ಮುಂತಾದ ಆಧುನಿಕ ವಿದ್ವಾಂಸರದು. ಆದರೆ ಈ ವಿದ್ವಾಂಸರು ಕೂಡ ಅಲಂಕಾರ ಶಾಸ್ತ್ರದಲ್ಲಿ ಮಮ್ಮಟನ ಸ್ಥಾನವನ್ನು ನಿರ್ದೇಶಿಸುವ ಅವಸರಗಳಲ್ಲಿ ಅವನಿಗೆ ಪಠ್ಯ ಪುಸ್ತಕಕಾರನೆಂಬ ಪಟ್ಟವನ್ನು ಕಟ್ಟಿ ಸ್ವತಂತ್ರ ಆಲೋಚಕನಲ್ಲವೆಂಬ ಅಭಿಪ್ರಾಯ ಬರುವಂತೆ ಬರೆಯುವುದುಂಟು. ಆಮೂಲಾಗ್ರವಾಗಿ ಗ್ರಂಥವನ್ನೋದಿದರೆ ಮಮ್ಮಟನು ಎಲ್ಲಿಯೂ ಭಾಮಹ, ದಂಡಿ, ಉದ್ಭಟ, ವಾಮನ, ರುದ್ರಟ, ಆನಂದ ವರ್ಧನ, ಮಹಿಮಭಟ್ಟ, ಕುಂತಕ, ಅಭಿನವಗುಪ್ತ, ಮುಂತಾದವರ ಮತಗಳನ್ನು ಸ್ವಂತ ಆಲೋಚನೆಯಿಲ್ಲದೆ ಸಂಕಲನಕಾರನಂತೆ ಸಂಗ್ರಹಿಸಿಕೊಂಡಿಲ್ಲವೆಂಬುದು ಸ್ಪಷ್ಟ ವಾಗುತ್ತದೆ. ತತ್ತ್ವ ಪ್ರತಿಪಾದನೆಯಲ್ಲಿ ಮುಖ್ಯವಾಗಿ ಆನಂದವರ್ಧನನನ್ನು ಅನುಸರಿ ಸಿದರೂ ಅವನು ಹೇಳದೆ ಬಿಟ್ಟ ಎಷ್ಟೋ ವಿವರಗಳನ್ನು ಮಮ್ಮಟನೇ ಪ್ರಥಮತಃ ನಿರ್ಣಯಿಸಿದ್ದಾನೆ. ಅಷ್ಟೇ ಅಲ್ಲ; ಭಾಮಹಾದಿಗಳಿಗೆ ಅಲಂಕಾರಾತ್ಮವಾದ,

ಮುಂತಾದ ವಾದಗಳನ್ನು ಆರೋಪಿಸದೆ ಎಲ್ಲರಲ್ಲಿಯೂ ಗ್ರಾಹ್ಯವಿಮರ್ಶೆಯೇ ಇರುವುದೆಂಬುದನ್ನು ಎತ್ತಿ ತೋರಿಸಿದ್ದಾನೆ. ಭಾಮಹ, ಉದ್ಭಟ, ವಾಮನಾದಿಗಳಲ್ಲಿ ಬಂದ ಕೆಲವು ಅಭಿಪ್ರಾಯಗಳನ್ನು ಖಂಡಿಸುವಾಗಲೂ, ಅವರ ಉಳಿದ ಅಭಿಪ್ರಾಯ ಗಳು ಸ್ವೀಕಾರಾರ್ಹವಾಗಿವೆಯೆಂಬಂಶವನ್ನೇ ಎತ್ತಿ ತೋರಿಸುತ್ತಾನೆ. ಹೀಗೆ ಪ್ರಾಚೀನ ಆಲಂಕಾರಿಕರೆಲ್ಲರ ತತ್ತ್ವವಿವೇಚನೆಗೆ ಆನಂದವರ್ಧನನ ದಿಗ್ದರ್ಶನವನ್ನೇ ಅನುಸರಿಸಿದರೂ ಅನೇಕ ವೇಳೆ ಆನಂದವರ್ಧನನಿಗಿಂತಲೂ ನಿಷ್ಕೃಷ್ಟವಾಗಿ, ಶಾಸ್ತ್ರೀಯವಾಗಿ, ಮತ್ತು ಸರ್ವಾಂಗಸಮಂಜಸವಾಗಿ ಮಾರ್ಗದರ್ಶನ ಮಾಡಿರುವ ಮಮ್ಮಟನು ಕೇವಲ ಪಠ್ಯಪುಸ್ತಕಕಾರನಲ್ಲ; ಉತ್ತಮ ವಿಮರ್ಶಕನೆಂದೇ ನಮ್ಮ ಗ್ರಹಿಕೆ. ಆನಂದವರ್ಧನನೊಡನೆ ಹೋಲಿಸಿದರೆ ಅವನ ಸ್ವತಂತ್ರ ವಿಚಾರಶಕ್ತಿ ಕಡಿಮೆ ಯೆನಿಸಿದರೂ ಸಹ, ಆನಂದವರ್ಧನನನ್ನೂ ಕೂಡಿಸಿಕೊಂಡು ಸಕಲ ಲಕ್ಷಣಕಾರರ ತತ್ತ್ವಗಳನ್ನೂ ತಕ್ಕಡಿಯಲ್ಲಿಟ್ಟು, ನಿಸ್ಸಂದಿಗ್ಧವಾದ ಕೊನೆಯ ನಿರ್ಣಯವನ್ನು ಕೊಟ್ಟಿರುವ ಕೆಲಸ ಅದ್ಭುತವಾದುದೆಂದೇ ಹೇಳಬೇಕು. ವಸ್ತುತಃ ಭಾಮಹಾದಿಗಳ ತತ್ತ್ವಗಳ ಪೂರ್ಣ ಪರಿಚಯಕ್ಕೂ ಕಾವ್ಯಪ್ರಕಾಶಕಾರನು ಬಿಡಿಸಿ ತೋರಿಸಿರುವ ಅಂಶಗಳು ಅತ್ಯಂತ ಉಪಕಾರಿಗಳಾಗುತ್ತವೆ. ಪೂರ್ವಸಿದ್ಧಾಂತಗಳ ಅವಲೋಕನ ದಲ್ಲಿ ಮಮ್ಮಟನ ದೃಷ್ಟಿ ಇಂದಿನ ವಿದ್ವಾಂಸರ ದೃಷ್ಟಿಗಿಂತ ಹೆಚ್ಚು ಸಾರಗ್ರಾಹಿ ಯಾದುದೆಂದೂ ಒಮ್ಮೊಮ್ಮೆ ಭಾಸವಾಗಬಹುದು. ಉದಾಹರಣೆಗೆ, ಗುಣವಾದಿ ಗಳನ್ನಾಗಲಿ ರೀತಿವಾದಿಗಳನ್ನಾಗಲಿ ರಸತತ್ತ್ವವಿರೋಧಿಗಳೆಂದು ಮಮ್ಮಟನು ತಿಳಿಯುವುದಿಲ್ಲ. ರಸಾತ್ಮಕವಾದುದು ಮಾತ್ರ ಕಾವ್ಯವೆಂದು ಕಾವ್ಯ ವಿಷಯವನ್ನು ಸಂಕೋಚಗೊಳಿಸುವುದೂ ಇಲ್ಲ. ಕಾವ್ಯದ ಆತ್ಮ ಮತ್ತು ಶರೀರಗಳಲ್ಲಿ ಇಲ್ಲದ ಭೇದವನ್ನಾರೋಪಿಸಿಕೊಂಡು ಒಂದೊಂದು ಸಿದ್ಧಾಂತವನ್ನೂ ಅಳೆಯಲಾರಂಭಿಸು ವುದಿಲ್ಲ. ಕವಿಪ್ರತಿಭೆಯ ಪ್ರಸಾರವೇ ಶಬ್ದಾರ್ಥಮಯವಾದ ಕಾವ್ಯ. ಸಹಜ ಪ್ರತಿ ಭೆಯ ತಾರತಮ್ಯದಿಂದ, ಮತ್ತು ಕವಿಯ ವ್ಯುತ್ಪತ್ತಿ ಅಭ್ಯಾಸಗಳ ತಾರತಮ್ಯದಿಂದ, ಕವಿನಿರ್ಮಿತಿಯಲ್ಲಿಯೂ ತಾರತಮ್ಯಗಳಿಲ್ಲದೆ ಹೋಗಲಾರದು. ತಾರತಮ್ಯಗಳು ಅಸಂಖ್ಯವಾದರೂ ಮುಖ್ಯವಾಗಿ ಮೂರು ಕಾವ್ಯಪ್ರಕಾರಗಳನ್ನು ಗುರುತಿಸಬಹುದು.

೧. ರಸ, ವಸ್ತು, ಅಲಂಕಾರಗಳನ್ನು ವ್ಯಂಗ್ಯಮಾರ್ಗದಿಂದ ಪ್ರಧಾನವಾಗಿ ಅಭಿ ವ್ಯಕ್ತಗೊಳಿಸುವ ಪ್ರಕಾರ.

೨. ವ್ಯಂಗ್ಯಾರ್ಥವಿದ್ದರೂ ಅದಕ್ಕಿಂತ ವಾಚ್ಯಾರ್ಥ ಚಮತ್ಕಾರವೇ ಪ್ರಬಲ ವಾಗಿರುವ ಪ್ರಕಾರ.

೩. ವ್ಯಂಗ್ಯಾರ್ಥದ ವಿವಕ್ಷೆಯಿಲ್ಲದೆ ಕೇವಲ ಅಲಂಕಾರಾದಿ ಚಮತ್ಕೃತದ ಅತಿಶಯವಿರುವ ಪ್ರಕಾರ.

ಸಂಸ್ಕೃತದ ಅಪಾರ ಕಾವ್ಯರಾಶಿಯಲ್ಲಿ ವಾಲ್ಮೀಕಿಗಳ ಕಾವ್ಯವು ಮೊದಲನೆಯ ದಕ್ಕೂ, ನೈಷಧ ಮುಂತಾದ ಪರಿಷ್ಕೃತ ಕಾವ್ಯಗಳು ಮೂರನೆಯದಕ್ಕೂ, ನಿದರ್ಶನ ಗಳಾಗಿದ್ದಂತೆ ಕಾಳಿದಾಸಾದಿಗಳ ಕಾವ್ಯಗಳು ಮೂರು ಬಗೆಯ ಪದ್ಯಗಳನ್ನೂ ಅಷ್ಟಿಷ್ಟು ಒಳಗೊಳ್ಳುತ್ತಿದ್ದುವು. ಈ ಮೂರು ಜಾತಿಗಳಲ್ಲಿ ಯಾವುದೊಂದನ್ನೂ ಕಾವ್ಯವಲ್ಲವೆನ್ನುವಂತಿರಲಿಲ್ಲವಾದ್ದರಿಂದ ಎಲ್ಲಕ್ಕೂ ಅನ್ವಯಿಸುವಂತೆ ಸಮಗ್ರ ಕಾವ್ಯಲಕ್ಷಣವನ್ನು ಪ್ರತಿಪಾದಿಸಿರುವ ಶ್ರೇಯಸ್ಸು ಮಮ್ಮಟನದು. ನಾಟಕಲಕ್ಷಣ ವನ್ನು ಕುರಿತ ಸ್ವತಂತ್ರ ಗ್ರಂಥಗಳು ಆಗಲೇ ಉಪಲಬ್ಧವಿದ್ದುದರಿಂದ ತನ್ನ ಗ್ರಂಥ ದಲ್ಲಿ ಮಮ್ಮಟನು ಅದಕ್ಕೆ ಸ್ಥಾನವನ್ನು ಕೊಟ್ಟಿಲ್ಲ. ಅಭಿನೇಯಾರ್ಥವಾದ ನಾಟಕಾ ದಿಗಳೆಲ್ಲ ಮುಖ್ಯವಾಗಿ ಮೊದಲನೆಯ ಕಾವ್ಯಪ್ರಕಾರದಲ್ಲೇ ಬರುವುವೆಂಬುದನ್ನು ಸೂಚಿಸಿ ರಸಪ್ರಕರಣವನ್ನು ಬರೆದಿದ್ದಾನೆ. ಸಂಧಿ ಸಂಧ್ಯಂಗಗಳ, ವೃತ್ತಿಗಳ, ನಾಯಿಕಾನಾಯಕಾದಿಪ್ರಭೇದಗಳ ವಿವರಗಳಲ್ಲಿ ಭರತಾದಿಗಳು ಹೇಳದ ಹೊಸ ವಿಷಯ ಗಳಿರಲಿಲ್ಲವಾದ್ದರಿಂದ ಮಮ್ಮಟನು ಅವುಗಳ ಪುನರುಕ್ತಿಗೆ ಕೈಹಾಕದಿರುವುದು ದೋಷವೇನೂ ಅಲ್ಲ; ಅವನ ಸುಸಂಸ್ಕೃತ ಅಭಿರುಚಿಗೆ ಪ್ರಮಾಣವೆನ್ನಬಹುದು. ಮಮ್ಮಟನು ಬರೆದುದು ಕವಿಗಳ ಕೈಪಿಡಿಯಲ್ಲ ; ಕಾವ್ಯಲಕ್ಷಣಶಾಸ್ತ್ರ.

ಕಾವ್ಯಪ್ರಕಾಶವನ್ನು ಸಂಪೂರ್ಣವಾಗಿ ಮಮ್ಮಟನೊಬ್ಬನೇ ರಚಿಸಿರುವನೆಂದು ಸ್ಥೂಲವಾಗಿ ಪಂಡಿತರು ತಿಳಿಯುತ್ತ ಬಂದಿರುವರಾದರೂ, ಹತ್ತನೆಯ ಉಲ್ಲಾಸದಲ್ಲಿ ಪರಿಕರಾಲಂಕಾರದಿಂದಾಚೆಗೆ ಅಲಟ, ಅಲ್ಲಟ ಅಥವಾ ಅಲಕನೆಂಬಾತನ ಕೈವಾಡವಿದೆ ಯೆಂದು ಉಲ್ಲೇಖಿಸುವ ಪದ್ಯವೊಂದನ್ನು ಕಾಶ್ಮೀರದ ಟೀಕಾಕಾರನಾದ ಆನಂದ ನೆಂಬವನು ಉದಾಹರಿಸಿದ್ದಾನೆ :—

> "ಕೃತಃ ಶ್ರೀ ಮಮ್ಮಟಾಚಾರ್ಯವರ್ಯೈಃ ಪರಿಕರಾವಧಿಃ |
> ಪ್ರಬಂಧಃ ಪೂರಿತಃ ಶೇಷೋ ವಿಧಾಯಾಲ್ಲಟ (v. l. ಲಕ) ಸೂರಿಣಾ ||"

ಇದೇ ಮಾತನ್ನೇ ಪುಷ್ಟೀಕರಿಸುವಂತಿದೆ 'ಕಾವ್ಯಪ್ರಕಾಶ'ದ ಕಡೆಯ ಪದ್ಯ :—

> ಇತ್ಯೇಷ ಮಾರ್ಗೋ ವಿದುಷಾಂ ವಿಭಿನ್ನೋ
> ಽಪ್ಯಭಿನ್ನರೂಪಃ ಪ್ರತಿಭಾಸತೇ ಯತ್ |
> ನ ತದ್ವಿಚಿತ್ರಂ ಯದಮುತ್ರ ಸಮ್ಯಗ್
> ವಿನಿರ್ಮಿತಾ ಸಂಘಟನೈವ ಹೇತುಃ ||

ಇಲ್ಲಿ 'ವಿಭಿನ್ನ ವಿದ್ವಾಂಸರ ಮತಗಳು ಅಭಿನ್ನವೆನಿಸುವಂತೆ ಶೋಭಿಸುವಂತಾಗಿದ್ದರೆ ಸೋಜಿಗವೇನೂ ಇಲ್ಲ; ಏಕೆಂದರೆ ರಚನಾಕೌಶಲವೇ ಅದಕ್ಕೆ ಕಾರಣ' ಎಂಬ ಮಾತುಗಳು ವಿಭಿನ್ನ ಆಲಂಕಾರಿಕರಾದ ಭಾಮಹಾದಿಗಳ ಮತಗಳಿಗೆ ಅನ್ವಯಿಸು ವಂತೆಯೇ, ಮಮ್ಮಟ, ಅಲ್ಲಟರೆಂಬ ಭಿನ್ನಕರ್ತೃಗಳಿಗೂ ಶ್ಲೇಷೆಯಿಂದ ಅನ್ವಯಿಸು

ವಂತಿವೆ. ಈ ಎರಡನೆಯ ಅರ್ಥವನ್ನೂ ಪ್ರಾಚೀನಟೀಕಾಕಾರರಾದ ಮಾಣಿಕ್ಯ ಚಂದ್ರ ಮುಂತಾದವರೇ ತೋರಿಸಿದ್ದಾರೆ. ಮೇಲೆ ಹೇಳಿದ ಆನಂದನು ಈ ಸಂದರ್ಭದಲ್ಲಿ:—

> ಕಾವ್ಯಪ್ರಕಾಶ ಇಹ ಕೋಽಪಿ ನಿಬಂಧಕೃದ್ಭ್ಯಾಂ
> ದ್ವಾಭ್ಯಾಂ ಕೃತೇಽಪಿ ಕೃತಿನಾಂ ರಸತತ್ತ್ವಲಾಭಃ |
> ಲೋಕೇಽಸ್ತಿ ವಿಶ್ರುತಮಿದಂ ನಿತರಾಂ ರಸಾಲಂ
> ಬಂಧಪ್ರಕಾರರಚಿತಸ್ಯ ತರೋಃ ಫಲಂ ಯತ್ ||

ಎಂಬ ದ್ವಿಕರ್ತೃಕಪರವಾದ ಈ ಅರ್ಥವನ್ನೇ ವರ್ಣಿಸುವ ಪೂರ್ವಶ್ಲೋಕವನ್ನೂ ಉದಾಹರಿಸಿದ್ದಾನೆ. ಆಧುನಿಕ ಸಂಶೋಧಕರಲ್ಲಿ ಸುಪ್ರಸಿದ್ಧರಾದ ಡಾ|| ವಿ. ಎಸ್. ಸುಕಠಣಕರ ಅವರು ಕಾವ್ಯಪ್ರಕಾಶದ ಅಂತರಪ್ರಮಾಣಗಳ ಮೇಲಿಂದಲೂ ಈ ಅಭಿಪ್ರಾಯವನ್ನೇ ಸಮರ್ಥಿಸಿದ್ದಾರೆ (*Z.D.M.G.* **LXVI, pp.** ೪೭೭-೪೯೦). ಪರಿಕರಾಲಂಕಾರದಿಂದಾಚೆಗೆ ಮಾತ್ರ ರುದ್ರಟನ ಅನುಸರಣೆ ಹೆಚ್ಚಾಗಿರುವುದೂ 'ನವಸಾಹಸಾಂಕಚರಿತ'ದಿಂದ ಅಲ್ಲಿ ಮಾತ್ರ ಆರು ಪದ್ಯಗಳು ಉದಾಹೃತವಾಗಿರುವುದೂ ಅವರು ತೋರಿಸಿರುವ ಪ್ರಮಾಣಗಳಲ್ಲಿ ಕೆಲವು. ಈ ಉಭಯಕರ್ತೃಕತಾವಾದವನ್ನು ಕೆಲವು ಹಸ್ತಪ್ರತಿಗಳ ಉಲ್ಲಾಸಾಂತ್ಯಗದ್ಯಗಳೂ ಸಮರ್ಥಿಸುತ್ತವೆ; ಅಮರುಶತಕದ ವ್ಯಾಖ್ಯಾಕಾರನೊಬ್ಬನು ಕಾವ್ಯಪ್ರಕಾಶದ ಏಳನೆಯ ಉಲ್ಲಾಸದಿಂದ ಉದ್ಧರಿಸುವಾಗಲೂ "ಕಾವ್ಯಪ್ರಕಾಶಕಾರೌ" ಎಂದು ದ್ವಿವಚನವನ್ನು ಪ್ರಯೋಗಿಸುತ್ತಾನೆ. ಆದರೆ ಏಳನೆಯ ಉಲ್ಲಾಸದಲ್ಲಾಗಲಿ ಪರಿಕರಾಲಂಕಾರಪೂರ್ವದ ಯಾವುದೇ ಗ್ರಂಥಭಾಗದಲ್ಲಾಗಲಿ ಅಲ್ಲಟನ ಕೈವಾಡವಿದೆಯೆಂದು ಹೇಳಲು ಪ್ರಮಾಣಾಂತರಗಳೊಂದೂ ಇಲ್ಲದಿರುವುದರಿಂದ ಈ ಟೀಕಾಕಾರನೇ ಭ್ರಾಂತನಾದನೆನ್ನಬೇಕಾಗಿದೆ (Kane : *HAL.* p. ೨೬೧-೨). ಹೀಗೆ ಕಾವ್ಯಪ್ರಕಾಶವು ಇಬ್ಬರ ರಚನೆಯೆಂದರೂ ಕೆಲವು ಅಲಂಕಾರಗಳ ನಿರೂಪಣೆ ಮಾತ್ರ ಅಲ್ಲಟನದಾಗುವುದರಿಂದ ಮುಖ್ಯವಾದ ಗ್ರಂಥಭಾಗವೆಲ್ಲ ಮಹಾವಿದ್ವಾಂಸನಾದ ಮಮ್ಮಟನ ಕೃತಿಯೇ ಎಂಬುದು ಸ್ಥಿರಪಡುತ್ತದೆ.

ಮಮ್ಮಟನ ದೇಶ ಅವನ ಹೆಸರೇ ಸೂಚಿಸುವಂತೆ ಕಾಶ್ಮೀರ. ಕಾಲ—ಕ್ರಿ.ಶ. ೧೦೫೦-೧೧೦೦. ಈ ಕಾಲಕ್ಕಾಗಲೇ ಸಂಸ್ಕೃತ ಅಲಂಕಾರ ಶಾಸ್ತ್ರದ ವಿಭಿನ್ನ ಸಿದ್ಧಾಂತಗಳೆಲ್ಲವೂ ಪ್ರಚಾರಗೊಂಡಾಗಿದ್ದಿತು. ಪರಸ್ಪರ ಖಂಡನ ಮಂಡನಗಳೂ ನಡೆದಿದ್ದುವು. ಇದಮಿತ್ಥಮೆಂದು ನಿರ್ಣಯಿಸಿ ವಾದಗಳನ್ನೆಲ್ಲಾ ಪರಿಸಮಾಪ್ತಿ ಮಾಡುವ ಮಹಾಕಾರ್ಯ ಮಮ್ಮಟನ ಪಾಲಿಗೆ ಬಂದಿತು. ವಿಭಿನ್ನ ಸಿದ್ಧಾಂತಗಳು ತೋರಿಕೆಗೆ ಮಾತ್ರ ವಿಭಿನ್ನವೇ ಹೊರತು, ಆಳವಾಗಿ ಹೊಕ್ಕು ನೋಡಿದರೆ ಅಭಿನ್ನವೇ

ಎಂಬುದನ್ನು ಅಭೂತಪೂರ್ವ ಸಂಘಟನಾಕೌಶಲದಿಂದ ತೋರಿಸಿದ ಮಹತ್ತ್ವವೇ ಮಮ್ಮಟನ ಅಜರಾಮರ ಕೀರ್ತಿಗೆ ಆಲಂಬನ. ಮಮ್ಮಟನ ಜೀವನ ಚರಿತ್ರೆಯ ಬಗೆಗೆ ಕೆಲವು ಕಿಂವದಂತಿಗಳುಂಟೇ ಹೊರತು ಸತ್ಯ ಸಂಗತಿಗಳೊಂದೂ ಗೊತ್ತಿಲ್ಲ. ಇವನು ಜೈಯಟನ ಪುತ್ರನೆಂದೂ, ಕಾಶಿಯಲ್ಲಿ ಶಾಸ್ತ್ರಾಧ್ಯಯನ ಮಾಡಿದನೆಂದೂ, ಪ್ರಸಿದ್ಧ ವ್ಯಾಕರಣ ಟೀಕಾಕಾರನಾದ ಕಯ್ಯಟನ, ಮತ್ತು ವೇದಚತುಷ್ಟಯಭಾಷ್ಯ ಕಾರನಾದ ಉವಟನ ಸೋದರನೆಂದೂ ಭೀಮಸೇನನೆಂಬ ಈಚಿನ ವ್ಯಾಖ್ಯಾಕಾರನು ಬರೆದಿದ್ದಾನೆ. ಈ ಸಂಗತಿಗಳು ಸತ್ಯದೂರವೆಂದು ಸಂಶೋಧಕರು ತೀರ್ಮಾನಿಸಿದ್ದಾರೆ (Kane). ಮಮ್ಮಟನು ನೈಷಧಕಾರನಾದ ಶ್ರೀಹರ್ಷನ ಸೋದರಮಾವನೆನ್ನುವುದೂ ಕಟ್ಟುಕಥೆಯಂತೆಯೇ ಕಾಣುತ್ತದೆ. ಧಾರಾನಗರದ ಪ್ರಸಿದ್ಧ ಭೋಜರಾಜನ ದಾನ ಶೂರತ್ವವನ್ನು ವರ್ಣಿಸುವ ಪದ್ಯವೂ ಕಾವ್ಯಪ್ರಕಾಶದಲ್ಲಿರುವುದರಿಂದ ಆತನ ಆಸ್ಥಾನಕ್ಕೂ ಮಮ್ಮಟನು ಹೋಗಿದ್ದಿರಬಹುದು. ಮಮ್ಮಟನ ಗ್ರಂಥ ರಚಿತವಾದ ಐವತ್ತೇ ವರ್ಷಗಳೊಳಗೆ ಗುಜರಾಥ, ಮುಂತಾದ ದೂರ ಪ್ರಾಂತಗಳಲ್ಲಿಯೂ ವ್ಯಾಖ್ಯಾನಗಳು ಹುಟ್ಟಿದುದು 'ಕಾವ್ಯಪ್ರಕಾಶ'ದ ಅದ್ಭುತ ಪ್ರಚಾರ ಪ್ರಾಶಸ್ತ್ಯ ಗಳಿಗೆ ಒಂದು ದಿಕ್ಸೂಚಿಯಾಗಿದೆ. ಮಮ್ಮಟನ ವಿಷಯದಲ್ಲಿ ಭಕ್ತಿತರಂಗಿತನಾದ ಭೀಮಸೇನನ ಎರಡು ಸೂಕ್ತಿಗಳನ್ನುದ್ಧರಿಸಿ ಈ ಪೀಠಿಕೆಯನ್ನು ಮುಗಿಸಬಹುದು:—

೧. 'ಕಸ್ತಸ್ಯ ಸ್ತುತಿಮಾಚರೇತ್ ಕವಿರಹೋ ಕೋವಾ ಗುಣಾನ್ ವೇದಿತುಂ
ಶಕ್ತಃ ಸ್ಯಾತ್ ಕಿಲ ಮಮ್ಮಟಸ್ಯ ಭುವನೇ ವಾಗ್ದೇವತಾರೂಪಿಣಃ . . .'

**ಶಾರದೆಯವತಾರವೆನಲ್**
**ಧಾರಿಣಿಯೊಳ್ ಮಮ್ಮಟಾಖ್ಯನಾತನ ಗುಣದಾ।**
**ಪಾರಮನೆಯ್ದುತ್ತಾವಂ**
**ಧೀರಂ ನುತಿಸಲ್ಕೆ ನೆರೆವನೋ ಕವಿತಿಲಕಂ॥**

೨. ವ್ಯಾಖ್ಯಾತಂ ಹಿ ಪುರಾತ್ರ ಯೈಃ, ಸುಕವಯಃ ಸರ್ವೇ ಮಹಾಪಂಡಿತಾಃ
ತೇ ವಂದ್ಯಾಃ ಸುತರಾಂ, ನ ತೇಷು ಮಮ ಕೋಽಪ್ಯಸ್ತ್ಯಾಗ್ರಹಃ ಸ್ಪರ್ಧಿತುಮ್।
ಕಿಂತು ಗ್ರಂಥಸಹಸ್ರಸಾರಮಪಿ ಯದ್ವ್ಯುತ್ಪತ್ತ್ಯ ವಿರುದ್ಧಂ ವಚಃ,
ತತ್ ಕ್ಷಂತುಂ ನ ಸಮುತ್ಸಹೇ, ನ ಚ ಪುನರ್ಭೀತಿಃ ಸುರೇಜ್ಯಾದಪಿ॥

**ಆರಾರ್ ಪೇಳ್ದರೊ ಮುನ್ನ ಟೀಕೆಯನವರ್ ವಂದ್ಯರ್ ಮಹಾಪಂಡಿತರ್**
**ಮೀರಲ್ಕೆಂದವರೆಲ್ಲರಂ ಪುರುಡಿಸೆಂ ಸದ್ವಾಕ್ಯಸಂಪನ್ನರಂ।**
**ತೋರುತ್ತಿರ್ಪವರಂ ವಿರುದ್ಧತತಿಯಂ ಮೇಣ್ ಗ್ರಂಥಸಾಹಸ್ರದಾ**
**ಸಾರಂ ತಾನೆನೆಯುಂ ಬಿಡೆಂ ಭಯಪಡೆಂ ವಾಗೀಶನೇ ಪೇಳ್ವೊಡಂ॥**

# ಕನ್ನಡ ಕಾವ್ಯಪ್ರಕಾಶ

## (ಮಮ್ಮಟನ ಮೂಲಗ್ರಂಥದ ಅನುವಾದ)

## ಮೊದಲನೆಯ ಉಲ್ಲಾಸ

ಗ್ರಂಥದ ಆರಂಭದಲ್ಲಿ ವಿಘ್ನನಿವಾರಣೆಗಾಗಿ ಉಚಿತಳೂ ಇಷ್ಟಳೂ ಆದ[1] ವಾಗ್ದೇವಿಯನ್ನು ಗ್ರಂಥಕರ್ತನು[2] ನುತಿಸುತ್ತಾನೆ[3]—

> ನಿಯತಿಕೃತನಿಯಮರಹಿತಾಂ
> ಹ್ಲಾದೈಕಮಯೀಮನನ್ಯಪರತಂತ್ರಾಂ ।
> ನವರಸರುಚಿರಾಂ ನಿರ್ಮಿತಿ-
> ಮಾದಧತೀ ಭಾರತೀ ಕವೇರ್ಜಯತಿ ॥ ೧ ॥

> ತವೆ ವಿಧಿನಿಯಮವಿದೂರಂ
> ಬುಧಿಯೊಳ್ ಸುಖಮಾತ್ರರೂಪಮಪರಾಧೀನಂ ।

---

[1] ದೇವತೆಗಳಲ್ಲಿ 'ಉಚಿತದೇವತೆ', 'ಇಷ್ಟದೇವತೆ', 'ಉಚಿತೇಷ್ಟದೇವತೆ' ಎಂದು ಮೂರು ಬಗೆಗಳನ್ನು ತೋರಿಸಿ, ಅವಕ್ಕೆ ಉದಾಹರಣೆಗಳನ್ನು ಮಾಣಿಕ್ಯಚಂದ್ರನು ಸೂಚಿಸಿದ್ದಾನೆ. ನೀತಿಶಾಸ್ತ್ರದ ಆದಿಯಲ್ಲಿ ರಾಜನನ್ನೂ ಕಾಮಶಾಸ್ತ್ರದ ಆದಿಯಲ್ಲಿ ಮನ್ಮಥನನ್ನೂ ಸ್ತುತಿಸುವುದು 'ಉಚಿತ'. ರಘುವಂಶದ ಆದಿಯಲ್ಲಿ ಸ್ತುತರಾದ ಪಾರ್ವತೀಪರಮೇಶ್ವರರು ಕಾಳಿದಾಸನ 'ಇಷ್ಟ ದೇವತೆಗಳು. ಕಾವ್ಯಕ್ಕೆ ಅಧಿದೇವಿಯಾದ ವಾಗ್ದೇವಿಯು ಮಮ್ಮಟನಿಗೆ ಇಷ್ಟದೇವತೆಯಷ್ಟೇ ಅಲ್ಲ; ಸಮುಚಿತ ದೇವತೆಯೂ ಆಗಿದ್ದಾಳೆ.

[2] ಕಾವ್ಯಪ್ರಕಾಶದ ಕಾರಿಕೆಗಳು ಪದ್ಯರೂಪವಾಗಿಯೂ ವಿವರಣೆಯಾದ ವೃತ್ತಿ ಗದ್ಯರೂಪವಾಗಿಯೂ ಇದೆ. ಇವೆರಡನ್ನೂ ಒಬ್ಬನೇ, ಮಮ್ಮಟನೇ, ಬರೆದಿರುವುದು ಚಿರಪ್ರಸಿದ್ಧ. ಆದರೂ ವ್ಯಾಖ್ಯಾನದ ಸಂಪ್ರದಾಯಕ್ಕನುಸಾರವಾಗಿ ಕಾರಿಕಾಕಾರನೇ ಬೇರೆ, ವೃತ್ತಿಕಾರನೇ ಬೇರೆಯೆಂಬಂತೆ ಉತ್ತಮ ಪುರುಷದ ಬದಲು 'ಗ್ರಂಥಕರ್ತ'ನೆಂಬ ಪ್ರಯೋಗ ಬಂದಿದೆ. ಈ ಪ್ರಯೋಗದಿಂದ ಭ್ರಾಂತರಾದ ಮಹೇಶ್ವರನೇ ಮೊದಲಾದ ಈಚಿನ ಟೀಕಾಕಾರರು ಭರತನು ಅಗ್ನಿಪುರಾಣಾದಿಗಳಿಂದ ಕಾರಿಕೆಗಳನ್ನು ಸಂಗ್ರಹಿಸಿ ಬರೆದನೆಂದೂ ಮಮ್ಮಟನು ವೃತ್ತಿಯನ್ನಷ್ಟೇ ರಚಿಸಿದನೆಂದೂ ಹೇಳುತ್ತಾರೆ. ಈ ವಾದವನ್ನು ಇಂದಿನ ಸಂಶೋಧಕರು ಒಪ್ಪಿಲ್ಲ.

[3] ನುತಿಸುವುದೆಂದರೆ ಸಕಾರಣವಾಗಿ ಹೊಗಳುವುದು ; ಸುಮ್ಮನೆ ಧ್ಯಾನಮಾಡುವುದಲ್ಲ.

ನವರಸರುಚಿರಂ ತಾನೆನೆ
ನವಸೃಷ್ಟಿಯನೀವ ಕವಿಯ ವಾಣಿಯೆ ಗೆಲ್ವಳ್ ||

ಬ್ರಹ್ಮನ ನಿರ್ಮಿತಿ ಅಥವಾ ಸೃಷ್ಟಿ 'ನಿಯತಿ'[4] ಎಂದರೆ ಅದೃಷ್ಟದ ನಿಯಮಾ[5]ನುಸಾರವಾಗಿರುತ್ತದೆ; ಸುಖ, ದುಃಖ ಮತ್ತು ಮೋಹ, ಈ ಮೂರು ಅಂಶಗಳಿಂದಲೂ ಸಮ್ಮಿಶ್ರವಾಗಿರುತ್ತದೆ[6]; ಪರಮಾಣುಗಳೇ ಮೊದಲಾದ ಉಪಾದಾನ ಕಾರಣಗಳಿಗೂ ಕರ್ಮವೇ ಮುಂತಾದ ಸಹಕಾರಿ ಕಾರಣಗಳಿಗೂ[7]

---

[4] 'ನಿಯತಿ' ಎಂದರೆ ಅದೃಷ್ಟವೆಂಬರ್ಥ ರೂಢಿಯಲ್ಲಿ ಪ್ರಸಿದ್ಧ. ನಮ್ಮ ವೇದಾಂತಶಾಸ್ತ್ರದಲ್ಲಿ ಜಗತ್ತಿನ ಸೃಷ್ಟಿಗೆ ಪ್ರಳಯಪೂರ್ವದ ಜೀವರ ಅದೃಷ್ಟರೂಪೀ ಕರ್ಮವೂ ಕಾರಣವೆಂದು ಪರಿಗಣಿತವಾಗಿದೆ. ಆದರೆ ಕಾಶ್ಮೀರ ಶೈವಸಿದ್ಧಾಂತದಲ್ಲಿ ಅದಕ್ಕೆ ವಿಶಿಷ್ಟವಾದ ಮತ್ತೊಂದು ಅರ್ಥ ಉಕ್ತವಾಗಿದೆ. ಪಂಚಭೂತಗಳು, ಪಂಚಕರ್ಮೇಂದ್ರಿಯಗಳು, ಪಂಚಬುದ್ಧೀಂದ್ರಿಯಗಳು, ಪಂಚವಿಷಯಗಳು ಮುಂತಾದ ತತ್ವಗಳಿಂದಾರಂಭವಾಗಿ ಶಿವತತ್ವದಲ್ಲಿ ಕಡೆಯಾಗುವ ಮೂವತ್ತಾರು ತತ್ವಗಳಲ್ಲಿ ನಿಯತಿಯೆಂಬ ಒಂದು ತತ್ವವುಂಟು. ಆ ತತ್ವದಂತೆ ವಿಶ್ವನಿಯಾಮಿಕೆಯಾದ ಶಕ್ತಿಯೇ ನಿಯತಿ. ನಿಯತಿಯೇ ನಾಮರೂಪಗಳಿಗೆ ಕಾರಣಳು. "ಈಶ್ವರಃ ಶುದ್ಧವಿದ್ಯಾ ಚ ಕಾಲಶ್ಚ ನಿಯತಿಸ್ತಥಾ" ಎಂಬ ಶೈವಶಾಸ್ತ್ರ ಇದಕ್ಕೆ ಆಧಾರ. ಮಮ್ಮಟನಿಗೆ ಎರಡು ಅರ್ಥಗಳೂ ವಿವಕ್ಷಿತವಾಗಿದ್ದಿರಬಹುದು. ಪ್ರದೀಪಕಾರನು ವಸ್ತುಗಳ ಅಸಾಧಾರಣ ಧರ್ಮವೆಂದೂ ಅರ್ಥಮಾಡಿದ್ದಾನೆ. ನಿಯತಿಯೆಂದರೆ ನಿಯಮಿತವಾದ ಸಂಸಾರವೆಂಬ ಅರ್ಥವನ್ನು ಮಹೇಶ್ವರನು ಸೂಚಿಸಿದ್ದಾನೆ.

[5] ನಿಯತಿಯು ನಿಯಮವೆಂದರೆ ತಾರ್ಕಿಕರು ಹೇಳುವ ವ್ಯಾಪ್ತಿಯೇ ಎಂದು ವೈದ್ಯನಾಥನೂ, 'ನಿಯತ'ವೆಂದರೆ ಜನ್ಯವೆಂದು ಮಹೇಶ್ವರನೂ ಬರೆಯುತ್ತಾರೆ. ಚೇತನ, ಅಚೇತನ, ವಸ್ತುಗಳ ಅನಿವಾರ್ಯ ಭೇದವೆಂದು ಮಾಣಿಕ್ಯಚಂದ್ರನ ಮತ. ಇದನ್ನೇ ಇಂಗ್ಲಿಷಿನಲ್ಲಿ Laws of Nature ಎನ್ನುವುದಕ್ಕೆ ಪರ್ಯಾಯವಾದ ನಿಸರ್ಗನಿಯಮವೆಂಬರ್ಥದಲ್ಲಿ ಇಂದು ವ್ಯಾಖ್ಯಾನಮಾಡಬಹುದು.

[6] ಸಾಂಖ್ಯದರ್ಶನದ ಪ್ರಕಾರ ಜಗತ್ತಿನ ಸೃಷ್ಟಿಗೆ ಸತ್ವ, ರಜಸ್ಸು, ಮತ್ತು ತಮಸ್ಸೆಂಬ ತ್ರಿಗುಣಗಳಿಂದ ಕೂಡಿದ ಪ್ರಕೃತಿಯೇ ಆದಿಕಾರಣ. ಅದರ ವಿಕೃತಿ ಅಥವಾ ಪರಿಣಾಮಗಳಿಂದಲೇ ಬುದ್ಧಿ, ಅಹಂಕಾರ, ಮುಂತಾದುವೂ ಚರಾಚರ ವಿಶ್ವವೂ ಕಡೆಗೆ ಹುಟ್ಟುತ್ತವೆ. ಪುರುಷನು ವಸ್ತುತಃ ನಿರ್ವಿಕಾರನೂ ಸಾಕ್ಷಿಯೂ ಆಗಿದ್ದರೂ ಪ್ರಕೃತಿಯ ಪರಿಣಾಮಗಳಾದ ಬುದ್ಧಿ, ಅಹಂಕಾರ ಮತ್ತು ಮನಸ್ಸುಗಳ ಪ್ರಭಾವದಿಂದ ಅಜ್ಞನಾಗಿ ಪ್ರಕೃತಿ ಗುಣಗಳ ಫಲವಾದ ಭೋಗಗಳಲ್ಲೇ ತೊಳಲುತ್ತಾನೆ. ಸತ್ವಗುಣದ ಫಲ ಸುಖವಾದರೆ ರಜೋಗುಣದ ಫಲ ದುಃಖ ಮತ್ತು ತಮೋಗುಣದ ಫಲ ಮೋಹ. ಇವುಗಳ ಅನುಭವ ಮುಕ್ತನೊಬ್ಬನನ್ನು ಹೊರತು ಮಿಕ್ಕೆಲ್ಲರಿಗೂ ಅನಿವಾರ್ಯ. ಪ್ರಕೃತಿಜನ್ಯವಾದ ವಿಶ್ವವೇ ಸುಖದುಃಖಮೋಹಮಯವಾದುದೆಂದು ಸಾಂಖ್ಯರ ಸಿದ್ಧಾಂತ. ಕಾವ್ಯದಲ್ಲಿ ಮಾತ್ರ ದುಃಖಮೋಹಗಳ ಸ್ಪರ್ಶವಿಲ್ಲವೆಂದು ಮಮ್ಮಟನ ತಾತ್ಪರ್ಯ.

[7] ವೈಶೇಷಿಕ ದರ್ಶನದ ಪ್ರಕಾರ ಎಲ್ಲ ಕಾರ್ಯಗಳೂ ಎರಡು ಬಗೆಯ ಕಾರಣ ಸಾಮಗ್ರಿಯನ್ನವಲಂಬಿಸಿ ಹುಟ್ಟುತ್ತವೆ. ಒಂದು ಮಡಕೆಯಾಗಬೇಕಾದರೆ ಮೊದಲು ಮಣ್ಣು ಬೇಕು. ಇದು

ಅಧೀನವಾಗಿರುತ್ತದೆ; (ಸಿಹಿ, ಹುಳಿ, ಮುಂತಾದ) ಆರೇ ರಸಗಳು ಮಾತ್ರ ಅಲ್ಲಿ ಉಂಟು; ಎಲ್ಲವೂ ಹೃದ್ಯವೆಂಬಂತೆಯೂ ಇಲ್ಲ[9]; ಆದರೆ ಕವಿವಾಣಿಯ ಸೃಷ್ಟಿ

---

ಉಪಾದಾನಕಾರಣ. ಆಮೇಲೆ ಕುಂಬಾರನ ಚಕ್ರ ತಿರುಗಬೇಕು, ತಿರುಗಿಸಲು ಕೋಲೂ ಬೇಕು. ಎಲ್ಲಕ್ಕಿಂತಲೂ ಹೆಚ್ಚಾಗಿ ಕುಂಬಾರ ಬೇಕು. ಈ ಎಲ್ಲ ಸಾಮಗ್ರಿಗಳೂ ಸಾಮಾನ್ಯವಾಗಿ ಸಹಕಾರಿ ಕಾರಣವೆನಿಸುತ್ತವೆ. ಜಗತ್ತಿನ ಸೃಷ್ಟಿಗೆ ಉಪಾದಾನವಾವುದೆಂದರೆ ಪೃಥಿವೀ, ಜಲ, ವಾಯು, ತೇಜಸ್ಸು, ಇವುಗಳ ಪರಮಾಣುಗಳೆಂದೇ ವೈಶೇಷಿಕರು ಹೇಳುತ್ತಾರೆ. ಸ್ಥೂಲಪದಾರ್ಥಗಳನ್ನು ಕಡೆತನಕ ವಿಭಾಗಿಸುತ್ತಾ ಹೋದರೆ ಕಣ್ಣಿಗೆ ಕಾಣುವಂತಹ ಕಡೆಯ ಪರಿಮಾಣವನ್ನು ಬಿಸಿಲು ಕೋಲಿನಲ್ಲಿರುವ ಕಣಕ್ಕೆ ಹೋಲಿಸಿ ತ್ರುಟಿಯೆನ್ನುತ್ತಾರೆ, ಅದಕ್ಕೆ ರೂಪವಿರುವುದರಿಂದ ಅದನ್ನು ತ್ರ್ಯಣುಕವೆಂದು ಭಾವಿಸಿ, ಅದು ಮತ್ತೂ ವಿಭಾಗಕ್ಕೆ ಬರುವುದೆನ್ನುತ್ತಾರೆ. ಮೂರು ದ್ವ್ಯಣುಕಗಳ ಸಂಯೋಗವೇ ತ್ರ್ಯಣುಕ. ಒಂದೊಂದು ದ್ವ್ಯಣುಕದಲ್ಲೂ ರೂಪಾದಿಗಳಿಲ್ಲದ ಎರಡು ಪರಮಾಣುಗಳುಂಟೆಂದು ತಿಳಿಯುತ್ತಾರೆ. ಹೀಗೆ ರೂಪಾದಿಗಳಿಲ್ಲದ ಪರಮಾಣುಗಳು ರೂಪವುಳ್ಳ ಸ್ಥೂಲ ವಸ್ತುಗಳಿಗೆ ಪರಸ್ಪರ ಸಂಯೋಗ ವಿಶೇಷದಿಂದಲೇ ಕಾರಣವಾಗುವುವೆಂದು ಅವರ ತತ್ತ್ವ. ಈ ಪರಮಾಣುಗಳನ್ನು ಸಮವಾಯಿ ಕಾರಣಗಳೆಂದೂ ಸಂಯೋಗವನ್ನು ಅಸಮವಾಯಿಕಾರಣವೆಂದೂ ಹೇಳುವುದುಂಟು. ವಿಯುಕ್ತವಾದ ಪರಮಾಣುಗಳು ಸಂಯುಕ್ತವಾಗಲು ಅದೃಷ್ಟ ಅಥವಾ ಕರ್ಮ ನಿಮಿತ್ತ ಕಾರಣವೆಂದು ಅವರೂ ಒಪ್ಪುತ್ತಾರೆ. ಹೋಲಿಸಿ—

ಜಾಲಾಂತರಗತೇ ಭಾನೌ ಯತ್ ಸೂಕ್ಷ್ಮಂ ದೃಶ್ಯತೇ ರಜಃ |
ತಸ್ಯ ಷಷ್ಠ್ಯೈಕಭಾಗೋ ಯಃ ಪರಮಾಣುಃ ಸ ಕೀರ್ತಿತಃ ||

[8] ಕಾರಿಕೆಯಲ್ಲಿ 'ಅನನ್ಯ ಪರತಂತ್ರಾಂ' ಎಂದಿದೆ. ವೃತ್ತಿಯಲ್ಲಿ ಬ್ರಹ್ಮಸೃಷ್ಟಿ . . . 'ಕಾರಣ ಪರತಂತ್ರ'ವೆಂದು ಹೇಳಿದೆ. ಆದ್ದರಿಂದ ಎರಡು ಕಡೆಗಳಲ್ಲೂ 'ಪರತಂತ್ರ' ಎಂದರೆ 'ಅಧೀನ ಎಂಬಷ್ಟೇ ಅರ್ಥ ಗ್ರಂಥಕರ್ತನಿಗೆ ವಿವಕ್ಷಿತವೆನಿಸುತ್ತದೆ. ಆದರೆ ಅಮರಕೋಶದಲ್ಲಿ "ಪರತಂತ್ರಃ ಪರಾಧೀನಃ" ಎಂದಿರುವುದರಿಂದ ಕಾರಿಕೆಯಲ್ಲಿ ಅನ್ಯ, ಪರ, ಎನ್ನುವಾಗ ಪುನರುಕ್ತಿ ದೋಷ ಬಂದೀತೆಂದು ಅದನ್ನು ತಪ್ಪಿಸಲು ಪ್ರದೀಪಕಾರನು 'ಅನನ್ಯ' ಎಂದರೆ 'ಕವಿ, ಮತ್ತು ಆತನ ಪ್ರತಿಭೆಗಳನ್ನು ಬಿಟ್ಟು' ಎಂದೂ 'ಪರ' ಎಂದರೆ 'ತನಗಿಂತ ಬೇರೊಂದು' ಎಂದೂ ಅರ್ಥಗಳನ್ನೆಳೆದಿದ್ದಾನೆ. 'ಅಸೂರ್ಯಂಪಶ್ಯ' ಎಂಬ ಸಮಾಸಪದಕ್ಕೆ ಸೂರ್ಯನನ್ನೂ ಕೂಡ ನೋಡದಷ್ಟು ಸುಖವಾಸದಲ್ಲಿರುವವನು ಎಂದರ್ಥ ಮಾಡಿಕೊಳ್ಳುವಂತೆ ನಿಷೇಧಾರ್ಥಕವಾದ ಅಕಾರವನ್ನು ಪ್ರಕೃತದಲ್ಲಿಯೂ ಕ್ರಿಯೆಯೊಡನೆ ಅನ್ವಯಿಸಿಕೊಂಡು ಮತ್ತಾವುದಕ್ಕೂ ಅಧೀನವಲ್ಲದ್ದೆಂಬ ಅರ್ಥವನ್ನೇ ಮಾಡಿಕೊಳ್ಳಬೇಕು. ಆಗ ಕವಿವಾಣಿಯ ಸ್ವಾತಂತ್ರ್ಯವನ್ನೇ ಮತ್ತಷ್ಟು ಒತ್ತಿ ಹೇಳಿದಂತಾಗುತ್ತದೆ.

[9] ಬ್ರಹ್ಮಸೃಷ್ಟಿಯಲ್ಲಿರುವ ರಸಗಳೆಂದರೆ ರುಚಿಗಳು. ಮಧುರ, ಆಮ್ಲ, ಲವಣ, ಕಟು, ಕಷಾಯ, ತಿಕ್ತ, ಎಂಬ ಆರನ್ನೇ ತಾರ್ಕಿಕರು ರಸಗಳೆಂದು ತಿಳಿಯುತ್ತಾರೆ. ಕಾವ್ಯದಲ್ಲಿ ರಸವೆಂದರೆ ಶೃಂಗಾರಾದಿಗಳು ಒಂಭತ್ತು. ಕವಿಸೃಷ್ಟಿ ರಸಸಂಖ್ಯೆಯಲ್ಲಷ್ಟೇ ಅಲ್ಲ; ಆಸ್ವಾದ್ಯತ್ವದಲ್ಲಿಯೂ ಅಧಿಕವೆಂದು ಗ್ರಂಥಕಾರನ ತಾತ್ಪರ್ಯ

ಇದಕ್ಕೆ ಎಲ್ಲ ಬಗೆಯಲ್ಲಿಯೂ ವಿಲಕ್ಷಣವಾದುದು; ಆದ್ದರಿಂದಲೇ ಅದು ಬ್ರಹ್ಮ ಸೃಷ್ಟಿಗಿಂತಲೂ ಮಿಗಿಲಾದುದು[10]. ಮಿಗಿಲೆನ್ನುವುದರಿಂದ ನಮಸ್ಕರಿಸುತ್ತೇನೆಂಬ ಅರ್ಥ ಧ್ವನಿತವಾಗುತ್ತದೆ[11]. ಆದ್ದರಿಂದ ಕವಿವಾಣಿಯನ್ನು ನಮಿಸುವೆನೆಂದು ತಾತ್ಪರ್ಯ.

ಗ್ರಂಥದ ವಿಷಯವು[12] ಅನೇಕ ಪ್ರಯೋಜನಗಳನ್ನುಳ್ಳದ್ದೆಂದು ವಿವರಿಸಲು ಇದನ್ನು ಹೇಳಿದೆ!—

ಕಾವ್ಯಂ ಯಶಸೇಽರ್ಥಕೃತೇ ವ್ಯವಹಾರವಿದೇ ಶಿವೇತರಕ್ಷತಯೇ ।
ಸದ್ಯಃ ಪರನಿರ್ವೃತಯೇ ಕಾಂತಾಸಮ್ಮಿತತಯೋಪದೇಶಯುಜೇ[13] ‖ ೨ ‖

ಕೀರ್ತಿಗೆ, ಧನಲಾಭಕ್ಕೆ, ವ್ಯವಹಾರಜ್ಞಾನಕ್ಕೆ, ಅಶುಭದ ನಿವಾರಣೆಗೆ, ತತ್ಕಾಲದಲ್ಲಿ ಪರಮಾನಂದಕ್ಕೆ, ಇನಿಯಳಂತೆ ಉಪದೇಶಯೋಜನೆಗೆ—ಎಲ್ಲಕ್ಕೂ ಕಾವ್ಯ ಸಹಾಯಕ.

ಕೀರ್ತಿ ಹರಡುವುದಕ್ಕೆ ಕಾಲಿದಾಸನೇ ಮೊದಲಾದ ಕವಿಗಳು ನಿದರ್ಶನ[14]; ಶ್ರೀ ಹರ್ಷನೇ ಮುಂತಾದವರಿಂದ ಧಾವಕನೇ ಮೊದಲಾದ ಕವಿಗಳು ಹಣವನ್ನು

---

10 ಉಪಮೇಯವಾದ ಕವಿಸೃಷ್ಟಿಯೇ ಪ್ರಸಿದ್ಧೋಪಮಾನವಾದ ಬ್ರಹ್ಮಸೃಷ್ಟಿಗಿಂತ ಅಧಿಕವೆಂದು ವರ್ಣಿಸಿರುವುದರಿಂದ ಮಂಗಳಶ್ಲೋಕದಲ್ಲಿ ವ್ಯತಿರೇಕಾಲಂಕಾರವು ಸ್ಪಷ್ಟ. ಕವಿಯು ಬ್ರಹ್ಮನಿಗಿಂತಲೂ ದೊಡ್ಡವನೆಂಬುದೂ ಈ ಅಲಂಕಾರದಿಂದಲೇ ಸಿದ್ಧವಾಗುತ್ತದೆ.

11 ವ್ಯತಿರೇಕಾಲಂಕಾರವು ವಾಚ್ಯವಾಗಿರುವಂತೆ ನಮಸ್ಕಾರಮಾಡುತ್ತೇನೆಂಬ ವಾಕ್ಯವು ವಾಚ್ಯವಲ್ಲ. ಇದು ಅಲಂಕಾರದಿಂದ ವ್ಯಂಗ್ಯ. ಆದಿಶ್ಲೋಕದಲ್ಲಿ ಅದು ಅತ್ಯಂತ ಪ್ರಸಕ್ತವೂ ಪ್ರಧಾನವೂ ಆದುದರಿಂದ ಮುಂದೆ ಹೇಳುವಂತೆ ಈ ಶ್ಲೋಕವು ಉತ್ತಮಕಾವ್ಯವೆನಿಸಲು ಸಾಧಕವಾಗಿದೆ.

12 ಗ್ರಂಥವೆಂದರೆ ಲಕ್ಷಣಗ್ರಂಥವಾದ ಕಾವ್ಯಪ್ರಕಾಶ. ಇದರ ವಿಷಯವೆಂದರೆ ಲಕ್ಷಣಗಳೇ. ಆದರೆ ಎರಡನೆ ಕಾರಿಕೆಯಲ್ಲಿ ಲಕ್ಷಣಗಳ ಪ್ರಯೋಜನವನ್ನು ವರ್ಣಿಸಿಲ್ಲ; ಕಾವ್ಯದ ಪ್ರಯೋಜನವನ್ನೇ ವರ್ಣಿಸಿದೆ. ಈ ವಿಸಂಗತಿಯನ್ನು ತಪ್ಪಿಸಲು ಪ್ರದೀಪಕಾರನು ಲಕ್ಷಣಗಳು ಕಾವ್ಯಕ್ಕೆ ಅಂಗಗಳಾದ್ದರಿಂದ, ಪ್ರಧಾನವಾದ ಕಾವ್ಯವು ಸಪ್ರಯೋಜನವಾದರೆ, ಅಂಗವಾದ ಲಕ್ಷಣಕ್ಕೂ ಬೆಲೆ ಬರುತ್ತದೆಂದು ವಿವರಿಸಿದ್ದಾನೆ. ಆದರೆ ಸಾಮಾನ್ಯವಾಗಿ ಉಳಿದ ಟೀಕಾಕಾರರೆಲ್ಲರೂ ಗ್ರಂಥವಿಷಯವೆಂದರೆ ಕಾವ್ಯವೆಂದೇ ನೇರವಾಗಿ ಅರ್ಥಮಾಡಿಬಿಡುತ್ತಾರೆ.

13 ಕಾರಿಕೆಯಲ್ಲಿರುವ ಕೃತ್, ವಿದ್, ಯುಜ್, ಎಂಬ ಪದಗಳು 'ಸಂಪದ್' ಎಂಬಂತೆ ಕ್ವಿಬಂತವಾದ ಭಾವನಾಮಗಳು. ಸುಮ್ಮನೆ 'ಅರ್ಥಾಯ' ಎಂದಿದ್ದರೆ 'ಹಣಕ್ಕೆ' ಎಂದಾಗುತ್ತಿತ್ತು. 'ಅರ್ಥಕೃತೇ' ಎಂದರೆ 'ಹಣದ ಸಂಪಾದನೆಗೆ' ಎಂಬ ವಿಶಿಷ್ಟಾರ್ಥವಿದೆ. ಹಾಗೆಯೇ 'ವ್ಯವಹಾರವಿದೇ' ಎಂದರೆ ವ್ಯವಹಾರಜ್ಞಾನವಾಗುವುದಕ್ಕೆ ಎಂದು ಅಭಿಪ್ರಾಯ.

14 ಅಲಂಕಾರಶಾಸ್ತ್ರಕಾರರು ಕಾಳಿದಾಸನಿಗೇ ಕವಿಗಳಲ್ಲಿ ಅಗ್ರಸ್ಥಾನವನ್ನಿತ್ತಿರುವುದು ಅವರ ರುಚಿಶುದ್ಧಿಗೆ ಸಾಕ್ಷಿ.

ಗಳಿಸಿದುದು ಸುವಿದಿತ[15]; ರಾಜನೇ ಮುಂತಾದವರಿಗೆ ಉಚಿತವಾದ ಆಚಾರವೇನೆಂಬ ಪರಿಜ್ಞಾನಕ್ಕೂ ಕಾವ್ಯವೇ ಸಾಧಕ[16]; ಸೂರ್ಯನೇ ಮುಂತಾದ ದೇವತೆಗಳ ಕೃಪೆಯಿಂದ ಮಯೂರನೇ ಮೊದಲಾದ ಕವಿಗಳು ರೋಗಮುಕ್ತರಾದುದು ಪ್ರಸಿದ್ಧವಾಗಿದೆ[17]. ಎಲ್ಲಕ್ಕಿಂತಲೂ ಮೇಲಾದ ಪ್ರಯೋಜನವೆಂದರೆ ರಸಾಸ್ವಾದನಕ್ಷಣದಲ್ಲಿಯೇ ಜನಿಸಿ ಬೇರೆಲ್ಲವನ್ನೂ ಮರೆಸಿಬಿಡುವಂತಹ ಪರಮಾನಂದ[18]. (ಕಡೆಯ ಪ್ರಯೋಜನವಾದ) ಉಪದೇಶದಲ್ಲಿ ಅನೇಕ ಬಗೆಗಳುಂಟು :—

ವೇದ ಮುಂತಾದ ಶಾಸ್ತ್ರಗಳಲ್ಲಿ ಶಬ್ದ ಪ್ರಧಾನವಾದ ಕಾರಣ ಅವುಗಳ ಆದೇಶ ಪ್ರಭುವಿನ ಅಪ್ಪಣೆಯಂತೆ[19]; ಪುರಾಣವೇ ಮೊದಲಾದ ಇತಿಹಾಸಗಳಲ್ಲಿ ಅರ್ಥದ

---

[15] ರತ್ನಾವಳೀ ನಾಟಿಕೆಯನ್ನು ಬರೆದವನು ಧಾವಕನೆಂದೂ, ಅದನ್ನು ತನ್ನರಸನಾದ ಹರ್ಷನ ಹೆಸರಲ್ಲಿ ಪ್ರಕಟಿಸಿ ದುಡ್ಡುಮಾಡಿದನೆಂದೂ ಶ್ರೀ ವಿದ್ಯಾಚಕ್ರವರ್ತಿಯೇ ಮುಂತಾದ ವ್ಯಾಖ್ಯಾಕಾರರು ಬರೆಯುತ್ತಾರೆ. ಧಾವಕನೆಂದರೆ ಅಗಸ ; ಇದು ಭಾಸನ ಮತ್ತೊಂದು ಹೆಸರೆಂದೂ ಕೆಲವರು ಸೂಚಿಸಿದ್ದಾರೆ. ಸಂಸ್ಕೃತ ಸಂಶೋಧಕರೆಲ್ಲರೂ ಈ ಅಂಶಗಳನ್ನು ಮಾನ್ಯಮಾಡಿಲ್ಲ.

[16] ರಾಜ, ಮಂತ್ರಿ, ಗುರು, ಮುಂತಾದವರು ಹೇಗೆ ನಡೆದುಕೊಳ್ಳಬೇಕೆಂಬ ಬಗ್ಗೆ ಆಚಾರದ ಔಚಿತ್ಯವನ್ನು ತೋರಿಸುವುದೇ ಸಂಸ್ಕೃತಕಾವ್ಯದ ವೈಶಿಷ್ಟ್ಯ.

[17] ಇದರಿಂದ ಮಮ್ಮಟನ ಕಾಲದಲ್ಲಿ ಕಾವ್ಯದ ಬಗ್ಗೆ ಇದ್ದ ಧರ್ಮಶ್ರದ್ಧೆಯೂ ವ್ಯಕ್ತವಾಗುತ್ತದೆ. ಕಾವ್ಯದಿಂದ ದೇವತಾನುಗ್ರಹವನ್ನು ಸಂಪಾದಿಸಬಹುದೆಂದೂ, ಕರ್ಮವಿಪಾಕದಿಂದ ಬಂದ ರೋಗಾದಿ ಆಪತ್ತುಗಳನ್ನು ನಿವಾರಿಸಿಕೊಳ್ಳಬಹುದೆಂದೂ ಜನರು ತಿಳಿಯುತ್ತಿದ್ದರು. ಸಂಸ್ಕೃತದಲ್ಲಿರುವ ಸ್ತೋತ್ರವೆಂಬ ಕಾವ್ಯರಾಶಿಗೆ ಈ ಭಾವನೆಯೇ ಮೂಲ.

ಮಯೂರಕವಿಯು ಶ್ರೀಹರ್ಷನ ಆಸ್ಥಾನದಲ್ಲಿದ್ದನೆಂದೂ ಪ್ರಸಿದ್ಧನಾದ ಬಾಣಭಟ್ಟನೇ ಈತನ ಅಳಿಯನೆಂದೂ ಐತಿಹ್ಯವಿದೆ. ಈತನ ಮಯೂರಾಷ್ಟಕವೆಂಬ ಮುಕ್ತಕಗಳೂ ಸೂರ್ಯಶತಕವೆಂಬ ಸ್ತೋತ್ರಕಾವ್ಯವೂ ಈಗ ಉಪಲಬ್ಧವಿವೆ. ಋತುಸ್ನಾನಮಾಡಿಕೊಂಡು ಬರುತ್ತಿದ್ದ ತನ್ನ ಮಗಳ ಸೌಂದರ್ಯವನ್ನೇ ವರ್ಣಿಸಿ ಇವನು ಅಷ್ಟಕವನ್ನು ಹೇಳಲು, ಅದರಿಂದ ಕುಪಿತೆಯಾದ ಮಗಳು ಕುಷ್ಠರೋಗ ಬರಲೆಂದು ತಂದೆಯನ್ನು ಶಪಿಸಿದಳಂತೆ. ಆ ರೋಗ ಪರಿಹಾರವಾಗದಿದ್ದರೆ ಆತ್ಮಹತ್ಯೆ ಮಾಡಿಕೊಳ್ಳುವೆನೆಂದು ಪ್ರತಿಜ್ಞೆಮಾಡಿ ತನ್ನ ದೇಹವು ತೂಗುವಂತೆ ನೂರು ದಾರಗಳಿಂದ ಮರಕ್ಕೆ ಕಟ್ಟಿಸಿಕೊಂಡು, ಆರೋಗ್ಯದಾತನಾದ ಸೂರ್ಯದೇವನನ್ನು ಒಂದೊಂದೇ ಶ್ಲೋಕದಿಂದ ಭಜಿಸುತ್ತ, ಒಂದು ಶ್ಲೋಕ ಮುಗಿದೊಡನೆ ಒಂದು ದಾರವನ್ನು ಕತ್ತರಿಸುತ್ತ ಹೋದನಂತೆ. ನೂರನೆಯ ಶ್ಲೋಕ ಹೇಳಿ ಮುಗಿಸುವಷ್ಟರಲ್ಲಿ ದೇವನು ಪ್ರತ್ಯಕ್ಷನಾಗಿ ರೋಗ ಶಮನಮಾಡಿದನಂತೆ. ಇದು ಮಯೂರನ ಸೂರ್ಯಶತಕದ ಪ್ರಾಶಸ್ತ್ಯವನ್ನು ಬಿಂಬಿಸುವ ದಂತಕಥೆ.

[18] ರಸದ ಮೀಮಾಂಸೆಯು ಮುಂದೆ ನಾಲ್ಕನೆಯ ಉಲ್ಲಾಸದಲ್ಲಿ ವಿಶದವಾಗಿ ಬರುತ್ತದೆ.

[19] ವಾಙ್ಮಯವನ್ನೆಲ್ಲ ಉಪದೇಶದ ವೈವಿಧ್ಯದೃಷ್ಟಿಯಿಂದ ಪ್ರಭುಸಮ್ಮಿತ, ಸುಹೃತ್ಸಮ್ಮಿತ, ಕಾಂತಾಸಮ್ಮಿತ, ಎಂದು ಮೂರು ಬಗೆಯಾಗಿ ಮಮ್ಮಟನಿಗಿಂತ ಪ್ರಾಚೀನನಾದ ಭಟ್ಟನಾಯಕನು ವಿಂಗಡಿಸಿದ್ದನು. ಭಟ್ಟನಾಯಕನು ಧ್ವನಿವಿರೋಧಿಯಾದರೂ ಮಮ್ಮಟನು ಇಲ್ಲಿ ಆತನ

ತಾತ್ಪರ್ಯ ಮಾತ್ರ ಪ್ರಧಾನವಾಗಿರುವುದರಿಂದ ಅವುಗಳ ಆದೇಶ ಗೆಳೆಯನ ಸೂಚನೆಗೆ ಸಮಾನ[20]; ಆದರೆ ಇವೆರಡಕ್ಕೂ ವಿಲಕ್ಷಣವಾದುದೇ ಕಾವ್ಯದ ಉಪದೇಶಕ್ರಮ. ಕಾವ್ಯದಲ್ಲಿ ಶಬ್ದ, ಅರ್ಥ, ಎರಡೂ ತಮ್ಮ ಪ್ರಾಧಾನ್ಯವನ್ನು ಕಳೆದುಕೊಂಡು ರಸ ಪ್ರತೀತಿಗೆ ಅನುಕೂಲಿಸುವ ಕಾರ್ಯದಲ್ಲಿ ಮಾತ್ರ ನಿರತವಾಗಿಬಿಡುತ್ತವೆ[21]. ಹೀಗೆ ಲೋಕೋತ್ತರವಾದ ವರ್ಣನೆಯಲ್ಲಿ ನಿಪುಣನಾದವನೇ ಕವಿ, ಅವನ ಕೃತಿಯೇ ಕಾವ್ಯ[22].

---

ವ್ಯಾಪಾರ ಪ್ರಾಧಾನ್ಯವಾದದ ಸಾಮಾನ್ಯಾಂಶವನ್ನು ಅನುಸರಿಸಿದ್ದಾನೆ. ವೇದಗಳಲ್ಲಿ ಮತ್ತು ಧರ್ಮ ಶಾಸ್ತ್ರಗಳಲ್ಲಿ ವಿಧಿಸಿರುವುದನ್ನು ಚಾಚೂ ತಪ್ಪದೆ ಅಕ್ಷರಶಃ ಪಾಲಿಸಬೇಕು. ಒಂದು ಶಬ್ದಕ್ಕೆ ಲೋಪವಾದರೂ ವಿಧಿಲೋಪ ಬಂದು ಕರ್ಮವು ಹಾಳಾಗುತ್ತದೆ. ಆದ್ದರಿಂದ ವೇದದ ಆದೇಶವು ರಾಜಾಜ್ಞೆಯಂತೆ ಶಬ್ದಪ್ರಧಾನ.

[20] ಇತಿಹಾಸಪುರಾಣಗಳಲ್ಲಿ ಹಾಗಲ್ಲ. ಅನೇಕ ಪೂರ್ವಕಥೆಗಳ ಸಹಾಯದಿಂದ ಯುಕ್ತಿ ಯುಕ್ತವಾಗಿ ನಿಯಮಾನುಷ್ಠಾನದ ಪ್ರಯೋಜನವನ್ನು ಅವು ಮನಸ್ಸಿಗೆ ಬಿಂಬಿಸುತ್ತವೆ. ಈ ಕಥೆ ಗಳು ಅತಿಮಾನುಷವೂ ಅಸಂಭವವೂ ಆಗಿರುವ ಕಾರಣ, ಅವಕ್ಕೆ ಅಕ್ಷರಶಃ ಸತ್ಯತ್ವವನ್ನಾರೋಪಿಸು ವಂತಿರುವುದಿಲ್ಲ. ಅವನ್ನು 'ಅರ್ಥವಾದ'ವೆನ್ನುವರು; ಎಂದರೆ ಅವುಗಳ ತಾತ್ಪರ್ಯ ಮಾತ್ರ ಗ್ರಾಹ್ಯ ವೆಂದು ಭಾವ. ಆದುದರಿಂದ ಇತಿಹಾಸಾದಿಗಳು ಗೆಳೆಯನ ಸಲಹೆಗಳಂತೆ ಅರ್ಥಪ್ರಧಾನ.

[21] ಕೆಳಗೆ ಬರೆದ ಭಟ್ಟನಾಯಕನ ಶ್ಲೋಕಗಳೇ ಮಮ್ಮಟನ ಉಕ್ತಿಗಳಿಗೆ ಆಧಾರ —

ಶಬ್ದಪ್ರಾಧಾನ್ಯಮಾಶ್ರಿತ್ಯ ತತ್ರ ಶಾಸ್ತ್ರಂ ಪೃಥಗ್ ವಿದುಃ |<br>
ಅರ್ಥೇ ತತ್ತ್ವೇನ ಯುಕ್ತೇ ತು ವದಂತ್ಯಾಖ್ಯಾನಮೇತಯೋಃ ||<br>
ದ್ವಯೋರ್ಗುಣತ್ವೇ ವ್ಯಾಪಾರಪ್ರಾಧಾನ್ಯೇ ಕಾವ್ಯಗೀರ್ಭವೇತ್ ||

ವಸ್ತುತಃ ಈ ಮಾತುಗಳು ಭಟ್ಟನಾಯಕನ ಭಾವಕತ್ವ, ಭೋಜಕತ್ವಗಳೆಂಬ ಕಾವ್ಯವ್ಯಾಪಾರಗಳ ಉತ್ಕರ್ಷಸ್ಥಾಪನೆಗೆ ಸಹಾಯವಾಗುವಂತೆಯೇ ವ್ಯಂಜಕತ್ವವ್ಯಾಪಾರದ ಪ್ರಕರ್ಷಸ್ಥಾಪನೆಗೂ ಸಹಾಯವಾಗಬಹುದಾದರೂ, ಭಟ್ಟನಾಯಕನು ವ್ಯಾಪಾರವನ್ನು ಪ್ರಧಾನವೆನ್ನುವ ಹಾಗೆ ವ್ಯಂಜಕತ್ವವ್ಯಾಪಾರವೇ ಕಾವ್ಯದಲ್ಲಿ ಪ್ರಧಾನವೆಂದು ಧ್ವನಿವಾದಿಗಳು ಹೇಳುವಂತಿಲ್ಲ. ಆನಂದ ವರ್ಧನಾದಿ ಧ್ವನಿವಾದಿಗಳಿಗೆ ವ್ಯಂಗ್ಯವಾದ ವಸ್ತು, ಅಲಂಕಾರ, ರಸಗಳೇ ವ್ಯಾಪಾರಕ್ಕಿಂತಲೂ ಪ್ರಧಾನ. ಕಾವ್ಯಕ್ಕೆ ವಿಶ್ರಾಂತಿ ಬರುವುದು ಪ್ರಧಾನವಾದ ವ್ಯಂಗ್ಯಾರ್ಥದಲ್ಲೇ ಹೊರತು, ತತ್ಸ ಹಾಯಕವಾದ ವ್ಯಾಪಾರದಲ್ಲಲ್ಲ. ಮಮ್ಮಟನೇ ಮುಂದೆ ವ್ಯಂಗ್ಯಪ್ರಾಧಾನ್ಯವನ್ನು ಅಂಗೀಕರಿಸು ತ್ತಾನೆ. ಈ ಪೂರ್ವಾಪರವಿರೋಧವನ್ನು ಮಾಣಿಕ್ಯಚಂದ್ರನು ಎತ್ತಿ ತೋರಿಸಿದ್ದಾನೆ. ಆದರೆ ಮಮ್ಮಟನ ವಾಕ್ಯವನ್ನು ವ್ಯಂಗ್ಯವಾದ ರಸವೇ ಕಾವ್ಯದ ಪರಮ ಲಕ್ಷ್ಯ; ವ್ಯಂಜನಾವ್ಯಾಪಾರವು ರಸಕ್ಕೆ ಅಂಗ ಮಾತ್ರ ಎಂಬುದಾಗಿ ಅರ್ಥಮಾಡಿಕೊಂಡು ವಿರೋಧವನ್ನು ಪರಿಹರಿಸಿಕೊಳ್ಳಲೂ ಅವಕಾಶವಿದೆ. ಹೀಗೆ ಮಾಡುವಾಗ ವಸ್ತು, ಅಲಂಕಾರ, ಧ್ವನಿಗಳ ಪ್ರಾಧಾನ್ಯಕ್ಕೆ ಸ್ವಲ್ಪ ಕೊರತೆಯಾಗಬಹುದು.

[22] ಹೋಲಿಸಿ—ಪ್ರಜ್ಞಾ ನವನವೋನ್ಮೇಷಶಾಲಿನೀ ಪ್ರತಿಭಾ ಮತಾ |<br>
ತದನುಪ್ರಾಣನಾಜೀವದ್ವರ್ಣನಾನಿಪುಣಃ ಕವಿಃ ||<br>
ತಸ್ಯ ಕರ್ಮ ಸ್ಮೃತಂ ಕಾವ್ಯಂ . . .

(ಭಟ್ಟತೌತನ ಕಾವ್ಯಕೌತುಕ)

ಕಾಂತೆಯಂತೆ ಮೊದಲು ಸರಸವಾಗಿ ಮನೋಲ್ಲಾಸವನ್ನು ತರುವ ಮೂಲಕ ತನ್ನ ಕಡೆಗೆ ಗಮನವನ್ನು ಸೆಳೆದುಕೊಂಡು, 'ರಾಮಾದಿಗಳಂತೆ ನಡೆಯಬೇಕು, ರಾವಣಾದಿಗಳಂತಲ್ಲ'ವೆಂಬ ನೀತಿಯ ಉಪದೇಶವನ್ನು (ಅಪ್ರತ್ಯಕ್ಷವಾಗಿ) ಮಾಡಿ ಕೊಡುತ್ತದೆ[23]. ಈ ಪ್ರಯೋಜನಗಳಲ್ಲಿ ಕೆಲವು ಕವಿಗೂ ಕೆಲವು ಸಹೃದಯನಿಗೂ ಯಥಾನುಗುಣವಾಗಿ ಅನ್ವಯಿಸುತ್ತವೆ[24]. ಆದ್ದರಿಂದ ಕಾವ್ಯ ಎಲ್ಲ ರೀತಿಯಿಂದಲೂ ಆದರಣೀಯ.

ಕಾವ್ಯದ ಪ್ರಯೋಜನವನ್ನು ಹೇಳಿದನಂತರ ಈಗ ಕಾವ್ಯದ ಕಾರಣ ಸಾಮಗ್ರಿಯನ್ನು ವಿವರಿಸುತ್ತಾನೆ:—

ಶಕ್ತಿರ್ನಿಪುಣತಾ ಲೋಕಶಾಸ್ತ್ರಕಾವ್ಯಾದ್ಯವೇಕ್ಷಣಾತ್ ।
ಕಾವ್ಯಜ್ಞಶಿಕ್ಷಯಾಭ್ಯಾಸ ಇತಿ ಹೇತುಸ್ತದುದ್ಭವೇ ॥ ೩ ॥

'ಶಕ್ತಿ'[25]; ಲೋಕ, ಶಾಸ್ತ್ರ, ಕಾವ್ಯ, ಮುಂತಾದುವುಗಳ ವಿಶೇಷ ಪರಿಚಯ

---

[23] ಕಾವ್ಯದಲ್ಲಿಯೂ ವೇದ, ಇತಿಹಾಸಗಳಂತೆ ಉಪದೇಶಪರತ್ವವಿದ್ದೇ ಇದೆ. ಉಪದೇಶವು ವೇದದಲ್ಲಿ ಕ್ರೂರವಾಗಿಯೂ ಇತಿಹಾಸದಲ್ಲಿ ಪ್ರೇರಕವಾಗಿಯೂ ಇದ್ದರೆ ಕಾವ್ಯದಲ್ಲಿ ಮಾತ್ರ ಮೃದು ಮಧುರವಾಗಿಯೂ ಸರಸಹೃದಯಂಗಮವಾಗಿಯೂ ಇರುತ್ತದೆ. ಇಷ್ಟೇ ವ್ಯತ್ಯಾಸ. ಉಪದೇಶ ಮಾರ್ಗದಲ್ಲಿ ವ್ಯತ್ಯಾಸವೇ ಹೊರತು ಉಪದೇಶವಸ್ತುವಿನಲ್ಲಿ ವ್ಯತ್ಯಾಸವಿಲ್ಲ. ಆದ್ದರಿಂದಲೇ ಕಾವ್ಯವನ್ನು ಕಾಂತಾಸಮ್ಮಿತವೆಂದು ಕರೆದಿರುವುದು. ಇದನ್ನು ಕುಂತಕನು ಶಾಸ್ತ್ರಗಳು ಕಹಿಯಾದ ಔಷಧಕ್ಕೆ ಸಮಾನವೆಂದೂ ಕಾವ್ಯವು ಅದೇ ರೋಗವನ್ನು ಪರಿಹರಿಸಬಲ್ಲ ಅಮೃತಕ್ಕೆಣೆಯೆಂದೂ ಹೇಳಿದ್ದಾನೆ—

ಕಟುಕೌಷಧವತ್ ಶಾಸ್ತ್ರಮವಿದ್ಯಾವ್ಯಾಧಿನಾಶನಮ್ ।
ಆಹ್ಲಾದ್ಯಾಮೃತವತ್ ಕಾವ್ಯಮವಿವೇಕಗದಾಪಹಮ್ ॥

ಕಾವ್ಯವು ನಿವಾರಿಸುವ ವ್ಯಾಧಿಯೆಂದರೆ ಅವಿವೇಕ; ಶಾಸ್ತ್ರವು ಗುಣಮಾಡುವ ವ್ಯಾಧಿಯಾದರೂ ಇದೇ.

[24] ಯಶಸ್ಸು, ಧನ, ಅನರ್ಥಪ್ರತೀಕಾರಗಳು ಕವಿಗೂ, ವ್ಯವಹಾರಜ್ಞಾನ, ಪರಾನಂದ, ಕಾಂತಾಸಮ್ಮಿತವಾದ ಉಪದೇಶಗಳು ಸಹೃದಯನಿಗೂ ಅನ್ವಯಿಸುವುವೆಂದು ಭಟ್ಟಗೋಪಾಲನು ಬರೆದಿದ್ದಾನೆ.

[25] ಇದಕ್ಕೇ ಪ್ರತಿಭೆಯೆಂದೂ ಹೇಳುತ್ತಾರೆ. 'ಸ್ಮೃತಿ', 'ಮತಿ', 'ಬುದ್ಧಿ', 'ಪ್ರಜ್ಞೆ' 'ಪ್ರತಿಭೆ' ಇವುಗಳ ಅರ್ಥವೈಶಿಷ್ಟ್ಯವನ್ನು ಕೆಳಗಿನ ಶ್ಲೋಕಗಳು ಸ್ಪಷ್ಟಪಡಿಸುತ್ತವೆ:—

"ಸ್ಮೃತಿರ್ವ್ಯತೀತವಿಷಯಾ ಮತಿರಾಗಾಮಿಗೋಚರಾ ।
ಬುದ್ಧಿಸ್ತಾತ್ಕಾಲಿಕೀ ಜ್ಞೇಯಾ ಪ್ರಜ್ಞಾ ತ್ರೈಕಾಲಿಕೀ ಮತಾ ॥
ಪ್ರಜ್ಞಾಂ ನವನವೋನ್ಮೇಷಶಾಲಿನೀಂ ಪ್ರತಿಭಾಂ ವಿದುಃ ।
ದ್ವೇ ವರ್ತ್ಮನೀ ಗಿರಾಂ ದೇವ್ಯಾಃ ಶಾಸ್ತ್ರಂ ಚ ಕವಿಕರ್ಮ ಚ ॥
ಪ್ರಜ್ಞೋಪಜ್ಞಂ ತಯೋರಾದ್ಯಂ ಪ್ರತಿಭೋದ್ಭವಮಂತಿಮಮ್ ॥

ದಿಂದ ಬಂದ ನೈಪುಣ್ಯ; ಕಾವ್ಯಜ್ಞರ ಶಿಕ್ಷಣದ ಮೇರೆಗೆ ಅಭ್ಯಾಸ; ಈ ಮೂರೂ ಕೂಡಿ ಕಾವ್ಯದ ಉತ್ಪತ್ತಿಗೆ ಕಾರಣಸಾಮಗ್ರಿಯೆನಿಸುತ್ತದೆ.

'**ಶಕ್ತಿ**'ಯೆಂದರೆ ಕವಿತ್ವಕ್ಕೆ ಬೀಜರೂಪವಾದ ಸಂಸ್ಕಾರವಿಶೇಷ. ಅದಿಲ್ಲದೆ ಕಾವ್ಯ ಹುಟ್ಟಲೇ ಆರದು; ಹುಟ್ಟಿದರೂ ಹಾಸ್ಯಾಸ್ಪದವಾದೀತು[26]. 'ಲೋಕ' ಎಂದರೆ ಚರಾಚರಗಳೆಲ್ಲವನ್ನೂ ಒಳಗೊಂಡ ವಿಶ್ವದ ನಡೆವಳಿಕೆ[27]. "ಶಾಸ್ತ್ರ" ಎಂದರೆ ಛಂದಸ್ಸು, ವ್ಯಾಕರಣ, ನಿಘಂಟುಕೋಶ, ಕಲೆಗಳ ಲಕ್ಷಣ, ಧರ್ಮ, ಅರ್ಥ, ಕಾಮ, ಮೋಕ್ಷಗಳನ್ನು ಕುರಿತ ಗ್ರಂಥಗಳು, ಮತ್ತು ಗಜ, ಅಶ್ವ, ಖಡ್ಗ, ಮುಂತಾದುವುಗಳ ಲಕ್ಷಣಗ್ರಂಥಗಳು[28]. 'ಕಾವ್ಯ' ಎಂದರೆ ಮಹಾಕವಿಗಳ ಕೃತಿಗಳು. 'ಮುಂತಾದುವುಗಳ' ಎಂದರೆ ಇತಿಹಾಸಾದಿಗಳ ಎಂದರ್ಥ. ಇವುಗಳನ್ನೆಲ್ಲಾ ಪರಿಶೀಲಿಸುವುದರಿಂದ ಬರುವ ನೈಪುಣ್ಯವೇ **ವ್ಯುತ್ಪತ್ತಿ**[29]. ಕಾವ್ಯವನ್ನು ಬರೆಯಲು ಮತ್ತು ವಿಮರ್ಶಿಸಲು ಬಲ್ಲವರೇ ಕಾವ್ಯಜ್ಞರು. ಅವರ ಉಪದೇಶದ ಮೇರೆಗೆ[30] ರಚನೆ ಮತ್ತು ಸಂಯೋಜನೆಗಳಲ್ಲಿ[31] ಮತ್ತೆ ಮತ್ತೆ ಪ್ರವೃತ್ತಿಯೇ '**ಅಭ್ಯಾಸ**'. ಈ ಮೂರು ಒಟ್ಟುಗೂಡಿದಾಗ ಕಾವ್ಯದ ನಿರ್ಮಾಣ ಮತ್ತು ಉತ್ಕರ್ಷಕ್ಕೆ ಕಾರಣವೆನಿಸುವುದೇ ಹೊರತು, ಒಂದೊಂದೂ ಬೇರೆಯಾಗಿದ್ದಾಗ ಕಾರಣವೆನಿಸುವುದಿಲ್ಲ. ಆದ್ದರಿಂದಲೇ ಕಾರಿಕೆಯಲ್ಲಿ 'ಹೇತುಃ' ಎಂಬ ಏಕವಚನಪ್ರಯೋಗವಿರುವುದೇ ಹೊರತು "ಹೇತವಃ" ಎಂಬ ಬಹುವಚನಪ್ರಯೋಗವಿಲ್ಲ.

---

ವಾಗ್ದೇವಿಯ ದಾರಿಗಳೆರಡು:—(೧) ಶಾಸ್ತ್ರ, (೨) ಕವಿಕರ್ಮ. ಮೊದಲನೆಯದು ಪ್ರಜ್ಞೆಯ ಫಲ; ಎರಡನೆಯದು ಪ್ರತಿಭೆಯ ಫಲ. ಹೋಲಿಸಿ—ಕನ್ನಡ ಕಾವ್ಯಾಲಂಕಾರ I. ೫.

[26] ಹೋಲಿಸಿ—ಕನ್ನಡ ಕಾವ್ಯಾಲಂಕಾರ, I. ೧೨.

[27] ಹೋಲಿಸಿ—"ಲೋಕೋ ವಿದ್ಯಾಃ ಪ್ರಕೀರ್ಣಂ ಚ ಕಾವ್ಯಾಂಗಾನಿ"—ವಾಮನ. ಲೋಕದ ವಿಚಿತ್ರ ವರ್ತನೆಯೇ ಎಂದರೆ ಸ್ವಭಾವವಿಶೇಷ ವರ್ಣನೆಯೇ ಸ್ವಭಾವೋಕ್ತಿ, ಅತಿಶಯೋಕ್ತಿ, ಮುಂತಾದ ಅಲಂಕಾರಗಳಿಗೆ ಮೂಲವೆಂದು ಭಟ್ಟಗೋಪಾಲನು ವಿವರಿಸಿದ್ದಾನೆ.

[28] ಹೋಲಿಸಿ—ಕನ್ನಡ ಕಾವ್ಯಾಲಂಕಾರ, V. ೪.

[29] 'ವ್ಯುತ್ಪತ್ತಿ'ಯೆಂದರೆ ಸಕಲ ಪದಾರ್ಥಗಳ ಪೌರ್ವಾಪರ್ಯ ಪರ್ಯಾಲೋಚನ ಕೌಶಲವೆಂದು ಮಾಣಿಕ್ಯಚಂದ್ರನ ಟೀಕೆ.

[30] ಕಾವ್ಯಜ್ಞರ ಉಪದೇಶವೆಂದರೆ ಕವಿಸಮಯವನ್ನು ಚೆನ್ನಾಗಿ ಬಲ್ಲವರ ಮಾರ್ಗದರ್ಶನವೆಂದೂ ನದಿಯೇ ಮುಂತಾದ ಜಲಾಶಯಗಳಲ್ಲಿ ಇಲ್ಲದಿದ್ದರೂ ಪದ್ಮ, ಹಂಸ, ರತ್ನ, ಮುಂತಾದುವನ್ನು ವರ್ಣಿಸಬೇಕೆಂಬ ಸಂಪ್ರದಾಯದ ದೀಕ್ಷೆಯೆಂದೂ ಮಾಣಿಕ್ಯಚಂದ್ರನ ಮತ.

[31] 'ರಚನೆ'ಯೆಂದರೆ ಬಿಡಿಬಿಡಿಯಾದ ಪದ್ಯಗಳ ರಚನೆಯೆಂದೂ, 'ಸಂಯೋಜನೆ'ಯೆಂದರೆ ಅವುಗಳನ್ನು ಗ್ರಂಥರೂಪವಾಗಿ ಸಂಘಟಿಸುವುದೆಂದೂ ಮೇಲಿನ ವ್ಯಾಖ್ಯಾಕಾರನು ಹೇಳುತ್ತಾನೆ.

ಹೀಗೆ ಕಾವ್ಯದ ಕಾರಣವನ್ನು ಹೇಳಿದನಂತರ ಈಗ ಅದರ ಸ್ವರೂಪ[32]ವನ್ನು ಹೇಳುತ್ತಾನೆ:—

ತದದೋಷೌ ಶಬ್ದಾರ್ಥೌ ಸಗುಣಾವನಲಂಕೃತೀ ಪುನಃ ಕ್ವಾಪಿ । ೪ಅ

ದೋಷಗಳಿಲ್ಲದ, ಗುಣಯುತವಾದ, ಎಲ್ಲೋ ಒಮ್ಮೊಮ್ಮೆ ಅಲಂಕಾರಗಳು ಇರದ, ಶಬ್ದಾರ್ಥಗಳೇ[33] **ಕಾವ್ಯ**[34].

**ದೋಷ, ಗುಣ, ಅಲಂಕಾರ,** ಇವುಗಳನ್ನು ಮುಂದೆ ವಿವರಿಸಲಾಗುತ್ತದೆ[35]. 'ಎಲ್ಲೋ' ಎಂಬ ಮಾತಿನ ತಾತ್ಪರ್ಯವಿಷ್ಟು:—ಸಾಮಾನ್ಯವಾಗಿ ಎಲ್ಲೆಡೆ

[32] 'ಸ್ವರೂಪ'ವೆಂದರೆ ಇಲ್ಲಿ ಲಕ್ಷಣ (=*Definition*) ಎಂದರ್ಥ.

[33] 'ಶಬ್ದಾರ್ಥಗಳೇ' ಎಂದರೆ ಇಲ್ಲಿ ಒಂದಕ್ಕೊಂದು ಸೇರಿಕೊಂಡಿರುವ ಶಬ್ದಾರ್ಥಯುಗಲವೆಂದೇ ತಿಳಿಯಬೇಕು. ರಮಣೀಯವಾದ ಶಬ್ದಮಾತ್ರವಾಗಲಿ, ಅರ್ಥಮಾತ್ರವಾಗಲಿ ಕಾವ್ಯವೆನಿಸುವುದಿಲ್ಲ. ರಮಣೀಯತೆಯು ಉಭಯಗತವೂ ಪ್ರತ್ಯೇಕಿಸಲು ಬಾರದೆಯೂ ಇರುವಂತಿದ್ದಾಗ ಮಾತ್ರ ಕಾವ್ಯವಾಗುತ್ತದೆ. ಹೋಲಿಸಿ—'ನ ಶಬ್ದಸ್ಯ ರಮಣೀಯತಾವಿಶಿಷ್ಟಸ್ಯ ಕೇವಲಸ್ಯ ಕಾವ್ಯತ್ವಮ್, ನಾಪ್ಯರ್ಥಸ್ಯ' (ವಕ್ರೋಕ್ತಿಜೀವಿತ) ಮತ್ತು 'ಶಬ್ದಾರ್ಥೌ ಸಹಿತೌ ಕಾವ್ಯಮ್'—(ಭಾಮಹ) ಕನ್ನಡ ಕಾವ್ಯಾಲಂಕಾರ, I. ೧೬. ಇಲ್ಲಿ ಶಬ್ದ, ಅರ್ಥ, ಎಂಬ ಪದಗಳಿಗೆ ಒಟ್ಟು ಕಾವ್ಯದಲ್ಲಿ ಕಿವಿಗೆ ಪ್ರಿಯವಾಗುವ ಅಂಶ ಮತ್ತು ಬುದ್ಧಿಗೆ ಪ್ರಿಯವಾಗುವ ಅಂಶವೆಂದು ಸಾಮಾನ್ಯವಾಗಿ ತಿಳಿಯಬೇಕೇ ಹೊರತು ನಿಘಂಟುಗಳಲ್ಲಿರುವ ಪ್ರತಿಶಬ್ದ ಮತ್ತು ಅರ್ಥವಿವರಣೆಗಳನ್ನಲ್ಲ. ಈ ದೃಷ್ಟಿಯಿಂದ ಸ್ಥೂಲವಾಗಿ ಶಬ್ದ ಎಂದರೆ ಇಂಗ್ಲಿಷಿನ Manner ಮತ್ತು ಅರ್ಥ ಎಂದರೆ Matter ಎಂಬ ಅಭಿಪ್ರಾಯದ ವರೆಗೂ ಕಲ್ಪನೆಯನ್ನು ವಿಸ್ತರಿಸಿಕೊಳ್ಳಲೆಡೆಯುಂಟು.

[34] 'ಕಾವ್ಯ'ವೆಂದರೆ ಪದ್ಯವೆಂಬ ಸಂಕುಚಿತಾರ್ಥ ಸಂಸ್ಕೃತದಲ್ಲೆಂದೂ ಇಲ್ಲ. ಕವಿಕರ್ಮ ಅಥವಾ Literature ಎಂಬ ವಿಶಾಲಾರ್ಥವೊಂದರಲ್ಲಿಯೇ ಅದನ್ನು ಗ್ರಹಿಸಬೇಕು. 'ಕವಿ'ಯೆಂದರೂ ಹಾಗೆಯೇ Man of Letters ಎಂದೇ ಅರ್ಥ.

[35] ಏಳನೆಯ ಉಲ್ಲಾಸವು ದೋಷವಿವೇಚನೆಗೂ, ಎಂಟನೆಯದು ಗುಣನಿರೂಪಣೆಗೂ, ಒಂಭತ್ತು ಹತ್ತನೆಯವು ಶಬ್ದಾರ್ಥಾಲಂಕಾರ ವಿವರಣೆಗೂ ಮೀಸಲಾಗಿವೆ.

ಮಮ್ಮಟನ ಈ ಕಾವ್ಯಲಕ್ಷಣದ ಮೇಲೆ ಸಂಸ್ಕೃತ ಅಲಂಕಾರ ಶಾಸ್ತ್ರದಲ್ಲಿ ಬೇಕಾದಷ್ಟು ಖಂಡನಮಂಡನಗಳು ನಡೆದಿವೆ. ದಿಗ್ಗಜಪಂಡಿತರ ವಿದ್ವಚ್ಚರ್ಚೆಯು ಅವರ ಪಾಂಡಿತ್ಯಪ್ರದರ್ಶನ ಮಾಡುವುದಾದರೂ ಕಾವ್ಯದ ವಿಷಯವಾಗಿ ಹೆಚ್ಚಿನ ಬೆಳಕನ್ನು ಬೀರುವುದೆನ್ನಿಸುವುದಿಲ್ಲ. ಇಲ್ಲಿ ಸಂಗ್ರಹವಾಗಿ ಚರ್ಚಾಗ್ರಸ್ತವಾದ ಅಂಶಗಳನ್ನು ಸೂಚಿಸುತ್ತೇವೆ —

ಮಮ್ಮಟನ ಲಕ್ಷಣವಾಕ್ಯದಲ್ಲಿ ದೋಷ, ಗುಣ, ಅಲಂಕಾರ, ಈ ಪದಗಳಿವೆಯೇ ಹೊರತು ಇವುಗಳ ಅರ್ಥವಿವರಣೆಯಿಲ್ಲ. ಅರ್ಥವಿವರಣೆಯು ಮುಂದಿನ ಉಲ್ಲಾಸಗಳಲ್ಲಿ ಉಂಟೆಂದು ಅವನೇ ಹೇಳಿದ್ದರೂ, ಅವುಗಳನ್ನೋದುವ ಗೋಜಿಗೆ ಹೋಗದೆ ಪ್ರಾಚೀನಾಲಂಕಾರಿಕರ ಗ್ರಂಥಸಂಸ್ಕಾರದಿಂದಲೇ ಈ ಪದಗಳಿಗೆ ಅರ್ಥಮಾಡುವ ರೂಢಿಯುಂಟು. ಹಾಗೆ ಅಪಾರ್ಥಮಾಡುವುದರಿಂದಲೇ

ಗಳಲ್ಲಿಯೂ ಅವು (=ಶಬ್ದಾರ್ಥಗಳು) ಅಲಂಕಾರಯುಕ್ತವಾಗಿಯೇ ಇರುತ್ತವೆ;

ಲಕ್ಷಣವು ದೋಷಮಯವಾಗಿ ಭಾಸವಾಗುತ್ತದೆಂಬುದನ್ನು ಮೊದಲೇ ಸೂಚಿಸಬೇಕಾಗಿದೆ. ಮಮ್ಮಟನ ಮನೋಗತವಿಷ್ಟೆ :—ಏಳನೆಯ ಉಲ್ಲಾಸದ ಆದಿಯಲ್ಲೇ ಹೇಳಿದಂತೆ 'ಮುಖ್ಯಾರ್ಥಹತಿ'ಯು ದೋಷ; ರಸವೇ ಮುಖ್ಯಾರ್ಥ. ರಸಾಶ್ರಯವಾದ ವಾಚ್ಯವೂ ದೋಷಕ್ಕೆ ಆಲಂಬನವಾಗಬಹುದು; ಅವೆರಡಕ್ಕೂ ಉಪಯೋಗಿಗಳಾಗುವುದರಿಂದ ಶಬ್ದಾದಿಗಳೂ ದೋಷಕ್ಕೆ ಆಲಂಬನವಾಗಬಹುದು. ಎಂದಮೇಲೆ ರಸಭಂಗಕ್ಕೆ ನೇರವಾಗಿಯೋ ದೂರವಾಗಿಯೋ ಕಾರಣವಾಗತಕ್ಕವು ಮಾತ್ರ ಮಮ್ಮಟನಿಗೆ ವಿವಕ್ಷಿತವಾದ ದೋಷಗಳೇ ಹೊರತು ಭಾಮಹ, ದಂಡಿ, ವಾಮನಾದಿ ಪ್ರಾಚೀನರು ಹೇಳುವ ಕಾವ್ಯದೋಷಗಳಲ್ಲ. ಎಂಟನೆಯ ಉಲ್ಲಾಸದ ಆದಿಯಲ್ಲಿ ಹೇಳಿರುವಂತೆ ಮುಖ್ಯವಾದ ರಸಕ್ಕೆ ಯಾವವು ಅಂಗಗಳೋ-ಆತ್ಮನಿಗೆ ಶೌರ್ಯಾದಿ ಗುಣಗಳಂತೆ, ಯಾವುವುಗಳ ಸ್ಥಿತಿಯು ಅಚಲವೋ, ಅವು ಮಾತ್ರ ಗುಣಗಳು. ಭಾಮಹ, ದಂಡಿ, ಮುಂತಾದವರು ಹೇಳುವ ಗುಣಗಳಲ್ಲ. ಅದೇ ರಸವನ್ನೇ ಅಂಗದ ಮೂಲಕ ಯಾವುವು ಕಳೆಯೇರಿಸುತ್ತವೋ—ಅಂಗಶೋಭೆಯನ್ನು ಹೆಚ್ಚಿಸುವ ಹಾರಾದಿಗಳಂತೆ—ಅವು ಮಾತ್ರ ಶಬ್ದಾರ್ಥಾಲಂಕಾರಗಳು; ಪ್ರಾಚೀನರು ಹೇಳತಕ್ಕವಲ್ಲ. ಹೀಗೆ ದೋಷ, ಗುಣ, ಅಲಂಕಾರ, ಈ ಮೂರು ಪ್ರಕ್ರಿಯೆಗಳ ವಿವರಣೆಯಲ್ಲೂ ರಸವನ್ನೇ ಕೇಂದ್ರದಲ್ಲಿಟ್ಟುಕೊಂಡಿರುವುದೂ, ರಸಾನುಗುಣವಾಗಿ ಮಾತ್ರ ಅವನ್ನು ವಿವರಿಸುತ್ತಿರುವುದೂ ಸೂರ್ಯಪ್ರಕಾಶದಷ್ಟು ಸ್ಪಷ್ಟವಾಗಿದೆ. ಒಂದು ಸಣ್ಣ ದೋಷ ಬಂದರೂ ರಸಭಂಗವಾಗುವುದರಿಂದ ಕಾವ್ಯತ್ವಕ್ಕೆ ಹಾನಿ ಬರುವುದರಿಂದ ಲಕ್ಷಣದಲ್ಲಿ **ಅದೋಷೌ** ಎಂದಿದ್ದಾನೆ. ಗುಣಗಳಿಲ್ಲದೆ ರಸಪ್ರತೀತಿಯು ಅಸಂಭವವಾದ್ದರಿಂದ **ಸಗುಣೌ** ಎಂದಿದ್ದಾನೆ. ಇವೆರಡು ನಿಯಮಗಳೂ ಸಿದ್ಧಿಸಿದಮೇಲೆ ಪ್ರಾಯಿಕವಾಗಿ ಅಲಂಕಾರಗಳ ಶೋಭೆಯಿರುವುದೇ ಸತ್ಯವಾದರೂ, ಒಮ್ಮೊಮ್ಮೆ ಅದಿಲ್ಲದಿದ್ದರೂ ಕಾವ್ಯತ್ವಕ್ಕೆ ಚ್ಯುತಿಯಿಲ್ಲವೆಂದು '**ಅನಲಂಕೃತೀ ಪುನಃ ಕ್ವಾಪಿ**' ಎಂಬ ಮಾತಿನಲ್ಲಿ ಸೂಚಿಸಿದ್ದಾನೆ. ಹೀಗೆ ಸರಿಯಾಗಿ ಅರ್ಥಮಾಡಿಕೊಂಡರೆ ಲಕ್ಷಣವು ತರ್ಕದೃಷ್ಟಿಗೂ ನಿರ್ದುಷ್ಟವೆನಿಸೀತು.

ಸಾಹಿತ್ಯದರ್ಪಣವನ್ನು ಬರೆದ ವಿಶ್ವನಾಥನು (ರಸಗಂಗಾಧರಕಾರನಾದ ಜಗನ್ನಾಥನೂ) ಎತ್ತಿತೋರಿಸುವ ಕೆಲವು ಲಕ್ಷಣದೋಷಗಳು ಹೀಗಿವೆ—

1. ಉತ್ತಮ ಕಾವ್ಯವೆಂದೊಪ್ಪುವ ಎಷ್ಟೋ ಲಕ್ಷ್ಯಗಳಲ್ಲಿಯೂ ಒಂದಿಲ್ಲೊಂದು ದೋಷವಿದ್ದೇ ಇರುವುದರಿಂದ ಲಕ್ಷಣದ ಪ್ರಕಾರ ಅವುಗಳಿಗೆ ಕಾವ್ಯತ್ವ ತಪ್ಪುತ್ತದೆ. ಆದ್ದರಿಂದ ಲಕ್ಷಣದಲ್ಲಿ ಅವ್ಯಾಪ್ತಿದೋಷ. ಸರ್ವಥಾ ನಿರ್ದುಷ್ಟವಾದ ಕಾವ್ಯವೇ ಅಸಂಭವ. 'ಅದೋಷ'ವೆಂದರೆ 'ಅಲ್ಪದೋಷ'ವೆಂದು ಅರ್ಥಮಾಡಿದರೆ ನಿರ್ದುಷ್ಟವಾದುದು ಕಾವ್ಯವಲ್ಲದೆ ಹೋದೀತು. ಲಕ್ಷಣದಲ್ಲಿ ಇದು ಸೇರಿಸಬೇಕಾದ ಅಂಶವೇ ಅಲ್ಲ.

2. ಗುಣಗಳು ರಸಧರ್ಮಗಳೆಂದೊಪ್ಪಿದ ಮೇಲೆ ಅವನ್ನು ಶಬ್ದಾರ್ಥಗಳಿಗೆ ವಿಶೇಷಣವಾಗಿ ಪ್ರಯೋಗಿಸುವುದೂ ತಪ್ಪೇ. ಶಬ್ದಾರ್ಥಗಳಲ್ಲಿ ರಸವತ್ತ್ವವಿರುವುದಾದರೆ **ಸಗುಣೌ** ಎನ್ನುವ ಬದಲು 'ರಸವನ್ತೌ' ಎಂದೇಕೆ ಹೇಳಲಿಲ್ಲ? ರಸವಿಲ್ಲದಿದ್ದರೆ ಗುಣವೆಲ್ಲಿಂದ ಸಿದ್ಧಿಸುತ್ತದೆ? ಆದ್ದರಿಂದ **ಸರಸೌ** ಎನ್ನಬೇಕೇ ಹೊರತು ಸಗುಣೌ ಎಂದಲ್ಲ.

3. ಕಾವ್ಯದ ಸ್ವರೂಪವನ್ನು ಹೇಳುವಾಗ ಅದರ ಉತ್ಕರ್ಷಕಾರಣವನ್ನು ಹೇಳಲೇಬೇಕಾಗಿಲ್ಲ. ಆದ್ದರಿಂದ 'ಅನಲಂಕೃತೀ ಪುನಃ ಕ್ವಾಪಿ' ಎಂಬುದು ಸರಿಯಲ್ಲ.

ಎಲ್ಲೋ ಕೆಲವೆಡೆಗಳಲ್ಲಿ ಮಾತ್ರ, ಸ್ಫುಟವಾದ ಅಲಂಕಾರಗಳಿರದಿದ್ದರೂ[೬] ಕಾವ್ಯತ್ವಕ್ಕೆ ಚ್ಯುತಿಯಿಲ್ಲ. ಹೇಗೆಂದರೆ—

---

ಇದಕ್ಕೆ ಉದ್ದ್ಯೋತದಲ್ಲಿ ಸಮಾಧಾನವನ್ನು ಹೇಳಿದೆ—

ವ್ಯಂಗ್ಯವಾದ ರಸದ ಚಮತ್ಕಾರಾತಿಶಯದಲ್ಲಿ ತಲ್ಲೀನನಾಗಿರುವ ಸಹೃದಯನಿಗೆ ದೋಷ ಸದ್ಭಾವವು ಗಮನಕ್ಕೆ ಬರದೆ ಅಪ್ರತೀತವಾಗಿ ನಿಲ್ಲಬಹುದು. ಎಲ್ಲಿ ರಸಭಂಗವುಂಟಾಗಿ ದೋಷವು ಪ್ರತೀತವೋ ಅದು ಮಾತ್ರ ದೋಷವೇ ಹೊರತು, ಕವಿಪ್ರತಿಭಾ ಬಲದಿಂದ ತಿರೋಹಿತವಾಗಿ ಪ್ರತೀತವಾಗದುದಲ್ಲ. ಆದ್ದರಿಂದ ಲಕ್ಷಣದಲ್ಲಿ ಅದೋಷೌ ಎಂದರೆ 'ಪ್ರತೀತದೋಷವಿಲ್ಲದ' ಎಂದರ್ಥ.

ನಾಗೇಶಭಟ್ಟನು ಹೇಳುವಂತೆ ಮಮ್ಮಟನು ಬರೆಯುತ್ತಿರುವುದು ಆದರ್ಶಕಾವ್ಯದ ಸಾಮಾನ್ಯ ಲಕ್ಷಣವೇ ಹೊರತು ಉಪಲಬ್ಧಕಾವ್ಯಗಳಿಗೆ ಮಾತ್ರ ಪರಿಮಿತವಾದುದಲ್ಲ.

ಇನ್ನು ಕಾವ್ಯಲಕ್ಷಣದಲ್ಲಿ 'ರಸ' ಶಬ್ದವನ್ನೇ ತರುವುದುಚಿತವೇ ಅಲ್ಲವೇ ಎಂಬ ಪ್ರಶ್ನೆ. ಕಾವ್ಯಸ್ವರೂಪವನ್ನು ತೋರಿಸುವಾಗ ಶಬ್ದಾರ್ಥಗಳನ್ನೂ, ಅವುಗಳಲ್ಲಿರಬೇಕಾದ ಗುಣಗಳನ್ನೂ ತೋರಿಸಲು ಬರುವುದೇ ಹೊರತು ಕೇವಲ ಪ್ರತೀತಿಮಾತ್ರವಾದ 'ರಸ'ವೆಂಬ ಶಬ್ದದಿಂದ ಏನನ್ನೂ ಹೇಳಿದಂತಾಗುವುದಿಲ್ಲ. ಇಂಗ್ಲಿಷಿನಲ್ಲಿ *Abstract definition* ಎಂದು ಹೇಳಿರುವ ಲಕ್ಷಣ ದೋಷವೇ ಸಂಪನ್ನವಾಗುತ್ತದೆ. ಅಮೂರ್ತವಾದ ರಸಗಳ ಸ್ವರೂಪನಿರ್ದೇಶಮಾಡಲು ಮೂರ್ತವಾದ ಶಬ್ದಾರ್ಥಗಳಿಗೂ ಅದಕ್ಕೂ ಇರುವ ಗುಣ-ದೋಷವೆಂಬ ಸಂಬಂಧಸೂಚನೆಯೇ ಹೆಚ್ಚು ಸಮರ್ಪಕ ವೆನ್ನಬಹುದು.

ಜಗನ್ನಾಥನು ಈ ಲಕ್ಷಣದಲ್ಲಿ ಮತ್ತೊಂದು ದೋಷವನ್ನು ತೋರಿಸಿದ್ದಾನೆ:—" ಶಬ್ದಾರ್ಥ ವೆರಡೂ ಕೂಡಿ ಕಾವ್ಯವಾಗಲಾರದು. 'ಕಾವ್ಯವನ್ನು ಗಟ್ಟಿಯಾಗಿ ಓದುತ್ತಾನೆ,' 'ಕಾವ್ಯದ ಅರ್ಥ ತಿಳಿಯಿತು,' 'ಕಾವ್ಯವನ್ನು ಕೇಳಿದೆ; ಆದರೆ ಅರ್ಥವಾಗಲಿಲ್ಲ' ಎಂದು ಮುಂತಾಗಿ ಸರ್ವರೂ ಆಡುವ ಮಾತುಗಳಲ್ಲಿ ಶಬ್ದವನ್ನು ಮಾತ್ರ ಕಾವ್ಯವೆನ್ನುವ ರೂಢಿಯಿರುವುದರಿಂದ . . ."

ವೈದ್ಯನಾಥನು ತನ್ನ ಉದ್ದ್ಯೋತ-ಪ್ರಭಾ ಎಂಬ ಟೀಕೆಯಲ್ಲಿ ಅದಕ್ಕೆ ಸಮಾಧಾನ ಹೇಳಿದ್ದಾನೆ:—'ಕಾವ್ಯವೆಂದರೆ ವರ್ಣನಾತ್ಮಕವಾದ ಶಬ್ದಾರ್ಥಯುಗಲವೆಂದು ಮೊದಲೇ ಹೇಳಿಯಾಗಿರುವಾಗ, ಅರ್ಥಯುಕ್ತವಲ್ಲದ ಶಬ್ದದಲ್ಲಿ ವರ್ಣನಾತ್ಮಕತೆಯೇ ಬರುವಂತಿಲ್ಲದ ಪ್ರಯುಕ್ತ ಶಬ್ದ ಮಾತ್ರ ಕಾವ್ಯವೆನಿಸಲಾರದು.' 'ಶಬ್ದಾರ್ಥ'ಕ್ಕೆ ನಾವು ಮೇಲೆ ಸೂಚಿಸಿದ ವಿಶಾಲಾರ್ಥದಲಿ ಆಕ್ಷೇಪಕ್ಕೇ ಎಡೆಯಿಲ್ಲ.

ಪ್ರಾಚೀನ ಸಂಪ್ರದಾಯವನ್ನನುಸರಿಸುವ ಜಯದೇವನು ಚಂದ್ರಾಲೋಕದಲ್ಲಿ ಮಮ್ಮಟನನ್ನು 'ಅನಲಂಕೃತೀ' ಎಂಬ ಬಗ್ಗೆ ಹೀಗಳೆದಿದ್ದಾನೆ:—

> ಅಂಗೀಕರೋತಿ ಯಃ ಕಾವ್ಯಂ ಶಬ್ದಾರ್ಥಾವನಲಂಕೃತೀ |
> ಅಸೌ ನ ಮನ್ಯತೇ ಕಸ್ಮಾತ್ ಅನುಷ್ಣಮನಲಂ ಕೃತೀ ||—I, ೮.

'ಅಲಂಕಾರವಿಲ್ಲದ ಶಬ್ದಾರ್ಥಗಳೂ ಕಾವ್ಯವೆನ್ನುವವನು ಬೆಂಕಿ ತಂಪೆಂದೇಕೆ ಹೇಳಬಾರದು?' ಈ ಆಕ್ಷೇಪ-ಸಮಾಧಾನಗಳ ಕುತೂಹಲವುಳ್ಳವರು ಮೂಲಗ್ರಂಥಗಳನ್ನೋದಬೇಕು. ಮಮ್ಮಟನ

ಯಃ ಕೌಮಾರಹರಸ್ಸ ಏವ ಹಿ ವರಸ್ತಾ ಏವ ಚೈತ್ರಕ್ಷಪಾಃ
ತೇ ಚೋನ್ಮೀಲಿತಮಾಲತೀಸುರಭಯಃ ಪ್ರೌಢಾಃ ಕದಂಬಾನಿಲಾಃ |
ಸಾ ಚೈವಾಸ್ಮಿ ತಥಾಪಿ ತತ್ರ ಸುರತವ್ಯಾಪಾರಲೀಲಾವಿಧೌ
ರೇವಾರೋಧಸಿ ವೇತಸೀತರುತಲೇ ಚೇತಸ್ಸಮುತ್ಕಂಠತೇ[37] ||

ಮೊದಲೆನ್ನ ಕೌಮಾರಹರನಾದನೇ ವರನು,
ಮಧುಮಾಸರಜನಿಯಿವೆ ಮುನ್ನಿನಂತೆ !
ಫುಲ್ಲಮಾಲತಿಪುಷ್ಪಗಂಧದಿಂ ಬೀಗುತಿಹ
ಗಾಳಿಗಳು ಸುಳಿಯುತಿವೆ ಮೊದಲಿನಂತೆ !

ಅಂತೆಯಿರುವೆನು ನಾನು, ಆದರೆನ್ನಯ ಮನವು
ನರ್ಮದೆಯ ತಡಿಗೀಗ ಕಾತರಿಸುತಿಹುದು ;
ನೀರ್ವಳ್ಳಿ ತುರುಗಲಡಿ ನಾವಲ್ಲಿ ಸವಿದಿರ್ದ
ಕೂಟಬೇಟದ ಸವಿಯ ನೆನೆನೆನೆಯುತಿಹುದು.

---

ಲಕ್ಷಣಕ್ಕಿಂತಲೂ ಸಮರ್ಪಕವೆಂದು ಇತರರು ಬರೆದಿರುವ—"ವಾಕ್ಯಂ ರಸಾತ್ಮಕಂ ಕಾವ್ಯಂ," (ವಿಶ್ವನಾಥ) "ರಮಣೀಯಾರ್ಥಪ್ರತಿಪಾದಕಃ ಶಬ್ದಃ ಕಾವ್ಯಂ" (ಜಗನ್ನಾಥ) ಮುಂತಾದ ಲಕ್ಷಣಗಳ ಯುಕ್ತಾಯುಕ್ತತೆಯನ್ನೂ ತಾರ್ಕಿಕ ಹಾಗೂ ವ್ಯಾವಹಾರಿಕ ದೃಷ್ಟಿಗಳಿಂದ ನಿರ್ಣಯಿಸಬಹುದು. ಪ್ರಾಚೀನರು ಮತ್ತು ನವೀನರಿಬ್ಬರನ್ನೂ ಮನವೊಲಿಸಲೋ ಎಂಬಂತೆ ಅಡ್ಡಗೋಡೆಯ ಮೇಲಿನ ದೀಪವಿಟ್ಟಂತೆ ಮಮ್ಮಟನು ಲಕ್ಷಣವನ್ನು ಬರೆದು ಇಬ್ಬರಿಂದಲೂ ಅಸಮರ್ಪಕವೆಂಬ ಟೀಕೆಗೆ ಗುರಿಯಾದನೆಂದು ಡಾ|| ಸುಶೀಲ ಕುಮಾರ ಡೇ ಯವರು ಅಭಿಪ್ರಾಯಪಟ್ಟಿದ್ದಾರೆ.

[36] ಕಾವ್ಯದಲ್ಲಿ ಅಲಂಕಾರಗಳಿಲ್ಲದಿದ್ದರೂ ಇರಬಹುದೆಂದು ಹೇಳಿದ ಮಮ್ಮಟನೇ ಇಲ್ಲಿ ವೃತ್ತಿಯಲ್ಲಿ ಸಣ್ಣ ಬದಲಾವಣೆ ಮಾಡಿಕೊಳ್ಳುತ್ತಿದ್ದಾನೆ—ಸ್ಫುಟವಾದ ಎಂಬ ವಿಶೇಷಣದಿಂದ. ಇದರಿಂದ ಅವನ ಅಭಿಪ್ರಾಯದಲ್ಲಿ ಕಾವ್ಯದಲ್ಲೆಲ್ಲ ಅಲಂಕಾರವು ಸ್ಫುಟವಲ್ಲದಿದ್ದರೆ ಅಸ್ಫುಟರೀತಿಯಿಂದಾದರೂ ಇದ್ದೇ ಇರುತ್ತದೆಂದು ಹೇಳುವುದಕ್ಕೆ ಆಸ್ಪದವಿದೆ. ಈ ಅವನ ಅಭಿಪ್ರಾಯವು ಪ್ರಾಚೀನ ಲಕ್ಷಣಕಾರರನ್ನು ಮೆಚ್ಚಿಸಲು ಹೊರಟಿದೆಯೆಂದರೂ ಎನ್ನಬಹುದು. ಏಕೆಂದರೆ ಆನಂದವರ್ಧನನು ಈ ಮಾತನ್ನು ಹೇಳಿಲ್ಲ.

[37] 'ಶಾರ್ಙ್ಗಧರಪದ್ಧತಿ'ಯೆಂಬ ಸುಭಾಷಿತಕೋಶದಲ್ಲಿ ಈ ಶ್ಲೋಕವು ಶೀಲಾ ಭಟ್ಟಾರಿಕೆಯುದೆಂದು ಉದಾಹೃತವಾಗಿದೆ. ಬಾಲ್ಯದಲ್ಲಿ ಯಾರನ್ನು ಪ್ರಚ್ಛನ್ನವಾಗಿ ಪ್ರೀತಿಸಿ ಆನಂದಿಸುತ್ತಿದ್ದಳೋ ಆತನೊಡನೆಯೇ ವಿವಾಹವಾದ ಮೇಲೆ ತನ್ನ ಅನುಭವವನ್ನು ನಾಯಿಕೆಯು ಸಖಿಯೊಡನೆ ಹೇಳುವ ಪ್ರಕರಣವೆಂದು ಭಟ್ಟಗೋಪಾಲನು ಬರೆಯುತ್ತಾನೆ.

ಇಲ್ಲಿ ಸ್ಫುಟವಾದ ಅಲಂಕಾರವೇನೂ ಇಲ್ಲ[38]. ರಸಕ್ಕೆ ಪ್ರಾಧಾನ್ಯವಿರುವ ಕಾರಣ ಅದನ್ನು (ಅಪ್ರಧಾನವಾದ) ಅಲಂಕಾರವೆನ್ನಲಾಗದು[39].

ಕಾವ್ಯದ ಭೇದಗಳನ್ನು ಇನ್ನು ಕ್ರಮವಾಗಿ ಹೇಳುತ್ತಾನೆ:—

ಇದಮುತ್ತಮಮತಿಶಯಿನಿ ವ್ಯಂಗ್ಯೇ ವಾಚ್ಯಾದ್ ಧ್ವನಿರ್ಬುಧೈಃ ಕಥಿತಃ ॥ ೪ *b* ॥

ವಾಚ್ಯವಾದ ಅಂಶಕ್ಕಿಂತಲೂ ವ್ಯಂಗ್ಯವಾದುದೇ ಪ್ರಧಾನವಾಗಿದ್ದರೆ ಅದು ಉತ್ತಮ; ಧ್ವನಿಯೆಂಬ ಹೆಸರನ್ನು ವಿದ್ವಾಂಸರು ಅದಕ್ಕೆ ಇತ್ತಿದ್ದಾರೆ[40].

---

[38] ಇಲ್ಲಿ ಅಲಂಕಾರವೇ ಯಾವುದೂ ಇಲ್ಲವೆಂದರ್ಥವಲ್ಲ. ಎರಡು ಅಲಂಕಾರಗಳಿಗೆ ಪ್ರಸಕ್ತಿಯಿದ್ದರೂ ಎರಡೂ ಅಸ್ಫುಟವಾಗಿಯೇ ಉಳಿದಿವೆಯೆಂದರ್ಥ. ಕಾರಣಗಳಿಲ್ಲದಿದ್ದರೂ ಕಾರ್ಯವು ಉತ್ಪನ್ನವಾಯಿತೆಂದರೆ 'ವಿಭಾವನೆ'ಯೆಂಬ ಅಲಂಕಾರ; ಕಾರಣಗಳೆಲ್ಲವೂ ಇದ್ದರೂ ಕಾರ್ಯವು ಉತ್ಪನ್ನವಾಗಲಿಲ್ಲವೆಂದು ವರ್ಣಿಸಿದರೆ 'ವಿಶೇಷೋಕ್ತಿ'ಯೆಂಬ ಅಲಂಕಾರ. ಪ್ರಕೃತ ಲಕ್ಷ್ಯದಲ್ಲಿ ಎರಡಕ್ಕೂ ಪ್ರಸಕ್ತಿಯಿದೆ; ಆದರೆ ಎರಡೂ ಅಸ್ಫುಟ. ಹೇಗೆಂದರೆ—'ಮನಸ್ಸು ಕಾತರಿಸುವುದು ಎಂಬ ಕಾರ್ಯವುಂಟು; ಅದಕ್ಕೆ ಕಾರಣಗಳಾದ ನಾಯಕಾಭಾವ, ಕಾಲದೇಶಾದಿ ಪ್ರಾತಿಕೂಲ್ಯ ಮುಂತಾದ ಕಾರಣಗಳೇನೂ ಇಲ್ಲ. ಆದ್ದರಿಂದ ವಿಭಾವನೆಯೆನ್ನಬಹುದು. ಆದರೆ ಕವಿಯು ವಾಚ್ಯವಾಗಿ ಕಾರಣವನ್ನು ಇಲ್ಲವೆನ್ನುವ ಬದಲು ಕಾರಣದ ಅಭಾವವಿದೆ ಎಂದು ಪ್ರಕಾರಾಂತರದಿಂದ ಹೇಳಿದ್ದಾನೆ. 'ನಾಯಕನಿಲ್ಲದೆ ಏನೂ ಇಲ್ಲ' ಎನ್ನದೆ 'ಅದೇ ವರನಿದ್ದಾನೆ' ಎಂದಿದ್ದಾನೆ. ಅರ್ಥಾತ್ ಕಾರಣ ನಿಷೇಧದ ಬದಲು ಕಾರಣಾಭಾವವನ್ನು ವಿಧಿರೂಪವಾಗಿ ಹೇಳಿದ್ದಾನೆ. ಆದ್ದರಿಂದಲೇ ಅಲಂಕಾರವು ಅಸ್ಫುಟವಾಗುತ್ತದೆ; ಹಾಗೆಯೇ ಕಾತರಿಸದಿರುವ ಕಾರ್ಯಕ್ಕೆ ಸಾಧಕಗಳಾದ ನಾಯಕನೇ ಮುಂತಾದ ಕಾರಣಗಳೆಲ್ಲ ಇದ್ದರೂ ಆ ಫಲವು ಹುಟ್ಟುವುದಿಲ್ಲ; ಪ್ರತಿಯಾಗಿ, ಅದಕ್ಕೆ ವಿರುದ್ಧವಾದ ಕಾತರವೇ ಹುಟ್ಟುತ್ತದೆ. ಆದ್ದರಿಂದ ವಿಶೇಷೋಕ್ತಿಯನ್ನಬಹುದು. ಆದರೆ ಕವಿಯು ವಾಚ್ಯವಾಗಿ ಕಾತರದ ಅಭಾವವು ಆಗಿಲ್ಲ ಎಂದು ನಿಷೇಧರೂಪವಾಗಿ (=*Negatively*) ಹೇಳುವ ಬದಲು ಕಾತರವೇ ಉಂಟಾಗಿದೆ ಎಂದು ವಿಧಿರೂಪವಾಗಿಯೇ (=*Affirmatively*) ಹೇಳಿದ್ದಾನೆ. ಹೀಗೆ ಎರಡು ಅಲಂಕಾರಗಳೂ ಅಸ್ಫುಟವಾಗಿರುವುದರಿಂದ, ಅವುಗಳ ಸಂಕರವೂ ಅಸ್ಫುಟವೆಂದೇ ತಿಳಿಯಬೇಕಾಗಿದೆ.

[39] ಇಲ್ಲಿ ವಿಭಾವಾದಿಗಳ ವರ್ಣನೆಯಿಂದ ಶೃಂಗಾರರಸವು ಅಭಿವ್ಯಕ್ತವಾಗುತ್ತಿರುವುದರಿಂದ 'ರಸವದಲಂಕಾರ'ವೆಂದು ಪ್ರಾಚೀನರಂತೆ ಹೇಳಬಾರದೇಕೆ, ಎಂಬ ಪ್ರಶ್ನೆಗೆ ಮಮ್ಮಟನು ಉತ್ತರ ಹೇಳುತ್ತಿದ್ದಾನೆ. ದಂಡಿಯೇ ಮೊದಲಾದ ಪ್ರಾಚೀನರ ದೃಷ್ಟಿಯಲ್ಲಿ ರಸವೂ ಒಂದು ಅಲಂಕಾರ, ಉಪಮಾದಿಗಳಂತೆಯೇ. ಆದರೆ ನವೀನ ಆಲಂಕಾರಿಕರ ಪ್ರಕಾರ ಉಪಮಾದಿ ಅಲಂಕಾರಗಳು ಅಲಂಕರಿಸುವ ಆತ್ಮವೇ ರಸವಾದ್ದರಿಂದ ಅದು ಅಲಂಕಾರ್ಯವೇ ಹೊರತು ಸರ್ವಥಾ ಅಲಂಕಾರವಲ್ಲ. ರಸವು ಪ್ರಧಾನವಾಗಿರುವಾಗಲೆಲ್ಲ ಅದು ಅಲಂಕಾರ್ಯವೆಂದೂ, ಒಂದು ರಸವು ಮತ್ತೊಂದು ರಸಕ್ಕೆ ಗೌಣವಾದಾಗ ಮೊದಲನೆಯದು ರಸವದಲಂಕಾರವಾಗುವುದೆಂದೂ ಇವರ ಪ್ರಕ್ರಿಯೆ. ಹೋಲಿಸಿ—ಕನ್ನಡ ಧ್ವನ್ಯಾಲೋಕ, II. ೫.

[40] ಹೋಲಿಸಿ, ಕನ್ನಡ ಧ್ವನ್ಯಾಲೋಕ, I. ೧೩.

'ಅದು' ಎಂದರೆ ಕಾವ್ಯ. 'ವಿದ್ವಾಂಸ'ರೆಂದರೆ ವೈಯಾಕರಣಿಗಳೆಂದು ತಾತ್ಪರ್ಯ. ಅವರು ಪ್ರಧಾನವಾದ 'ಸ್ಫೋಟ'ವೆಂಬ ವ್ಯಂಗ್ಯಕ್ಕೆ ವ್ಯಂಜಕವಾಗಬಲ್ಲ ಶಬ್ದವನ್ನು ಮಾತ್ರ **ಧ್ವನಿ**ಯೆಂದು ವ್ಯವಹರಿಸಿದ್ದಾರೆ[41]. ಅಂತೆಯೇ ಅವರ ಮತವನ್ನು ಅನುಸರಿಸಿದ ಇತರರು ವಾಚ್ಯಾಂಶವನ್ನು ಅಪ್ರಧಾನವಾಗಿಸಿ ವ್ಯಂಗ್ಯಾಂಶಕ್ಕೆ ಮಾತ್ರ ವ್ಯಂಜಕವಾಗುವ ಶಕ್ತಿಯುಳ್ಳ ಶಬ್ದಾರ್ಥ ದ್ವಯವನ್ನೂ ಕೂಡ ಅದೇ **ಧ್ವನಿ**ಯೆಂಬ ಹೆಸರಿನಿಂದ ಕರೆದಿದ್ದಾರೆ[42]. ಹೇಗೆಂದರೆ :—

[41] ವೈಯಾಕರಣರ ಪರಿಭಾಷೆಯಲ್ಲಿ ಅಕ್ಷರಸಮೂಹವೆಲ್ಲವೂ 'ಪದ'ವಲ್ಲ ; ಅರ್ಥಬೋಧಕ ವಾದುದು ಮಾತ್ರ ಪದ. ಅಕ್ಷರಗಳು ಒಂದೊಂದೂ ಕ್ಷಣನಶ್ವರ ; ಎರಡನೆಯ ಅಕ್ಷರದ ಉಚ್ಚಾರ ಣೆಯ ಕಾಲದಲ್ಲಿ ಮೊದಲನೆಯ ಅಕ್ಷರವು ನಷ್ಟವಾಗಿರುತ್ತದೆ. ಹೀಗೆ ಕ್ರಮಕ್ರಮವಾಗಿ ಉಚ್ಚರಿತ ವಾದ ಅಕ್ಷರಗಳು ಏಕಕಾಲದಲ್ಲಿ ಒಟ್ಟುಗೂಡುವುದೂ ಅಸಂಭವವೇ. ಆದ್ದರಿಂದ ಕಡೆಯ ವರ್ಣದ ಉಚ್ಚಾರಣೆಯ ಫಲವಾಗಿ ಪ್ರತೀತವಾಗುವ ಅರ್ಥವನ್ನೇ ಅವರು ಪದವೆಂದು ಪರಿಗಣಿಸುತ್ತಾರೆ. ಈ 'ಪದ'ಕ್ಕೆ ಪರ್ಯಾಯವಾಗಿ 'ಸ್ಫೋಟ'ವೆಂಬ ಪಾರಿಭಾಷಿಕ ಶಬ್ದವನ್ನೂ ಬಳಸುತ್ತಾರೆ. ಮೊದ ಮೊದಲಿನ ವರ್ಣಗಳು ನಷ್ಟವಾಗಿದ್ದರೂ ಅವುಗಳ ಸಂಸ್ಕಾರವನ್ನು ಜತೆಗೂಡಿಕೊಂಡು 'ಪದ' ಅಥವಾ 'ಸ್ಫೋಟ'ವನ್ನು ಅಭಿವ್ಯಕ್ತಗೊಳಿಸುವ ಕಡೆಯ ಅಕ್ಷರವನ್ನು ಮಾತ್ರ ಅವರು "ಧ್ವನಿ" ಯೆನ್ನುತ್ತಾರೆ. ಈ ಅಂತ್ಯಾಕ್ಷರವನ್ನೇ ಮಮ್ಮಟನು ಇಲ್ಲಿ ಶಬ್ದವೆಂದಿದ್ದಾನೆ. ಹೋಲಿಸಿ—"ಧ್ವನಿಃ ಸ್ಫೋಟಶ್ಚ ಶಬ್ದಾನಾಂ ಧ್ವನಿಸ್ತು ಖಲು ಲಕ್ಷ್ಯತೇ."—ಇದು ಮಹೇಶ್ವರನ ಟೀಕೆಯ ಪ್ರಕಾರ ಸ್ಫೋಟವಾದದ ತಿರುಳು.

ನಾಗೋಜಿಭಟ್ಟನ ಉದ್ದ್ಯೋತದಲ್ಲಿ ಸ್ಫೋಟಪ್ರಕ್ರಿಯೆಯನ್ನು ಬೇರೊಂದು ರೀತಿಯಲ್ಲಿ ವಿವರಿಸಿದೆ:—ಶಬ್ದಬ್ರಹ್ಮನ ಶುದ್ಧಸ್ವರೂಪಕ್ಕೆ ಪರಾ ಎನ್ನುತ್ತಾರೆ. ನಾಭಿಯಲ್ಲಿ ಅದೇ ಪಶ್ಯಂತೀ ಎಂಬ ವಿಕಾರವನ್ನು ಪಡೆದು, ಆಮೇಲೆ ಅದೇ ಹೃದಯದಲ್ಲಿ ಮಧ್ಯಮಾ ಎಂಬ ಹೆಸರಿಗೆ ಪಾತ್ರವಾಗಿ, 'ಕಡೆಗೆ ಪಟ' ಮುಂತಾದ ಪ್ರಕಟರೂಪವನ್ನು ತಾಳಿದಾಗ ಅದೇ ವೈಖರೀ ಧ್ವನಿಯೆನಿಸುತ್ತದೆ. ಈ ವೈಖರೀ ಧ್ವನಿಯೇ 'ಸ್ಫೋಟ'ವೆಂಬ ಶಬ್ದಬ್ರಹ್ಮಕ್ಕೆ ವ್ಯಂಜಕವೆಂದಭಿಪ್ರಾಯವೆಂದು ಪ್ರದೀಪಕಾರನ ವಾಕ್ಯ.

ಪದದಲ್ಲಿರುವ ಒಂದೊಂದು ಅಕ್ಷರವೂ ಸ್ಫೋಟವನ್ನೇ ಅಸ್ಫುಟವಾಗಿ ಅಭಿವ್ಯಂಜಿಸುವುದೆಂದೂ ಆದರೆ ಕಡೆಯ ಅಕ್ಷರವು ಮಾತ್ರ ಅದನ್ನು ಸ್ಫುಟವಾಗಿ ತೋರಿಸುವುದೆಂದೂ ಸರ್ವದರ್ಶನ ಸಂಗ್ರಹ ದಲ್ಲಿ ಹೇಳಿದೆ. ಒಂದು ಶ್ಲೋಕವನ್ನು ಕಂಠಪಾಠ ಮಾಡುವಾಗ 'ಪ್ರತಿಯೊಂದು ಸಲ' ಓದಿ ದಾಗಲೂ ಅಸ್ಫುಟವಾಗಿ ಜ್ಞಾನವಾಗುತ್ತಲೂ ಮತ್ತೆ ಮತ್ತೆ ಓದಿದಾಗ ಸ್ಫುಟತರವಾಗುತ್ತಲೂ ಇದ್ದರೂ ಕಡೆಯ ಸಲ ಓದಿದ ಮೇಲೆ ಮಾತ್ರ ಸುಸ್ಪಷ್ಟವಾಗುವಂತೆ ಎಂಬ ಉದಾಹರಣೆಯನ್ನು ಕೊಟ್ಟಿದೆ. ಈ ಉದಾಹರಣೆಯನ್ನೇ ವಾಕ್ಯಪದೀಯವನ್ನು ಬರೆದ ಭರ್ತೃಹರಿಯೂ ಕೊಟ್ಟಿದ್ದಾನೆ. ಅಕ್ಷರಗಳೇ ಧ್ವನಿ, ಅಖಂಡಾರ್ಥವಾದ ಸ್ಫೋಟವನ್ನವು ವ್ಯಂಜಿಸುತ್ತವೆ ಎಂಬುದಿಷ್ಟೇ ವ್ಯಾಕರಣದ ಪ್ರಕ್ರಿಯೆ.

[42] ಕಾವ್ಯಕ್ಕೆ ಈ ತತ್ವದ ವಿಸ್ತರಣೆಯ ಉಲ್ಲೇಖವು ಧ್ವನ್ಯಾಲೋಕದಲ್ಲೇ ಬರುತ್ತದೆ. ವಿವರ ಗಳಿಗೆ ಕನ್ನಡ ಧ್ವನ್ಯಾಲೋಕ, ಪು. ೧೯ ನ್ನು ಓದಿ. ಸ್ಫೋಟವಾದದಲ್ಲಿ ವ್ಯಂಗ್ಯವೇ ಹೇಗೆ

ನಿಶ್ಶೇಷಚ್ಯುತಚಂದನಂ ಸ್ತನತಟಂ ನಿರ್ಮೃಷ್ಟರಾಗೋಽಧರೋ
ನೇತ್ರೇ ದೂರಮನಂಜನೇ ಪುಲಕಿತಾ ತನ್ವೀ ತವೇಯಂ ತನುಃ।
ಮಿಥ್ಯಾವಾದಿನಿ ದೂತಿ ಬಾಂಧವಜನಸ್ಯಾಜ್ಞಾತಪೀಡಾಗಮೇ
ವಾಪೀಂ ಸ್ನಾತುಮಿತೋ ಗತಾಸಿ ನ ಪುನಸ್ತಸ್ಯಾಧಮಸ್ಯಾಂತಿಕಮ್[43] ॥

ನಿಶ್ಶೇಷವಳಿಸಿಹುದು ಕುಚತಟದ ಚಂದನವು
ಸಂಪೂರ್ಣ ತೊಳೆದಿಹುದು ತುಟಿಯ ಕೆಂಪು;
ಕಣ್ಣ ಕಡೆಯೊಳಗೀಗ ಕಾಡಿಗೆಯು ಕಾಣಿಸದು
ಪೊಂಪುಳಿಯ ತೋರುತಿದೆ ಮೈಯ ತೆಳ್ಪು.

ಸುಳ್ಳುಗಾರ್ತಿಯೆ! ಸಖಿಯೆ! ನಿನ್ನೊಡತಿಗರಿಯದೆಯೆ
ಪೀಡೆಯನು ಬರಿದೇಕೆ ತರಿಸುತಿರುವೆ?
ಕೆರೆಗೆ ಮೀಯಲು ನೀನು ಪೋದೆಯಲ್ಲದೆ ಮತ್ತೆ
ಆ ಅಧಮನೆಡೆಗಲ್ತು ನನ್ನಿಯಿದುವೆ.

ಇಲ್ಲಿ 'ಅವನೆಡೆಗೇ ರಮಿಸಲು ಹೋಗಿದ್ದೆ 'ಯೆಂಬುದು ಪ್ರಧಾನವಾಗಿ ವ್ಯಂಗ್ಯವಾಗು ತ್ತದೆ, 'ಅಧಮ' ಎಂಬ ಪದದ ಪ್ರಭಾವದಿಂದ[44].

ಪ್ರಧಾನವೋ ಹಾಗೆಯೇ ನವೀನಾಲಂಕಾರಿಕರ ತತ್ವದಲ್ಲೂ ಕಾವ್ಯದಲ್ಲಿ ವ್ಯಂಗ್ಯವಾದ ರಸಾದಿಗಳೇ ಪ್ರಧಾನ, ಸ್ಫೋಟವಾದದಲ್ಲಿ ಅಕ್ಷರಗಳು ಮಾತ್ರ ವ್ಯಂಜಕಗಳು, ವ್ಯಂಜಕಗಳಾದ್ದರಿಂದಲೇ ಅವಕ್ಕೆ ಧ್ವನಿಯೆಂಬ ಹೆಸರಿದೆ. ಕಾವ್ಯದಲ್ಲಿಯಾದರೋ ಶಬ್ದ, ಅರ್ಥ ಎರಡೂ ವ್ಯಂಜಕಗಳು; ಅವೆರಡಕ್ಕೂ ಧ್ವನಿಯೆಂಬ ಹೆಸರನ್ನು ಕೊಡಲಾಗಿದೆ.

ಅಭಿನವಗುಪ್ತರು ಲೋಚನದಲ್ಲಿ ವ್ಯಂಜನಾವ್ಯಾಪಾರ, ವ್ಯಂಗ್ಯಾರ್ಥ, ಮುಂತಾದುವುಗಳಿಗೂ ಧ್ವನಿಯೆಂಬ ಹೆಸರನ್ನು ವಿಸ್ತರಿಸಿದ್ದರೂ, ಆನಂದವರ್ಧನ ಮತ್ತು ಮಮ್ಮಟರೂ ವ್ಯಂಜಕವಾದ ಶಬ್ದಾರ್ಥಯುಗಲರೂಪಕ್ಕೆ ಅಥವಾ ಕಾವ್ಯಕ್ಕೆ ಮಾತ್ರ ಧ್ವನಿಯೆಂಬ ಹೆಸರನ್ನು ಪರಿಮಿತಗೊಳಿಸಿ ರುವುದು ಗಮನಾರ್ಹ. ಇವರ ದೃಷ್ಟಿಯಲ್ಲಿ ಉತ್ತಮಕಾವ್ಯ ಮಾತ್ರ 'ಧ್ವನಿ'; ವ್ಯಾಕರಣದಲ್ಲಿ ಸ್ಫೋಟವನ್ನು ಅಭಿವ್ಯಕ್ತಗೊಳಿಸುವ ಶಬ್ದಗಳು ಮಾತ್ರ ಧ್ವನಿಯಾದಂತೆ!

[43] ಶ್ಲೋಕವು ಅಮರುಶತಕದಿಂದ ಉದಾಹೃತವಾಗಿದೆ.

[44] ಕಾಂತನನ್ನು ಕರೆತರಲು ನಾಯಿಕೆ ದೂತಿಯನ್ನು ಕಳಿಸಿದ್ದಾಳೆ. ಕಡೆಗೆ ನಾಯಕನಿಲ್ಲದೆ ದೂತಿಯೊಬ್ಬಳೇ ಅವನು ಸಿಕ್ಕಲಿಲ್ಲವೆನ್ನುತ್ತಾ ಬಂದಾಗ ಅವಳ ದೇಹಚಿಹ್ನೆಗಳಿಂದ ಆಕೆಯೇ ತನ್ನ ಕಾಂತನೊಡನೆ ರಮಿಸಿ ಬಂದಿದ್ದಾಳೆಂಬುದನ್ನು ತಿಳಿದ ನಾಯಿಕೆ ವ್ಯಂಗ್ಯವಾಗಿ ಈ ರೀತಿ ಅವಳ ಮರ್ಮೋದ್ಘಾಟನೆ ಮಾಡುವಳೆಂಬುದು ಟೀಕಾಕಾರರು ಕಲ್ಪಿಸುವ ಸಂದರ್ಭ. ಒಂದೊಂದಾಗಿ ಅವಳ ಸಂಭೋಗ ಚಿಹ್ನೆಗಳನ್ನು ಎತ್ತಿ ಎಲ್ಲಕ್ಕೂ ಕೆರೆಯ ಸ್ನಾನವೇ ಕಾರಣವೆಂದು ನಾಯಿಕೆಯು

ಅತಾದೃಶಿ ಗುಣೀಭೂತವ್ಯಂಗ್ಯಂ ವ್ಯಂಗ್ಯೇ ತು ಮಧ್ಯಮಮ್ ‖ ೫೩ ‖

ವ್ಯಂಗ್ಯವು ಹಾಗಲ್ಲದಿರುವಾಗ ಕಾವ್ಯ 'ಗುಣೀಭೂತ-ವ್ಯಂಗ್ಯ'ವೆನಿಸುತ್ತದೆ. ಅದು ಮಧ್ಯಮ ಕಾವ್ಯ[45].

ಹಾಗಲ್ಲದಿರುವಾಗ ಎಂದರೆ ವಾಚ್ಯಕ್ಕಿಂತ ಹೆಚ್ಚಿನ ಪ್ರಾಧಾನ್ಯವನ್ನು ಪಡೆಯದಿರುವಾಗ ಎಂದರ್ಥ. ಉದಾಹರಣೆ :—

ಗ್ರಾಮತರುಣಂ ತರುಣ್ಯಾ ನವವಂಜುಲಮಂಜರೀಸನಾಥಕರಮ್ ।
ಪಶ್ಯನ್ತ್ಯಾ ಭವತಿ ಮುಹುರ್ನಿತರಾಂ ಮಲಿನಾ ಮುಖಚ್ಛಾಯಾ ‖

ವರವಂಜುಲ[46]ಮಂಜರಿಯಂ
ಕರದೊಳ್ ಪಿಡಿದಿರ್ದ ತರುಣನಂ ಕಾಣಲೊಡಂ ।
ತರುಣಿಯ ಮುಖವರ್ಣಂ ತಾಂ
ಭರದಿಂದಂ ಮಲಿನಮಾಯ್ತು ಮೇಲಿಂ ಮೇಲಿಂ ‖

---

ಹೇಳುತ್ತಾ ಹೋಗುತ್ತಾಳೆ. ಕೆರೆಯ ಸ್ನಾನದಿಂದಲೂ ಈ ಚಿಹ್ನೆಗಳು ತಲೆದೋರಲು ಅವಕಾಶವಿರುವುದರಿಂದ ನಾಯಿಕೆಯ ಗೂಢಾರ್ಥವು ಮೊದಮೊದಲು ಭಾಸವಾಗುವುದಿಲ್ಲ. ಆದರೆ ಕಡೆಗೆ ತನ್ನ ರಮಣನನ್ನು ಇದ್ದಕ್ಕಿದ್ದಂತೆಯೇ 'ಅಧಮ'ನೆನ್ನುವಾಗ ಆ ಪದದಲ್ಲಿರುವ ಆಕ್ರೋಶಾತಿಶಯದಿಂದ ಅವನು ಮಹಾಪರಾಧವನ್ನೇ ಮಾಡಿರಬೇಕೆಂದು ಠಟ್ಟನೆ ಹೊಳೆಯುತ್ತದೆ. ದೂತೀಸುರತವೇ ಆ ಅಪರಾಧವೆಂಬುದೂ ಪೂರ್ವಪದಗಳ ಪುನರಾಲೋಚನೆಯಿಂದ ವ್ಯಕ್ತವಾಗುತ್ತದೆ. ದೂತಿಯನ್ನು ವ್ಯಂಗ್ಯವಾಗಿ ಧಿಕ್ಕರಿಸುವುದೇ ಪ್ರಕೃತದಲ್ಲಿ ನಾಯಿಕೆಯ ವಿವಕ್ಷೆಯೆಂದೂ ತಿಳಿಯುತ್ತದೆ. ಈ ಅಭಿಪ್ರಾಯವೇ ಇಲ್ಲಿ ಪ್ರಧಾನವಾಗಿರುವುದರಿಂದಲೂ, ಇದು ಕೇವಲ ವ್ಯಂಗ್ಯವೇ ಆಗಿರುವುದರಿಂದಲೂ ಇದು ಧ್ವನಿಕಾವ್ಯಕ್ಕೆ ಉದಾಹರಣೆ. ಇದಕ್ಕೆ ಮುಖ್ಯವಾಗಿ ಸಾಧಕವೆಂದರೆ 'ಅಧಮ' ಎಂಬ ಪದದಲ್ಲಿರುವ ಅಪಾರ ವ್ಯಂಜಕತ್ವ.

ಈ ಅಭಿಪ್ರಾಯವನ್ನು ಸರಿಯಾಗಿ ಗ್ರಹಿಸದೆ ವಿಶ್ವನಾಥನು ತರ್ಕದೃಷ್ಟಿಯಿಂದ ವಿವೇಚಿಸುತ್ತಾ ಇಲ್ಲಿ ವಿಪರೀತಲಕ್ಷಣಾ (ಅಥವಾ Irony) ಮೂಲವಾದ ವ್ಯಂಜಕತ್ವ ಇರುವುದೆಂದಿದ್ದಾನೆ. ಹಾಗೆನ್ನುವಾಗ, 'ಕಾಕು'ವಿನ ಬೆಲೆ ಹೆಚ್ಚಾಗುವುದೇ ಹೊರತು 'ಅಧಮ' ಎಂಬ ಪದದಲ್ಲಿರುವ ಸ್ವಾರಸ್ಯ ಹೊರಬೀಳುವುದಿಲ್ಲ. ವಿಪರೀತ ಲಕ್ಷಣೆಯನ್ನು ಆಶ್ರಯಿಸುವುದಾದರೆ ಪೂರ್ವವಾಕ್ಯಗಳಲ್ಲಿ ವಾಪೀಸ್ನಾನ, ಸುರತಕ್ರೀಡೆಗಳೆರಡಕ್ಕೂ ಸಮಾನವಾಗಿ ಅನ್ವಯಿಸುವ ಧರ್ಮಗಳನ್ನು ಹೇಳಿರುವುದಕ್ಕೆ ಪ್ರಯೋಜನವೂ ತಪ್ಪಿಹೋಗುತ್ತದೆ. (ನೋಡಿ—ಸಾಹಿತ್ಯದರ್ಪಣ, ಪು. ೧೪. *Kane Edn.*) ಮುಂದೆ ರಸಗಂಗಾಧರದಲ್ಲಿ ಜಗನ್ನಾಥನೂ ಮಮ್ಮಟನ ಅಭಿಪ್ರಾಯವನ್ನೇ ಸಮರ್ಥಿಸುತ್ತಾನೆ. (ಪು. ೧೬).

45 ಹೋಲಿಸಿ—ಕನ್ನಡ ಧ್ವನ್ಯಾಲೋಕ, ಪು. ೧೪೨, ೧೫೧.

46 "ಬಕುಲೋ ವಂಜುಲೋऽಶೋಕೇ" ಎಂದು ಕೋಶವಿರುವುದರಿಂದ 'ವಂಜುಲ' ಎಂದರೆ ಬಕುಲ ಅಥವಾ ಅಶೋಕ ಎಂದು ಅರ್ಥಮಾಡಬಹುದು.

ಇಲ್ಲಿ 'ವಂಜುಲಲತಾಗೃಹವನ್ನು ಸಂಕೇತಸ್ಥಾನವೆಂದು ಗೊತ್ತುಮಾಡಿದ್ದ ತರುಣಿ ಅಲ್ಲಿಗೆ ಬರಲಾಗಲಿಲ್ಲ'ವೆಂಬ ವ್ಯಂಗ್ಯವು ಅಮುಖ್ಯವಾಗಿದೆ; ಅದಕ್ಕಿಂತಲೂ ವಾಚ್ಯವೇ ಚಮತ್ಕಾರಮಯವಾಗಿರುವುದರಿಂದ[47].

ಶಬ್ದಚಿತ್ರಂ ವಾಚ್ಯಚಿತ್ರಮವ್ಯಂಗ್ಯಂ ತ್ವವರಂ ಸ್ಮೃತಮ್ ‖ ೫b ‖

ವ್ಯಂಗ್ಯವೇ ಇಲ್ಲದ ಕಾವ್ಯ ಶಬ್ದಚಿತ್ರ ಇಲ್ಲವೆ ಅರ್ಥಚಿತ್ರ; ಅದು ಅಧಮ ಕಾವ್ಯ.

ಚಿತ್ರವೆಂದರೆ ಗುಣ ಮತ್ತು ಅಲಂಕಾರಗಳಿಂದ ಮಾತ್ರ ಕೂಡಿರುವುದೆಂದರ್ಥ. ವ್ಯಂಗ್ಯವಿಲ್ಲದ ಎಂದರೆ ಸ್ಫುಟವಾದ ವ್ಯಂಗ್ಯಾರ್ಥವಿಲ್ಲದ ಎಂದು ಅಭಿಪ್ರಾಯ[48]. 'ಅವರ' ಎಂದರೆ ಅಧಮ[49]. ಉದಾಹರಣೆ (ಶಬ್ದಚಿತ್ರಕ್ಕೆ)—

ಸ್ವಚ್ಛನ್ದೋಚ್ಛಲದಚ್ಛಕಚ್ಛಕುಹರಚ್ಛಾತೇತರಾಂಬುಚ್ಛಟಾ-
ಮೂರ್ಛನ್ಮೋಹಮಹರ್ಷಿಹರ್ಷವಿಹಿತಸ್ನಾನಾಹ್ನಿಕಾಹ್ನಾಯ ವಃ |
ಭಿದ್ಯಾದುದ್ಯದುದಾರದರ್ದುರದರೀದೀರ್ಘಾದರಿದ್ರದ್ರುಮ-
ದ್ರೋಹೋದ್ರೇಕಮಹೋರ್ಮಿಮೇದುರಮದಾ ಮಂದಾಕಿನೀ
ಮಂದತಾಮ್[50] ‖

ಸ್ವಚ್ಛಂದಮುಚ್ಚಲಿಪ ಸ್ವಚ್ಛಕಚ್ಛದ ಬಳಿಯ
ದುರ್ಬಲತೆಯಂ ಬಲದಿನಸುಗೊಳಿಪ ಬೊಬ್ಬುಳಿಯ
ಪೆರ್ಚಳದಿನಚ್ಚುಗವ ನುರ್ಚುನೂರಾಗಿಸುವ,
ಹರಿಸಮಿಗೆ ರಿಸಿಗಳಾ ಮಜ್ಜನಾದ್ಯುಜ್ಜುಗವ
ಬಿಚ್ಚಳಿಪ, ದಪ್ಪವಹ ಕಪ್ಪೆಗಳು ಕುಪ್ಪಳಿಪ,
ಕಂದರದ ಪೆರ್ಮರವನೊರ್ಮೊದಲೆ ಮಾರ್ಮಲೆವ,

[47] ಹಿಂದಿನ ಶ್ಲೋಕದಲ್ಲಿ ದೂತಿಯ ನಿಂದೆ ಹೇಗೆ ಪ್ರಧಾನವೋ ಹಾಗೆ ಇಲ್ಲಿ ತರುಣಿ ಸಂಕೇತಕ್ಕೆ ತಪ್ಪಿದಳೆಂಬ ವಿಷಯವು ಪ್ರಧಾನವಲ್ಲ; ವಾಚ್ಯವಾದ ವರ್ಣನೆಯೇ ವ್ಯಂಗ್ಯವಸ್ತುವಿಗಿಂತಲೂ ರಮಣೀಯವಾಗಿರುವುದರಿಂದ. ಹಿಂದಿನ ಶ್ಲೋಕದಲ್ಲಿ ವಾಪೀಸ್ನಾನದ ವಾಚ್ಯವರ್ಣನೆಗಿಂತಲೂ ಸುರತಚಿಹ್ನೆಯ ವ್ಯಂಗ್ಯನಿರೂಪಣೆ ಹೃದಯಂಗಮವಾಗಿರುವುದರಿಂದ ಪ್ರಧಾನ.

[48] ಏಕೆಂದರೆ ಅಸ್ಫುಟವಾದ ವ್ಯಂಗ್ಯವಿಲ್ಲದ ವಸ್ತುವೇ ವಿಶ್ವದಲ್ಲಿ ವಿರಲ.

[49] ಹೋಲಿಸಿ—ಕನ್ನಡ ಧ್ವನ್ಯಾಲೋಕ, ಪು. ೧೫೬.

[50] ಇಲ್ಲಿ 'ಛೇಕ' ಮತ್ತು ವೃತ್ಯನುಪ್ರಾಸಗಳೆಂಬ ಶಬ್ದಾಲಂಕಾರಗಳು ಸುಸ್ಪಷ್ಟ.

ಪೇರಲೆಗಳುರ್ವಿನಿಂ ಕೊರ್ವಿ ಗರ್ವವನುಲಿವ,
ಮಂದಾಕಿನಿಯೆ! ನೀನೆಮ್ಮ ಮಂದತೆಯ ನೀಗೌ.

(ಅರ್ಥಚಿತ್ರಕ್ಕೆ ಉದಾಹರಣೆ:—)

ವಿನಿರ್ಗತಂ ಮಾನದಮಾತ್ಮಮಂದಿರಾತ್
ಭವತ್ಯುಪಶ್ರುತ್ಯ ಯದೃಚ್ಛಯಾಪಿ ಯಮ್ ।
ಸಸಂಭ್ರಮೇಂದ್ರದ್ರುತಪಾತಿತಾರ್ಗಲಾ
ನಿಮೀಲಿತಾಕ್ಷೀವ ಭಿಯಾಮರಾವತೀ[51] ॥

ಮಾನದಮನನೆನಿಪ್ಪ ದಾನವನು ಸ್ವೇಚ್ಛೆಯೊಳೆ
ಆವ ನೆವಮಿಲ್ಲದೆಯೆ ನಿಜಗೃಹವ ಬಿಡೆಯೂ ।
ಅದ ಕೇಳಿದಿಂದ್ರನವನಗುಳಿಯನು ವಹಿಲದೊಳೆ
ಹಾಕಲಮರಾವತಿಯು ಬೆಚ್ಚಿದಂಗನೆ ತಾನು
ಕಣ್ಮುಚ್ಚಿಕೊಂಡಿಹಳು ದಿಟವೆನಿಸದೇಸು[52] ॥

ಇಲ್ಲಿಗೆ ಕಾವ್ಯಪ್ರಕಾಶದಲ್ಲಿ ಕಾವ್ಯದ ಪ್ರಯೋಜನ-ಕಾರಣ-ಸ್ವರೂಪ-ವಿಶೇಷಗಳ ನಿರ್ಣಯವೆಂಬ ಮೊದಲನೆಯ ಉಲ್ಲಾಸ ಮುಗಿದುದು.

ನುತಶಬ್ದಾರ್ಥಶರೀರಂ
ಗತದೋಷಂ ಸರಸಸಗುಣಸದಲಂಕೃತಿಯಿಂ ।
ಕೃತತೋಷಂ ಕವಿಸಹೃದಯ
ತತಿಗೆನಿಪೀ ಕಾವ್ಯಲಕ್ಷಣಂ ಸಂಸೇವ್ಯಂ ॥

---

[51] ಈ ಶ್ಲೋಕದ ಆಕರ ಹಯಗ್ರೀವವಧವೆಂಬ ಕಾವ್ಯ.

[52] ಇಲ್ಲಿ ಉತ್ಪ್ರೇಕ್ಷೆಯೆಂಬ ಅರ್ಥಾಲಂಕಾರವು ಸ್ಪಷ್ಟ.

*

# ಎರಡನೆಯ ಉಲ್ಲಾಸ

ಈಗ ಕ್ರಮವಾಗಿ[1] ಶಬ್ದ[2] ಮತ್ತು ಅರ್ಥಗಳ ಸ್ವರೂಪವನ್ನು ಹೇಳುತ್ತಾನೆ—

ಸ್ಯಾದ್ ವಾಚಕೋ ಲಾಕ್ಷಣಿಕಃ ಶಬ್ದೋऽತ್ರ ವ್ಯಂಜಕಸ್ತ್ರಿಧಾ ‖ ೧*a* ‖

ಇಲ್ಲಿ ಶಬ್ದ ಮೂರು ಬಗೆ—(೧) ವಾಚಕ (೨) ಲಾಕ್ಷಣಿಕ ಮತ್ತು (೩) ವ್ಯಂಜಕ.

ಇಲ್ಲಿ ಎಂದರೆ ಕಾವ್ಯದಲ್ಲಿ[3]; ಈ ಮೂರು ಬಗೆಯ ಶಬ್ದಗಳ ಸ್ವರೂಪವನ್ನು ಮುಂದೆ ಹೇಳುವೆವು.

ವಾಚ್ಯಾದಯಸ್ತದರ್ಥಾಃ ಸ್ಯುಃ ತಾತ್ಪರ್ಯಾರ್ಥೋऽಪಿ ಕೇಷುಚಿತ್ ‖ ೧*b* ‖

ಅವುಗಳ ಅರ್ಥಗಳು 'ವಾಚ್ಯ' ಮುಂತಾದವು. ಕೆಲವರ[4] ಮತದಲ್ಲಿ ತಾತ್ಪರ್ಯಾರ್ಥವೆಂಬುದೂ ಒಂದುಂಟು.

'ವಾಚ್ಯ ಮುಂತಾದವು' ಎಂದರೆ ವಾಚ್ಯ, ಲಕ್ಷ್ಯ, ವ್ಯಂಗ್ಯಗಳು.

---

[1] ಮೊದಲನೆಯ ಉಲ್ಲಾಸದಲ್ಲಿ ಹೇಳಿದ ಕಾವ್ಯಲಕ್ಷಣದಲ್ಲಿ ಅಂತರ್ಗತವಾದ ಒಂದೊಂದು ಅಂಶದ ವಿವರಣೆಗೂ ಒಂದೊಂದು ಉಲ್ಲಾಸವೇ ವಿೀಸಲಾಗಿದೆ. ಈ ಉಲ್ಲಾಸ ಲಕ್ಷಣವಾಕ್ಯದ ಮುಖ್ಯಾಂಶವಾದ ಶಬ್ದಾರ್ಥಗಳ ಸ್ವರೂಪವನ್ನು ನಿರ್ಣಯಿಸುತ್ತದೆ.

[2] ಶಬ್ದ ಎಂದರೆ ಇಲ್ಲಿ ಅರ್ಥಬೋಧಕವಾದ ವರ್ಣಸಮೂಹ; ಅರ್ಥಶೂನ್ಯ ಸದ್ದುಗಳಲ್ಲ.

[3] ಸಂಸ್ಕೃತ ದಾರ್ಶನಿಕರು ಶಾಸ್ತ್ರದಲ್ಲಿ ಶಬ್ದಕ್ಕೆ ಮೂರನೆಯ ವ್ಯಾಪಾರವನ್ನೊಪ್ಪುತ್ತಿರಲಿಲ್ಲ; ಆನಂದವರ್ಧನನಿಗಿಂತ ಹಿಂದಿನ ಆಲಂಕಾರಿಕರೇ ಒಪ್ಪುತ್ತಿರಲಿಲ್ಲ. ಈಚಿನವರಲ್ಲಿಯೂ ಭೋಜನೇ ಮುಂತಾದವರು ಕಾವ್ಯದಲ್ಲಿ ಮಾತ್ರ ಅದನ್ನು ಒಪ್ಪಿದರು. ಶಾಸ್ತ್ರದಲ್ಲಿ ಒಪ್ಪುವುದನಗತ್ಯವೆಂದರು— "ತಾತ್ಪರ್ಯಮೇವ ವಚಸಿ ಧ್ವನಿರೇವ ಕಾವ್ಯೇ". ಮಮ್ಮಟನು ಚರ್ಚೆಗೆ ಹೋಗದೆ ಅದರ ವ್ಯಾಪ್ತಿಯನ್ನು ಪರಿಮಿತಗೊಳಿಸಿದ್ದಾನೆ.

[4] ಎಂದರೆ ಮೀಮಾಂಸಕರು. ಮೀಮಾಂಸಕರಲ್ಲಿ ಕುಮಾರಿಲಭಟ್ಟರ ಅನುಯಾಯಿಗಳಿಗೆ ಭಾಟ್ಟರೆಂದೂ ಪ್ರಭಾಕರನ ಅನುಯಾಯಿಗಳಿಗೆ ಪ್ರಾಭಾಕರರೆಂದೂ ವ್ಯವಹರಿಸುವುದು ರೂಢಿ. ಇವರಲ್ಲಿ ಪರಸ್ಪರ ಪ್ರಕ್ರಿಯಾಭೇದಗಳುಂಟು. ಭಾಟ್ಟರು ಶಬ್ದಗಳಿಗೆ ತಾತ್ಪರ್ಯಾರ್ಥವೂ ಒಂದುಂಟೆಂದು ಒಪ್ಪುತ್ತಾರೆ; ಪ್ರಾಭಾಕರರು ಮಾತ್ರ ಒಪ್ಪುವುದಿಲ್ಲ.

ಆಕಾಂಕ್ಷೆ[5], ಯೋಗ್ಯತೆ[6] ಮತ್ತು ಸನ್ನಿಧಿ[7]ಗಳ ಪ್ರಭಾವದಿಂದ ಪದಗಳ ಅರ್ಥಗಳನ್ನು—ಇವುಗಳ ಸ್ವರೂಪವನ್ನು ಮುಂದೆ ವಿವರಿಸಿದೆ—ಅನ್ವಯಮಾಡಿಕೊಂಡಾಗ ವಿಲಕ್ಷಣವೂ ಪದಗಳ ಪ್ರತ್ಯೇಕಾರ್ಥಗಳಿಗಿಂತ ಭಿನ್ನವೂ ಆದ ಹೊಸದೊಂದು ವಾಕ್ಯಾರ್ಥ ಮೇಲೆದ್ದು ಕಾಣುತ್ತದೆ. ಇದೇ ತಾತ್ಪರ್ಯಾರ್ಥವೆಂದು ಅಭಿಹಿತಾನ್ವಯವಾದಿಗಳ ಮತ[8]. ಆದರೆ ವಾಕ್ಯಾರ್ಥವೂ ವಾಚ್ಯವೆಂಬುದು ಅನ್ವಿತಾಭಿಧಾನವಾದಿಗಳ ಅಭಿಪ್ರಾಯ.[9]

ಸರ್ವೇಷಾಂ ಪ್ರಾಯಶೋಽರ್ಥಾನಾಂ ವ್ಯಂಜಕತ್ವಮಪೀಷ್ಯತೇ ॥ ೨a ॥

ಪ್ರಾಯಿಕವಾಗಿ ಎಲ್ಲ ಅರ್ಥಗಳಿಗೂ ವ್ಯಂಜಕತ್ವವನ್ನೊಪ್ಪಲಾಗಿದೆ.[10] ವಾಚ್ಯಾರ್ಥದ ವ್ಯಂಜಕತ್ವಕ್ಕೆ ಉದಾಹರಣೆ:—

ಮಾಏ ಘರೋವಅರಣಂ ಅಜ್ಜ ಹು ಣತ್ಥಿತ್ತಿ ಸಾಹಿಅಂ ತುಮಏ ।
ತಾ ಭಣ ಕಿಂ ಕರಣಿಜ್ಜಂ ಏಮೇಅ ಣ ವಾಸರೋ ಠಾಇ ॥

---

[5] ತಿಳಿಯುವವನ ಜಿಜ್ಞಾಸೆಯೇ 'ಆಕಾಂಕ್ಷೆ'. ಅದನ್ನು ಪೂರೈಸುವ ಶಬ್ದಾರ್ಥಗಳಿಗೂ ಅದನ್ನು ಆರೋಪಿಸಬಹುದು. ಹೋಲಿಸಿ—

'ಆಕಾಂಕ್ಷಾ ಪ್ರತಿಪತ್ತುರ್ಹಿ ಜಿಜ್ಞಾಸಾನವಸಾನತಃ ।
ಸಾ ಹಿ ಶಬ್ದಾರ್ಥಯೋರ್ಜಾತಾ ತದ್ಧರ್ಮ ಉಪಚರ್ಯತೇ ॥

[6] ಶಬ್ದಗಳಿಗೆ ಪರಸ್ಪರ ಸಂಬಂಧದ ಅರ್ಹತೆಯೇ 'ಯೋಗ್ಯತೆ'.

[7] ಆಕಾಂಕ್ಷಿತವೂ ಯೋಗ್ಯವೂ ಆದ ಪದಗಳ ಅತ್ಯಂತ ಸಾಮೀಪ್ಯವು 'ಸನ್ನಿಧಿ'.

[8] ಭಾಟ್ಟಮೀಮಾಂಸಕರಿಗೆ ಅಭಿಹಿತಾನ್ವಯವಾದಿಗಳೆಂದೂ ಹೆಸರು. 'ಶಬ್ದಗಳಿಗೆ ವಸ್ತುಬೋಧಕತ್ವವುಂಟೇ ಹೊರತು ಅನ್ವಯ ಅಥವಾ ಅವುಗಳ ಪರಸ್ಪರ ಸಂಬಂಧವನ್ನೂ ಬೋಧಿಸುವ ಶಕ್ತಿಯಿಲ್ಲ. ಅವೇ ವಾಕ್ಯದ ಅಂಶಗಳೆನಿಸಿದಾಗ ಪ್ರಕರಣ ಬಲದಿಂದ ಸಂಬಂಧವನ್ನೂ ತೋರಿಸಬಲ್ಲವು. ಹೀಗೆ ಶಬ್ದಗಳಿಗೆ ವಾಕ್ಯಾಂಗಗಳಾದಾಗ ಬರುವ ವ್ಯಾಪಾರವೇ ತಾತ್ಪರ್ಯ. ಹೀಗೆ ಅರ್ಥಗಳು ಮೊದಲು ಅಭಿಹಿತವಾದ ಮೇಲೆ ಅವುಗಳ ಅನ್ವಯಕಾಲದಲ್ಲಿ ಮಾತ್ರ ತಾತ್ಪರ್ಯ ವಾಕ್ಯದಿಂದ ಪ್ರತೀತವಾಗುತ್ತದೆ' ಎಂಬುದು ಅವರ ಸಿದ್ಧಾಂತ.

[9] ಅನ್ವಿತಾಭಿಧಾನವಾದಿಗಳೆಂದರೆ ಪ್ರಾಭಾಕರರು. ಇವರು ಶಬ್ದಗಳ ಅರ್ಥಸಮುದಾಯಕ್ಕಿಂತ ಬೇರೆಯಾದ ವಾಕ್ಯಾರ್ಥ ಅಥವಾ ತಾತ್ಪರ್ಯಾರ್ಥವನ್ನೊಪ್ಪುವುದಿಲ್ಲ. ಇವರ ಪ್ರಕಾರ ಶಬ್ದಗಳು ಮೊದಲು ಅನ್ವಿತವಾದ ಮೇಲೆಯೇ ತಮ್ಮ ಅರ್ಥವನ್ನು ಬೋಧಿಸುತ್ತವೆ; ಅನನ್ವಿತವಾದ ಶಬ್ದಗಳು ಅರ್ಥಪ್ರತೀತಿಕರಗಳೇ ಅಲ್ಲ.

[10] ಇದೇ ಕಾವ್ಯದ ವೈಶಿಷ್ಟ್ಯ. ಶಾಸ್ತ್ರದಲ್ಲಿ ಅರ್ಥಗಳು ಗಮ್ಯವೇ ಹೊರತು ಗಮಕಗಳಲ್ಲ. ಆದರೆ ಕಾವ್ಯದಲ್ಲಿ ಎಲ್ಲ ಬಗೆಯ ಅರ್ಥಗಳಿಗೂ ವ್ಯಂಜಕತ್ವವುಂಟು. ಇದರ ವಿವರಣೆಗೆ ಮುಂದೆ ಮೂರನೆಯ ಉಲ್ಲಾಸವನ್ನೋದಿ.

ಅಮ್ಮ ! ನುಡಿದೆ ನೀನೆಯಿಂದು ಮನೆಯೊಳಿಲ್ಲ ವಸ್ತುವು |
ಪೇಳು ಮಾಳ್ಪುದೇನನಿನ್ನು ನಿಲ್ಲದಿಂತೆ ದಿವಸವು ||

ಇಲ್ಲಿ ಮಗಳು ಸ್ವೈರವಿಹಾರಕ್ಕೆ ಹೊರಟಿದ್ದಾಳೆಂದು ಸೂಚಿತವಾಗುತ್ತದೆ.[11] ಲಕ್ಷ್ಯಾರ್ಥದ ವ್ಯಂಜಕತ್ವಕ್ಕೆ ಉದಾಹರಣೆ :—

ಸಾಹೇನ್ತೀ ಸಹಿ ಸುಹಅಂ ಖಣೇ ಖಣೇ ದೂಮಿಆಸಿ ಮಜ್ಝ ಕಏ |
ಸಬ್ಭಾವಣೇಹಕರಣಿಜ್ಜಸರಿಸಅಂ ದಾವ ವಿರಇಅಂ ತುಮಏ ||

ಒಲಿಸುತ್ತೆ ಸುಭಗನನು ಸಖಿಯೆ! ನೀನೆನಗಾಗಿ
ಚಣಚಣವು ನೊಂದು ಬೆಂದಿರುವೆಯಲ್ತೆ |
ಸದ್ಭಾವ ಸುಸ್ನೇಹ ಸದೃಶವೆನಿಸುವ ಕಾರ್ಯ—
ವಾವುದೋ ನೀನದನೆ ಗೈದೆಯಲ್ತೆ ||

ಇಲ್ಲಿ, 'ನನ್ನ ಪ್ರಿಯನನ್ನು ರಮಿಸಿದ ನೀನು ಶತ್ರುವಿನಂತೆ ವರ್ತಿಸಿದ್ದೀಯೆ' ಎಂಬುದು ಲಕ್ಷ್ಯಾರ್ಥ. ಅದರ ಮೇಲಿಂದ ಸೂಚಿತವಾಗುವ 'ಕಾಮುಕನೂ ಅಪರಾಧಿ'ಯೆಂಬ ವಿಷಯ ವ್ಯಂಗ್ಯಾರ್ಥ.[12] ವ್ಯಂಗ್ಯಾರ್ಥದ ವ್ಯಂಜಕತ್ವಕ್ಕೆ ಉದಾಹರಣೆ :—

ಉಅ ಣಿಚ್ಚಲಣಿಪ್ಪನ್ದಾ ಭಿಸಿಣೀಪತ್ತಮ್ಮಿ ರೇಹಇ ಬಲಾಆ |
ಣಿಮ್ಮಲಮರಗಅ ಭಾಅಣಪರಿಟ್ಠಿಆ ಸಂಖಸುತ್ತಿವ್ವ ||

ನೋಡು ಬೆಳ್ಳಕ್ಕಿಯಿದು ನಿಶ್ಚಲವು[13] ನಿಷ್ಪಂದ[14]
ಪದ್ಮಪತ್ರದ ಮೇಲೆ ಕಂಗೊಳಿಪುದು |
ನಿರ್ಮಲದ ಮರಕತದ ಹರಿವಾಣದೊಳಗಿಟ್ಟ
ಶಂಖಶುಕ್ತಿಯೊ ತಾನು ಎಂದೆನಿಪುದು ||

ಇಲ್ಲಿ, ಹಕ್ಕಿ ನಿಷ್ಪಂದವಾಗಿರುವುದರಿಂದ ಅದರ ನಿರ್ಭಯವೂ, ನಿರ್ಭಯದ ಮೇಲಿಂದ ಅಲ್ಲ ಜನಗಳಾರೂ ಇಲ್ಲವೆಂಬುದೂ, ಅದರ ಮೇಲಿಂದ ಸ್ಥಲ ಸಂಕೇತಸ್ಥಾನ

[11] ಹೇಳುವ ವ್ಯಕ್ತಿಯ ವೈಶಿಷ್ಟ್ಯದಿಂದ. ಅವಳು ಜಾರಿಣಿಯಲ್ಲದಿದ್ದರೆ ಯಾವ ವ್ಯಂಗ್ಯಾರ್ಥವೂ ಇರುತ್ತಿರಲಿಲ್ಲ.

[12] ವ್ಯಂಗ್ಯಾರ್ಥಪರಾಮರ್ಶಕ್ಕೆ ರಸಿಕರು ಮಾತ್ರ ಅಧಿಕಾರಿಗಳು. ಹೋಲಿಸಿ—ಕನ್ನಡ ಧ್ವನ್ಯಾಲೋಕ, ಪು. ೯-೧೦.

[13] ನಿಶ್ಚಲ=ಎಡೆಯಿಂದೆಡೆಗೆ ಹಾರಾಡದ (ಮಾಣಿಕ್ಯಚಂದ್ರ).

[14] ನಿಷ್ಪಂದ=ಅಂಗಾಂಗಗಳನ್ನು ಚಲಿಸದ (ಮಾಣಿಕ್ಯಚಂದ್ರ).

ವಾಗಲು ಯೋಗ್ಯವಾಗಿದೆಯೆಂಬುದೂ ನಾಯಿಕೆಯಿಂದ ನಾಯಕನಿಗೆ ಸೂಚಿತ ವಾಗಿದೆ.[15] ಅಥವಾ 'ನೀನು ಸುಳ್ಳಾಡುತ್ತಿರುವೆ; ಇಲ್ಲಿ ನೀನು ಮುಂಚೆ ಬಂದೇ ಇಲ್ಲ' ಎಂಬಂಶ ಸೂಚಿತವಾಗಿದೆ.[16]

ಇನ್ನು ಕ್ರಮವಾಗಿ ವಾಚಕವೇ ಮೊದಲಾದ ಶಬ್ದಗಳ ಸ್ವರೂಪವನ್ನು ಹೇಳು ತ್ತಾನೆ—

ಸಾಕ್ಷಾತ್ ಸಂಕೇತಿತಂ ಯೋಽರ್ಥಮಭಿಧತ್ತೇ ಸ ವಾಚಕಃ ॥ ೭b ॥

ಯಾವುದು ನೇರವಾಗಿ ಸಂಕೇತಸಿದ್ಧವಾದ ಅರ್ಥವನ್ನು ಪ್ರತಿಪಾದಿಸುವುದೋ ಅದು ವಾಚಕ(ಶಬ್ದ).

ಲೋಕವ್ಯವಹಾರದಲ್ಲಿ ಸಂಕೇತ[17]ತಿಳಿಯದ ಮನುಷ್ಯನಿಗೆ ಶಬ್ದದಿಂದ ಅರ್ಥ ವಿಶೇಷದ ಪರಿಜ್ಞಾನವೇ ಉಂಟಾಗುವುದಿಲ್ಲ. ಆದ್ದರಿಂದ ಸಂಕೇತದ ಸಹಾಯವನ್ನು ಪಡೆದೇ ಶಬ್ದ ಅರ್ಥವಿಶೇಷವನ್ನು ಪ್ರತಿಪಾದಿಸುವುದೆನ್ನಬೇಕು. ಎಂದಮೇಲೆ ಯಾವು ದಕ್ಕೆ ಯಾವುದರಲ್ಲಿ ಸಂಕೇತ ನೇರವಾಗಿ[18] ಸಿದ್ಧವೋ ಅದಕ್ಕದು ವಾಚಕ ವೆಂದಂತಾಯಿತು.

ಸಂಕೇತಿತಶ್ಚತುರ್ಭೇದೋ ಜಾತ್ಯಾದಿರ್ಜಾತಿರೇವ ವಾ । ೭a ।

ಸಂಕೇತಸಿದ್ಧವಾದ ಅರ್ಥ 'ಜಾತಿ' ಮುಂತಾದ ನಾಲ್ಕು ಬಗೆಯೆನ್ನಬಹುದು; ಅಥವಾ 'ಜಾತಿ'ಯೊಂದೇ ಎನ್ನಬಹುದು.

ಕಾರ್ಯಸಾಧನೆಗಾಗಲಿ ಕೆಲಸದಲ್ಲಿ (ಕರ್ತೃವಿನ) ಪ್ರವೃತ್ತಿಗಾಗಲಿ ನಿವೃತ್ತಿ ಗಾಗಲಿ ಯೋಗ್ಯವಾದುದು ವ್ಯಕ್ತಿಯೇ[19] ಆದರೂ ವ್ಯಕ್ತಿಯಲ್ಲೇ ಸಂಕೇತವುಂಟೆನ್ನಲು ಎರಡು ಅಡ್ಡಿಗಳಿವೆ—(೧) ಆನಂತ್ಯ[20] ಮತ್ತು (೨) ವ್ಯಭಿಚಾರ.[21] ಅಲ್ಲದೆ 'ಓಡಾಡು

---

15 ಪ್ರಕರಣ ಸಂಭೋಗಶೃಂಗಾರಕ್ಕೆ ಪೋಷಕವೆಂದು ಭಾವಿಸುವುದಾದರೆ ಈ ಧ್ವನಿ.

16 ಪ್ರಕರಣ ವಿಪ್ರಲಂಭಶೃಂಗಾರಕ್ಕೆ ಪೋಷಕವೆಂದು ತಿಳಿದರೆ ಇದು ವ್ಯಂಗ್ಯ.

17 ಈ ಪದ್ಯಕ್ಕೆ ಇದೇ ಅರ್ಥವೆಂಬ ನಿಯಮವೇ ಸಂಕೇತ. ಇದು ಈಶ್ವರೇಚ್ಛೆಯಿಂದಾದು ದೆಂದು ತಾರ್ಕಿಕರೂ ವ್ಯವಹಾರಾಧೀನವೆಂದು ವೈಯಾಕರಣಿಗಳೂ ಹೇಳುತ್ತಾರೆ.

18 ಲಕ್ಷಣೆಯಲ್ಲಿ ಅರ್ಥ ಹೀಗೆ ನೇರವಾಗಿ ಬರುವುದಿಲ್ಲ; ಅಲ್ಲಿ ಲಕ್ಷ್ಯಾರ್ಥಗ್ರಹಣೆ ದೂರ ಅಥವಾ ವ್ಯವಹಿತವಾಗಿರುತ್ತದೆ.

19 ಒಂದು ಜಾತಿಯಲ್ಲಿ ಬರುವ ಅನೇಕ ವಸ್ತುಗಳಲ್ಲಿ ಒಂದೊಂದೂ 'ವ್ಯಕ್ತಿ'ಯೆನಿಸುತ್ತದೆ.

20 ವ್ಯಕ್ತಿಗಳ ಸಂಖ್ಯೆ ಅನಂತವಾದುದರಿಂದ ಸಂಕೇತವನ್ನೂ ಅನಂತಸಂಖ್ಯೆಯಲ್ಲಿ ಕಲ್ಪಿಸ ಬೇಕಾಗುತ್ತದೆ. ಹಾಗೆ ಕಲ್ಪಿಸಿದರೆ ಆನಂತ್ಯವೆಂಬ ತರ್ಕದೋಷ ಬರುತ್ತದೆ, ಏಕೆಂದರೆ ಅನಂತ ವ್ಯಕ್ತಿಗಳೆಲ್ಲವನ್ನೂ ತಿಳಿದವನಿಲ್ಲ.

ತ್ತಿರುವ ಡಿತ್ಥನೆಂಬ ಬಿಳಿಯ ಆಕಳು' ಎಂಬ ಪ್ರಯೋಗದಲ್ಲಿ ಬೇರೆ ಬೇರೆ ಶಬ್ದಗಳು ಬೇರೆ ಬೇರೆ ಪ್ರಕಾರ ವಾಚಿಗಳಾಗಿರುವುದನ್ನು[22] ಇಲ್ಲವೆನ್ನುವ ಪರಿಸ್ಥಿತಿಯುಂಟಾಗುತ್ತದೆ. ಆದುದರಿಂದ ವ್ಯಕ್ತಿಯಲ್ಲಿ ಸಂಕೇತವನ್ನೊಪ್ಪುವುದಿಲ್ಲ; ವ್ಯಕ್ತಿಯ 'ಉಪಾಧಿ'[23] ಯಲ್ಲಿ ಮಾತ್ರ ಸಂಕೇತವುಂಟು.

ಉಪಾಧಿಯೂ ಎರಡು ಬಗೆ—(೧) ವಸ್ತುವಿನಲ್ಲಿಯೇ ಇರುವ ಧರ್ಮ (೨) ಹೇಳುವ ಮನುಷ್ಯನು ತನ್ನ ಇಷ್ಟಾನುಸಾರವಾಗಿ ಆರೋಪಿಸುವ ಧರ್ಮ. ವಸ್ತುಧರ್ಮ ಮತ್ತೆ ಎರಡು ಬಗೆ—(೧) ಸಿದ್ಧವಾದುದು ಮತ್ತು (೨) ಮುಂದೆ ಸಿದ್ಧವಾಗತಕ್ಕದು. ಇವುಗಳಲ್ಲಿ ಮೊದಲನೆಯದಾದ ಸಿದ್ಧವಸ್ತುಧರ್ಮ ಪುನಃ ಎರಡು ಬಗೆಯದು—(೧) ವಸ್ತುವಿಗೆ ಪ್ರಾಣಪ್ರದವಾದುದು[24] ಮತ್ತು (೨) ವಸ್ತುವಿಗೆ ವಿಶೇಷವನ್ನು ತರುವಂತಹುದು. ಇವುಗಳಲ್ಲಿ ಮೊದಲನೆಯದೇ 'ಜಾತಿ' (=*genus*). "**ವಾಕ್ಯಪದೀಯ**"[25]ದಲ್ಲಿ ಹೇಳಿರುವಂತೆ—"ಆಕಳು ಸ್ವರೂಪ ಮಾತ್ರದಿಂದ[26] ಆಕಳೂ

---

[21] ಇದನ್ನು ತಪ್ಪಿಸಲು ತಿಳಿದಷ್ಟು ವ್ಯಕ್ತಿಗಳಲ್ಲಿ ಮಾತ್ರ ಸಂಕೇತವುಂಟೆಂದರೆ ಆಗ 'ವ್ಯಭಿಚಾರ'ವೆಂಬ ಮತ್ತೊಂದು ದೋಷ ಸಂಘಟಿಸುತ್ತದೆ; ವಸ್ತುತಃ ಸ್ವತಃ ತಿಳಿಯದಿರುವ ವ್ಯಕ್ತಿಯ ಪ್ರತೀತಿಯೂ ಶಬ್ದದಿಂದಾಗುವುದು ಲೋಕಸಿದ್ಧವಾದುದರಿಂದ ಲಕ್ಷಣ ಇಲ್ಲಿ ಅನ್ವಯಿಸದೆ ತಪ್ಪುತ್ತದೆ.

[22] ಇದರ ವಿವರಣೆ ಈಗಲೇ ಮುಂದೆ ಬರುತ್ತದೆ.

[23] ಉಪಾಧಿಯೆಂದರೆ ವ್ಯಕ್ತಿಯ ವಿಶೇಷಣ. ಜಾತಿ, ಗುಣ, ಕ್ರಿಯೆ, ಯದೃಚ್ಛಾದತ್ತ ಸಂಜ್ಞೆ—ಈ ನಾಲ್ಕನ್ನೂ ವೈಯಾಕರಣಿಗಳು ವ್ಯಕ್ತಿಯ ವಿಶೇಷಣ ಅಥವಾ ಉಪಾಧಿಗಳೆನ್ನುತ್ತಾರೆ. ವೈಯಾಕರಣರೂ ಮೀಮಾಂಸಕರೂ ಸಂಕೇತವು ಉಪಾಧಿಯಲ್ಲಿ ಮಾತ್ರ ಉಂಟೆಂದರೆ ನೈಯಾಯಿಕರು ವ್ಯಕ್ತಿ, ಉಪಾಧಿಗಳೆರಡರಲ್ಲೂ ಉಂಟೆನ್ನುತ್ತಾರೆ. ಬೌದ್ಧರು ಎರಡರಲ್ಲೂ ಇಲ್ಲವೆನ್ನುತ್ತಾರೆ. ಅವರ ಪ್ರಕಾರ ಬೇರೊಂದಲ್ಲವೆನ್ನುವುದೇ ಅಥವಾ ಅನ್ಯಾಪೋಹವೇ ಸಂಕೇತದ ವಿಷಯ. ಅಲಂಕಾರಶಾಸ್ತ್ರಕ್ಕೆ ವೈಯಾಕರಣರ ಸಿದ್ಧಾಂತಗಳೇ ಹೆಚ್ಚು ಪ್ರಮಾಣವೆಂಬುದು ಈ ಉಲ್ಲಾಸದಲ್ಲೆಲ್ಲ ಸ್ಪಷ್ಟ.

[24] ಪ್ರಾಣವನ್ನು ಎಂದರೆ ವ್ಯವಹಾರಯೋಗ್ಯತೆಯನ್ನು ಕೊಡಲು ಅಥವಾ ಕಲ್ಪಿಸಲು ಸಮರ್ಥವಾದುದು (ಜಗನ್ನಾಥನ ರಸಗಂಗಾಧರ, ಪು ೧೪೩).

[25] ವಾಕ್ಯ ಮತ್ತು ಪದಗಳ ತತ್ವವನ್ನು ನಿರೂಪಿಸುವ ಪ್ರೌಢ ವ್ಯಾಕರಣಗ್ರಂಥ. ಇದನ್ನು ಬರೆದವನು ಪ್ರಖ್ಯಾತನಾದ ಭರ್ತೃಹರಿ. ಚೀಣಾದೇಶದ ಯಾತ್ರಿಕನಾದ ಇತ್ಸಿಂಗನು ವಾಕ್ಯಪದೀಯಕಾರನಾದ ಭರ್ತೃಹರಿ ಕ್ರಿ.ಶ. ೬೫೦ ರಲ್ಲಿ ದಿವಂಗತನಾದನೆಂದು ಉಲ್ಲೇಖಿಸಿದ್ದಾನೆ. ಶ್ಲೋಕರೂಪವಾದ ಈ ಗ್ರಂಥದಲ್ಲಿ ಬ್ರಹ್ಮ ಅಥವಾ ಆಗಮಕಾಂಡ, ವಾಕ್ಯಕಾಂಡ ಮತ್ತು ಪದ ಅಥವಾ ಪ್ರಕೀರ್ಣಕಾಂಡಗಳೆಂಬ ಮೂರು ಭಾಗಗಳಿವೆ.

[26] ಸ್ವರೂಪ ಎಂದರೆ ಆಕೃತಿ, ಬಣ್ಣ ಮುಂತಾದ ಬಾಹ್ಯಾಂಶಗಳಾಗಬಹುದು ಅಥವಾ ಜಾತಿ ವಿರಹಿತವಾದ ಗೋವ್ಯಕ್ತಿಯಾಗಬಹುದು.

ಅಲ್ಲ, ಆಕಳಲ್ಲದ್ದೂ ಅಲ್ಲ; ಆಕಳುಗಳಿಗೆಲ್ಲ ಅನ್ವಯಿಸುವ ಜಾತಿಯ (ಗೋತ್ವದ ಸಂಬಂಧದಿಂದ ಮಾತ್ರ ಆಕಳೆನಿಸುತ್ತದೆ.” ಎರಡನೆಯದು ಗುಣ. (ಜಾತಿಯಿಂದ) ವಸ್ತು ಅಸ್ತಿತ್ವಕ್ಕೆ ಬಂದಮೇಲೆ 'ಬಿಳಿಯ' ಮುಂತಾದ ಗುಣಗಳು ಅದನ್ನು ವಿಶೇಷಿಸುತ್ತವೆ. 'ಮುಂದೆ ಸಿದ್ಧವಾಗತಕ್ಕ' ವಸ್ತುಧರ್ಮವೆಂದರೆ ಕ್ರಿಯೆ. 'ಮೊದಲು,' 'ಕಡೆ' ಎಂಬ ಎರಡು ಅವಯವಗಳ ಅಂತರದಲ್ಲಿ ನಡೆಯುವ ಕೆಲಸವನ್ನೆಲ್ಲ ಇದು ಗರ್ಭೀಕರಿಸುತ್ತದೆ.[27] 'ಡಿತ್ಥ' ಮುಂತಾದ ಶಬ್ದ(=*proper name*)ಗಳ ಸ್ವರೂಪವು ಅಂತ್ಯಾಕ್ಷರದ ಉಚ್ಚಾರಣೆಯ ಸಂಸ್ಕಾರ ಬಂದಮೇಲೆ ಮಾತ್ರ ವೇದ್ಯ; ಒಂದೊಂದು ಅಕ್ಷರವನ್ನೂ ಉಚ್ಚರಿಸುವಾಗ ಕ್ರಮ ಕ್ರಮವಾಗಿ ತಿಳಿಯುವುದಿಲ್ಲ.[28] ಅದನ್ನು ಹೇಳುವವನು ತನ್ನ ಮನಬಂದಂತೆ ಬೇಕಾದ ವಸ್ತುವಿಗೆ ಆರೋಪಿಸಬಹುದಾದ್ದರಿಂದ ಯಾವ ವಸ್ತುವಿಗೆ ಅದನ್ನಾರೋಪಿಸುತ್ತಾನೋ ಅದಕ್ಕದು ಹೆಸರಾಗುತ್ತದೆ. (ಆಕಳಿಗೆ 'ಡಿತ್ಥ' ಎಂದಾಗ ಆಕಳೇ ಡಿತ್ಥವಾಗುತ್ತದೆ).[29] ಆದ್ದರಿಂದಲೇ 'ಓಡಾಡುತ್ತಿರುವ ಡಿತ್ಥನೆಂಬ ಬಿಳಿಯ ಆಕಳು' ಎಂಬಲ್ಲಿ ಶಬ್ದಗಳ ಪ್ರವೃತ್ತಿ ನಾಲ್ಕು ವಿಧ” ಎಂದು **ಮಹಾಭಾಷ್ಯಕಾರನು**[30] ಹೇಳಿರುವನು.

'ಪರಮಾಣು' ಮೊದಲಾದುವಕ್ಕೆ ಗುಣವೆಂಬ ವ್ಯವಹಾರವು ಶಾಸ್ತ್ರಾಂತರದ ಪರಿಭಾಷೆಯಲ್ಲಿ ಮಾತ್ರವೇ ಸಿದ್ಧ.[31] ಅವರು ಗುಣಗಳೆಂದರೆ ಇಷ್ಟು ಎಂದು ಪಟ್ಟಿ

---

[27] ಅನ್ನ ಮಾಡುವ ಕ್ರಿಯೆಯೆಂದರೆ ತಪ್ಪಲೆಯಲ್ಲಿ ನೀರಿಡುವುದರಿಂದ ಆರಂಭಿಸಿ ಒಲೆಯ ಮೇಲೆ ಇಡುವುದು, ಸೌದೆಯನ್ನುರಿ ಮಾಡುವುದು, ಬೆಂದದ್ದನ್ನು ನೋಡುವುದೇ ಮುಂತಾಗಿ ಕೆಳಗಿಳಿಸುವವರೆಗಿನ ಅನೇಕ ಕೆಲಸಗಳನ್ನೂ ಒಳಗೊಳ್ಳುತ್ತದೆ. ಹೋಲಿಸಿ—ಪೂರ್ವಾಪರೀಭೂತಂ ಭಾವಮಾಖ್ಯಾತೇನ ಆಚಷ್ಟೇ ಉಪಕ್ರಮಪ್ರಭೃತಿ ಅಪವರ್ಗಪರ್ಯಂತಮ್ —ಯಾಸ್ಕನ ನಿರುಕ್ತ.

[28] I. (i. ii). ಇದಕ್ಕೇ 'ಸ್ಫೋಟ'ವೆಂದು ಹೆಸರು. ಶಬ್ದವು ಅಖಂಡಸ್ಫೋಟಕ್ಕೆ ವ್ಯಂಜಕ ಮಾತ್ರ.

[29] ಇದನ್ನೇ ಇಂಗ್ಲಿಷ್ ತರ್ಕಶಾಸ್ತ್ರದಲ್ಲಿ *Proper names have no connotation* ಎಂದು ಸೂತ್ರಪ್ರಾಯವಾಗಿ ಹೇಳುತ್ತಾರೆ.

[30] ಭಗವಾನ್ ಪಂತಜಲಿಗಳೇ ಮಹಾಭಾಷ್ಯಕಾರರು. ಸಂಸ್ಕೃತ ವ್ಯಾಕರಣಕ್ಕೆ ಮೂಲವಾದ ಪಾಣಿನಿಯ ಅಷ್ಟಾಧ್ಯಾಯೀ ಸೂತ್ರಗಳ ವಿಸ್ತೃತ ವಿವರಣೆಯೇ ಮಹಾಭಾಷ್ಯ. ಪತಂಜಲಿಗಳ ಕಾಲ ಕ್ರಿ.ಪೂ. ಎರಡನೆಯ ಶತಮಾನ.

[31] ವೈಶೇಷಿಕರು ಜಗತ್ತಿನಲ್ಲಿ ಒಪ್ಪುವ ಪದಾರ್ಥಗಳು (=*Categories*) ಆರು: ದ್ರವ್ಯ, ಗುಣ, ಕರ್ಮ, ಸಾಮಾನ್ಯ, ವಿಶೇಷ ಮತ್ತು ಸಮವಾಯ ಇವುಗಳಲ್ಲಿ ದ್ರವ್ಯಗಳು ಒಂಭತ್ತು— ಪೃಥಿವೀ, ಅಪ್, ತೇಜಸ್ಸು, ವಾಯು, ಆಕಾಶ, ಕಾಲ, ದಿಕ್, ಆತ್ಮ ಮತ್ತು ಮನಸ್ಸು. ದ್ರವ್ಯಾಶ್ರಿತವಾದ ಗುಣಗಳು 24—ರೂಪ, ರಸ, ಗಂಧ, ಸ್ಪರ್ಶ, ಸಂಖ್ಯೆ, ಪರಿಮಾಣ, ಇತ್ಯಾದಿ. ದ್ರವ್ಯ

ಯನ್ನು ಕೊಡುವಾಗ ಅದನ್ನೂ ಸೇರಿಸಿರುವುದರಿಂದ ಮಾತ್ರ 'ಅಣು' ಎಂಬುದು 'ಗುಣ'ವೆನಿಸುತ್ತದೆ.

ಮುಖವು ಒಂದೇ ಆದರೂ ಕತ್ತಿ, ಕನ್ನಡಿ, ಎಣ್ಣೆ, ಮುಂತಾಗಿ ಬೇರೆಬೇರೆ ಆಲಂಬನಗಳಲ್ಲಿ ಅದು ಪ್ರತಿಫಲಿಸಿದಾಗ ಬೇರೆಬೇರೆಯಾಗಿ ಕಾಣುವಂತೆ ಗುಣ, ಕ್ರಿಯೆ,

---

ಗಳಲ್ಲಿ ಕಾರಣದ್ರವ್ಯ ಮತ್ತು ಕಾರ್ಯದ್ರವ್ಯಗಳೆಂದು ಎರಡು ಬಗೆ. ಪ್ರತಿಯೊಂದು ಕಾರ್ಯದ್ರವ್ಯಕ್ಕೂ ಒಂದು ಕಾರಣದ್ರವ್ಯ ಅವಯವ ಸಂಯೋಗ ಮತ್ತು ಅಗತ್ಯವಾದ ಸಾಮಗ್ರಿಗಳು ಕಾರಣವೆನಿಸುತ್ತವೆ. ಕಾರ್ಯದ್ರವ್ಯದ ರೂಪಾದಿ ಗುಣಗಳಿಗೆ ಕಾರಣದ್ರವ್ಯದ ರೂಪಾದಿಗಳೇ ಕಾರಣ. ಬಟ್ಟೆಯೆಂಬ ಕಾರ್ಯಕ್ಕೆ ದಾರಗಳು ಸಮವಾಯಿಕಾರಣ, ಅವುಗಳ ಸಂಯೋಗ ಅಸಮವಾಯಿಕಾರಣ. ಮಗ್ಗವು ನಿಮಿತ್ತಕಾರಣ. ಬಟ್ಟೆಗಳ ಬಣ್ಣಕ್ಕೆ ದಾರದ ಬಣ್ಣ ಕಾರಣ. ಈ ತತ್ತ್ವದಂತೆ ಸ್ಥೂಲ ಜಗತ್ತಿನ ಸೃಷ್ಟಿಯನ್ನು ವಿವರಿಸುವಾಗ ಕೆಲವೊಂದು ತೊಂದರೆಗಳು ಬರುತ್ತವೆ. ಕಣ್ಣಿಗೆ ಕಾಣುವಂತಹ ಪರಿಮಾಣವನ್ನು ಮಹತ್ ಎನ್ನುತ್ತಾರೆ. ಪರ್ವತದಷ್ಟು ದೊಡ್ಡ ವಸ್ತುವೇ ಇರಲಿ ಅದರ ಸಣ್ಣ ಅವಯವಗಳ ಸಂಯೋಗದಿಂದ ಆಯಿತೆನ್ನುವುದರಿಂದ, ಈ ಅವಯವಗಳನ್ನು ಎಲ್ಲಿಯ ವರೆಗೆ ಸಾಧ್ಯವೋ ಅಲ್ಲಿಯ ವರೆಗೆ ವಿಭಾಗಿಸಿದರೆ, ಬಿಸಿಲುಕೋಲಿನಲ್ಲಿ ಕಾಣುವ ಒಂದು ಸಣ್ಣ ರವೆಯ ವರೆಗೆ ಬರಬಹುದು. ಅದನ್ನು 'ತ್ರುಟಿ' ಅಥವಾ ತ್ರಸರೇಣು ಎನ್ನುತ್ತಾರೆ. ಆದರೆ ಅದೂ ಕಣ್ಣಿಗೆ ಕಾಣುವುದರಿಂದ 'ಮಹತ್' ಎಂಬ ಪರಿಮಾಣವನ್ನೇ ಉಳ್ಳದು. ಇನ್ನು ಈ ತ್ರುಟಿಯ ಕಾರಣಗಳನ್ನು ಹೇಳುವಾಗ ಕಣ್ಣಿಗೆ ಕಾಣದ ಪರಿಮಾಣಗಳನ್ನು ಒಪ್ಪಬೇಕಾಗುತ್ತದೆ. ಅನವಸ್ಥೆಯನ್ನು ತಪ್ಪಿಸಲು ಆರಂಭದ ಕಾರಣ ದ್ರವ್ಯಗಳು ನಿತ್ಯ ಅಥವಾ ಕಾರಣಾಂತರರಹಿತವೆಂದೂ ಒಪ್ಪಬೇಕಾಗುತ್ತದೆ. ಹೀಗೆ ಸೃಷ್ಟಿಯ ಸಕಲ ವಸ್ತುಗಳಿಗೂ ಮೂಲವಾದ ನಿತ್ಯದ್ರವ್ಯಗಳೇ ಪರಮಾಣುಗಳು. ಪೃಥಿವೀ, ಅಪ್, ತೇಜಸ್ಸು, ವಾಯು—ಈ ನಾಲ್ಕು ಭೂತಗಳೂ ನಿತ್ಯಪರಮಾಣು ರೂಪಗಳೆನ್ನುತ್ತಾರೆ. ಇವುಗಳಲ್ಲಿರುವ ಸೂಕ್ಷ್ಮಪರಿಮಾಣಕಾರ್ಯಗಳ ಮಹತ್ವ ಪರಿಮಾಣಕ್ಕೆ ಕಾರಣವಲ್ಲ; ಇವುಗಳ ಸಂಖ್ಯೆಯೇ ಕಾರಣ ಎಂಬ ಹೊಸದೊಂದು ತತ್ತ್ವವನ್ನು ನಿರೂಪಿಸುತ್ತಾರೆ, ಪರಮಾಣುಗಳ ಪರಿಣಾಮಕ್ಕೆ ಪರಮಾಣುತ್ವ ಅಥವಾ ಪಾರಿಮಾಂಡಲ್ಯವೆನ್ನುತ್ತಾರೆ. ಎರಡು ಪರಮಾಣುಗಳ ಸಂಯೋಗದಿಂದಾಗುವ ದ್ವ್ಯಣುಕದ ಪರಿಮಾಣಕ್ಕೆ ಅಣುತ್ವವೆನ್ನುತ್ತಾರೆ. ಅಂತಹ ಮೂರು ದ್ವ್ಯಣುಕಗಳ ಸಂಯೋಗದಿಂದ ಹುಟ್ಟುವ ತ್ರ್ಯಣುಕವೇ ತ್ರುಟಿ ಅಥವಾ ತ್ರಸರೇಣು. ಅದರ ಪರಿಮಾಣ ಮಹತ್ವ. ಪರಮಮಹತ್ವ ಅಥವಾ ವಿಭುತ್ವ ನಿರವಯವವಾದ ಆಕಾಶ ಮತ್ತು ಆತ್ಮಗಳಲ್ಲಿ ಉಂಟು; ಪರಮಾಣುತ್ವ ಅಥವಾ ಪಾರಿಮಾಂಡಲ್ಯವು ಪರಮಾಣುಗಳಲ್ಲಿರುತ್ತದೆ. ಇವೆರಡೂ ಶಾಸ್ತ್ರಕಲ್ಪಿತವೇ ಹೊರತು ಪ್ರತ್ಯಕ್ಷಗೋಚರವಲ್ಲ. ಹೀಗೆ ಸೃಷ್ಟಿಯ ಪ್ರತಿಯೊಂದು ವಸ್ತುವಿಗೂ ಪರಮಾಣು, ದ್ವ್ಯಣುಕ, ತ್ರ್ಯಣುಕ, ಚತುರಣುಕ, ಇತ್ಯಾದಿ ವಿವಿಧಾವಸ್ಥೆಗಳನ್ನೊಪ್ಪಿ ತ್ರಸರೇಣುವಿನಿಂದ ಪರ್ವತದ ವರೆಗಿನ ಎಲ್ಲ ಕಾರ್ಯಗಳನ್ನೂ ಸಕಾರಣವಾಗಿ ವೈಶೇಷಿಕರು ವಿವರಿಸುತ್ತಾರೆ.

ಮೇಲೆ ಹೇಳಿದ ತತ್ತ್ವದಂತೆ ಪರಮಾಣುತ್ವ ಅಥವಾ ಪಾರಿಮಾಂಡಲ್ಯವು ೨೪ ಗುಣಗಳಲ್ಲೊಂದಾದ ಗುಣವಾಗುವುದೇ ಹೊರತು ಜಾತಿಯಾಗುವುದಿಲ್ಲ. ಆದರೆ ಮಮ್ಮಟನು ವಿವರಿಸಿರುವ ವೈಯಾಕರಣರ ಪ್ರಕ್ರಿಯೆಯಲ್ಲಿ ವಸ್ತುವಿನ ಪ್ರಾಣಪ್ರದ ಧರ್ಮವೇ ಜಾತಿಯೆನಿಸುವುದರಿಂದ ಪರಮಾಣುತ್ವ ಜಾತಿಯೆನಿಸುವುದೇ ಹೊರತು ಗುಣವೆನಿಸುವುದಿಲ್ಲ.

ಯದೃಚ್ಛೆಗಳಲ್ಲಿ ವಸ್ತುತಃ ಒಂದೇ ಆಗಿದ್ದರೂ ಆಶ್ರಯಗಳು ಬೇರೆಬೇರೆಯಾದಾಗ ಒಂದೊಂದೂ ಬೇರೆಬೇರೆಯಾಗಿ ತೋರುತ್ತದೆ.[32]

'ಹಿಮ, ಹಾಲು, ಶಂಖ ಮುಂತಾದ ಬೇರೆಬೇರೆ ಆಶ್ರಯಗಳಲ್ಲಿರುವ ಬಿಳುಪು ವಸ್ತುತಃ ಬೇರೆಬೇರೆಯಾದರೂ ನಾವು ಎಲ್ಲವನ್ನೂ ಸಮಾನವಾಗಿ 'ಬಿಳುಪಾದುದು'

---

ವೈಶೇಷಿಕರು ಪರಮಾಣುತ್ವವನ್ನು ಜಾತಿಯೆಂದೊಪ್ಪದಿರಲು ಅವರ ಮತ್ತೊಂದು ಪ್ರಕ್ರಿಯೆಯೇ ಕಾರಣ. ಒಂದೇ ವಸ್ತುವಿನಲ್ಲಿ ಎರಡು ಜಾತಿಗಳನ್ನೊಪ್ಪಬೇಕಾದರೆ ಅವೆರಡಕ್ಕೂ ಪರಜಾತಿ ಮತ್ತು ಅಪರಜಾತಿಯೆನ್ನಲು ಬರುವಂತೆ ವಿಭಾಗವಿರಬೇಕೆಂಬ ನಿಯಮವಿದೆ. ಘಟದಲ್ಲಿ ಘಟತ್ವವೆಂಬ ಜಾತಿಯಿರುವಂತೆ ಪೃಥಿವೀತ್ವವೆಂಬ ಜಾತಿಯೂ ಉಂಟೆನ್ನಬಹುದು, ಏಕೆಂದರೆ ಘಟತ್ವಜಾತಿ ಅಪರ (*less extensive*) ಮತ್ತು ಪೃಥಿವೀತ್ವ ಜಾತಿ ಪರ (more extensive) ಎರಡು ಜಾತಿಗಳೂ ಹೀಗೆ ಪರಸ್ಪರ ಭಿನ್ನವಾಗಿಲ್ಲದೆ ಅಭೇದ, ತುಲ್ಯತ್ವ, ಸಾಂಕರ್ಯ, ಅನಿಯಮ, ರೂಪಹಾನಿ, ಅಸಂಬಂಧಗಳಿಗೆ ಎಡೆಯೀಯುತ್ತಿದ್ದರೆ ಆಗ ಜಾತಿಕಲ್ಪನೆಯು ತಪ್ಪಾಗುತ್ತದೆ. ಹೋಲಿಸಿ—

ವ್ಯಕ್ತೇರಭೇದಸ್ತುಲ್ಯತ್ವಂ ಸಂಕರೋಽಥಾನವಸ್ಥಿತಿಃ |
ರೂಪಹಾನಿರಸಂಬಂಧೋ ಜಾತಿಬಾಧಕಸಂಗ್ರಹಃ ||
(ಸಾಹಿತ್ಯಚೂಡಾಮಣಿಯಲ್ಲಿ ಉದಾಹೃತ)

ಪ್ರಕೃತದಲ್ಲಿ, ಪರಮಾಣುವಿನ ಪೃಥಿವೀತ್ವವೆಂಬ ಜಾತಿಗೂ ಪರಮಾಣುತ್ವವೆಂಬ ಜಾತಿಗೂ ಸಾಂಕರ್ಯ ಸ್ಪಷ್ಟ; ಪರಾಪರಭೇದವಿಲ್ಲ. ಆದ್ದರಿಂದ ವೈಶೇಷಿಕರು ಪರಮಾಣುತ್ವವನ್ನು ಜಾತಿಯೆನ್ನಲು ಬರುವುದಿಲ್ಲ. ವೈಯಾಕರಣರು ಮೇಲೆ ಹೇಳಿದ ತಾರ್ಕಿಕರ ಜಾತಿಬಾಧಕಗಳನ್ನೊಪ್ಪದಿರುವುದರಿಂದ ಅವರಿಗೆ ಜಾತಿಯೆನ್ನಲು ಬರುತ್ತದೆ (ಮಾಣಿಕ್ಯಚಂದ್ರನ ಸಂಕೇತ).

ಕಾವ್ಯರಹಸ್ಯ ವಿವರಣೆಗೆ ಈ ಸೂಕ್ಷ್ಮ ತರ್ಕದೃಷ್ಟಿ ಅನಗತ್ಯವಾದರೂ ಮಮ್ಮಟನು ಈ ಉಲ್ಲಾಸದ ಉದ್ದಕ್ಕೂ ತನ್ನ ಸರ್ವತಂತ್ರ ಸ್ವಾತಂತ್ರ್ಯ ಹಾಗು ನಿಷ್ಕೃಷ್ಟ ಶಾಸ್ತ್ರಪಾಂಡಿತ್ಯಗಳನ್ನು ಪ್ರದರ್ಶಿಸುತ್ತಾನೆ.

[32] ವ್ಯಕ್ತಿಗಳಲ್ಲಿ ಸಂಕೇತವನ್ನೊಪ್ಪಿದರೆ ಆನಂತ್ಯ, ವ್ಯಭಿಚಾರ ಮುಂತಾದ ದೋಷಗಳು ಬರುವುವೆಂದು ಹೇಳಲಾಯಿತು. ಅವೇ ದೋಷಗಳೇ ಗುಣ, ಕ್ರಿಯೆ, ಯದೃಚ್ಛಾಸಂಜ್ಞೆಗಳಲ್ಲಿ ಸಂಕೇತವನ್ನೊಪ್ಪಿದರೂ ಬರುವುವೆಂಬ ಆಶಂಕೆಗೆ ಇಲ್ಲಿ ಉತ್ತರವಿದೆ. ಒಂದೊಂದು ವಸ್ತುವಿನಲ್ಲಿರುವ ಗುಣವೂ ಬೇರೆಬೇರೆಯೇ ಎಂಬುದು ಆಶಂಕೆಗೆ ಮೂಲ. ಹಾಲಿನ ಬಿಳುಪೂ ಹಿಮದ ಬಿಳುಪೂ ಸಮಾನವೇ ಹೊರತು ಒಂದೇ ಅಲ್ಲ ಎಂಬ ಈ ವಾದವನ್ನೇ ಮಮ್ಮಟನು ನಿರಾಕರಿಸಿದ್ದಾನೆ. ದೃಷ್ಟಾಂತದ ಮೂಲಕ ವಸ್ತುಗಳು ಭಿನ್ನವಾದರೂ ಅವುಗಳ ಗುಣ, ಕ್ರಿಯೆ, ಜಾತಿಗಳು ಅಭಿನ್ನವೆಂಬುದೇ ವೈಯಾಕರಣರ ಮತ. ಹೋಲಿಸಿ—'ಕರ್ಮೈಕಂ ಜಾತಿರಪ್ಯೇಕಾ ಜಗತ್ಯೇಕಃ ಸ್ಥಿತೋ ಗುಣಃ' (ಸಂಕೇತ). ಈ ವೈಯಾಕರಣರ ಸಿದ್ಧಾಂತಕ್ಕೆ ಪತಂಜಲಿ, ಭರ್ತೃಹರಿಗಳ ವಾಕ್ಯಗಳೇ ಆಧಾರ. ಮಮ್ಮಟನು ಇಲ್ಲಿ ಅದನ್ನೇ ಅನುಸರಿಸುತ್ತಿರುವುದು ಸ್ಪಷ್ಟ.

ಎಂದೇ ವ್ಯವಹರಿಸುತ್ತೇವೆ; ಅರ್ಥಪ್ರತೀತಿಯನ್ನೂ ಪಡೆಯುತ್ತೇವೆ. ಇದಕ್ಕೆ ಕಾರಣವೇನೆಂದರೆ ಆ ವಸ್ತುಗಳಲ್ಲೆಲ್ಲ ಬಿಳುಪು (=ಶುಕ್ಲತ್ವ) ಎಂಬ ಒಂದೇ ಜಾತಿಯಿದೆ. ಹಾಗೆಯೇ ಬೆಲ್ಲವನ್ನು ಪಾಕಮಾಡುತ್ತಿರಲಿ, ಅನ್ನವನ್ನು ಬೇಯಿಸುತ್ತಿರಲಿ ಎಲ್ಲ ಅಡಿಗೆಯ ಕೆಲಸವನ್ನೂ 'ಪಾಕ'ವೆಂದು ನಾವು ಕರೆಯುವುದಕ್ಕೆ 'ಪಾಕತ್ವ'ವೆಂಬ ಜಾತಿ ಎಲ್ಲಕ್ಕೂ ಅನ್ವಯಿಸುವುದೇ ಕಾರಣ. 'ಡಿತ್ಥ' ಎಂಬ ಒಂದೇ ಹೆಸರನ್ನು ಮಗು, ಮುದುಕ, ಗಿಳಿ ಮುಂತಾದವರು ಉಚ್ಚರಿಸಿದಾಗ ಶಬ್ದದಲ್ಲಿಯೇ ಭೇದ ಕಾಣುವುದು; ಆ ಹೆಸರುಳ್ಳ ವಸ್ತು ಕೂಡ ಪ್ರತಿ ಕ್ಷಣವೂ ಬೇರೆಬೇರೆಯಾಗಿರಬಹುದು. ಹೀಗಿದ್ದರೂ ಸಮಾನವಾಗಿ 'ಡಿತ್ಥ' ಎಂಬ ಹೆಸರನ್ನು ನಾವು ಬಳಸುತ್ತಿರುವುದಕ್ಕೆ ಸಹ 'ಡಿತ್ಥತ್ವ'ವೆಂಬ ಜಾತಿ ಎಲ್ಲೆಡೆಯಲ್ಲಿಯೂ ಸಿದ್ಧವಾಗಿರುವುದೇ ಕಾರಣ. ಆದುದರಿಂದ ಶಬ್ದಗಳಿಗೆಲ್ಲ ಜಾತಿಯೊಂದೇ ನಿಯಾಮಕವೆಂದು ಬೇರೆಯವರು ಅಭಿಪ್ರಾಯಪಡುತ್ತಾರೆ.[33]

ಮತ್ತೆ ಕೆಲವರು ಜಾತಿವಿಶಿಷ್ಟವಾದ ವ್ಯಕ್ತಿಯನ್ನೇ ಶಬ್ದದ ಅರ್ಥವೆಂದೂ[34] ಬೇರೆಯವರು 'ಅಪೋಹ' ಅಥವಾ ಅನ್ಯವ್ಯಾವೃತ್ತಿಯೇ ಶಬ್ದದ ಅರ್ಥವೆಂದೂ ಹೇಳಿದ್ದಾರೆ.[35] ಆದರೆ ಗ್ರಂಥವು ಅತಿ ದೊಡ್ಡದಾಗುವುದೆಂಬ ಭೀತಿಯಿಂದಲೂ ಪ್ರಕೃತಕ್ಕೆ ಉಪಯೋಗವಲ್ಲದುದರಿಂದಲೂ ಅದನ್ನು ಇಲ್ಲಿ ವಿವರಿಸಿಲ್ಲ.

---

33 ಇದು ಮೀಮಾಂಸಕರ ಸಿದ್ಧಾಂತ. ಇವರು ಮೇಲೆ ಹೇಳಿದ ವೈಯಾಕರಣರ ಮತವನ್ನೊಪ್ಪುವುದಿಲ್ಲ. ಗುಣಕ್ರಿಯಾಯದೃಚ್ಛಿಗಳಿಗೆ ವಸ್ತುತಃ ಭೇದವೇ ಇಲ್ಲ; ಆಲಂಬನದ ಭೇದದಿಂದ ಮಾತ್ರ ಭೇದವಿದ್ದಂತೆ ತೋರುತ್ತದೆ ಎಂದು ವೈಯಾಕರಣಿಗಳು ಹೇಳಿದರೆ, ಮೀಮಾಂಸಕರು ಇವಕ್ಕೆಲ್ಲ ವಸ್ತುತಃ ಭೇದವೇ ಉಂಟು; ಹಾಗೆ ಭೇದವಿರುವುದರಿಂದ ಅವು ಸಂಕೇತಕ್ಕೆ ತಕ್ಕವೇ ಅಲ್ಲ; ಆದ್ದರಿಂದ ಗುಣ ಮುಂತಾದುವುಗಳಲ್ಲೂ ಜಾತಿಯನ್ನು ಕಲ್ಪಿಸಿ, ಆ ಜಾತಿಯಲ್ಲಿ ಮಾತ್ರ ಸಂಕೇತವನ್ನು ಸಾಧಿಸಬಹುದು ಎನ್ನುತ್ತಾರೆ.

34 ಇದು ಪ್ರಾಚೀನ ನೈಯಾಯಿಕರ ಸಿದ್ಧಾಂತ. ಹೋಲಿಸಿ—'ವ್ಯಕ್ತ್ಯಾಕೃತಿಜಾತಯಸ್ತು ಪದಾರ್ಥಃ'—ನ್ಯಾಯಸೂತ್ರ.

35 ಇದು ಬೌದ್ಧರ ಪ್ರಕ್ರಿಯೆ. ಸರ್ವವನ್ನೂ ಕ್ಷಣಿಕವೆನ್ನುವ ಅವರು ಜಾತಿಯನ್ನೇ ಉಂಟೆನ್ನುವಂತಿಲ್ಲ; ಏಕೆಂದರೆ ಜಾತಿಯ ಪರಾಮರ್ಶಕ್ಕೆ ಎರಡು ಕ್ಷಣಗಳಾದರೂ ಅನೇಕ ವಸ್ತುಗಳು ಇರಬೇಕಾಗುತ್ತದೆ; ಮತ್ತು ಜಾತಿಗೆ ಸ್ವತಂತ್ರವಾದ ನಿತ್ಯತೆ ಬೇಕಾಗುತ್ತದೆ; ಅಂತೆಯೇ ಅವರು ಗುಣಾದಿಗಳೂ ಕ್ಷಣಿಕವಾದುದರಿಂದ ಎಲ್ಲಿಯೂ ಸಂಕೇತವುಂಟೆನ್ನಲು ಬರುವುದಿಲ್ಲ. ಆದಕಾರಣ ಅವರು 'ಅನ್ಯಾಪೋಹ'ವನ್ನು ಪದದ ಅರ್ಥವೆನ್ನುತ್ತಾರೆ. ಆಕಳಲ್ಲದ್ದು ಅಲ್ಲ ಎಂಬುದೇ 'ಆಕಳು' ಎಂಬ ಶಬ್ದದ ಅರ್ಥ, ಈ ವಾದದಲ್ಲಿ. ಈ ವಾದದ ಪೂರ್ಣ ವಿವರಣೆಗೆ ನನ್ನ **ಕನ್ನಡ ಕಾವ್ಯಾಲಂಕಾರ**, V. ೧೬-೨೦ ಟಿಪ್ಪಣಿಗಳನ್ನೋದಿ.

ಸ ಮುಖ್ಯೋಽರ್ಥಸ್ತತ್ರ ಮುಖ್ಯೋ ವ್ಯಾಪಾರೋಽಸ್ಯಾಭಿಧೋಚ್ಯತೇ ‖ ೩ ‖

ಅದು ಮುಖ್ಯಾರ್ಥ. ಅಲ್ಲಿ ಕೂಡ ಇದರ ಮುಖ್ಯ[36] ವ್ಯಾಪಾರಕ್ಕೆ 'ಅಭಿಧಾ' ಎಂದು ಹೆಸರು.

'ಅದು' ಎಂದರೆ ನೇರವಾಗಿ ಸಂಕೇತವನ್ನುಳ್ಳ ಅರ್ಥ. 'ಇದರ' ಎಂದರೆ ಶಬ್ದದ ಎಂದು ತಾತ್ಪರ್ಯ.

ಮುಖ್ಯಾರ್ಥಬಾಧೇ ತದ್ಯೋಗೇ ರೂಢಿತೋಽಥ ಪ್ರಯೋಜನಾತ್ ।
ಅನ್ಯೋಽರ್ಥೋ ಲಕ್ಷ್ಯತೇ ಯತ್ ಸಾ ಲಕ್ಷಣಾರೋಪಿತಾ ಕ್ರಿಯಾ ‖ ೪ ‖

ಮುಖ್ಯಾರ್ಥ ಬಾಧಿತವಾಗಿರುವಾಗ ಅದರೊಡನೆ ಯೋಗವೂ ಕಾಣುತ್ತಿದ್ದರೆ, ರೂಢಿಯ ಬಲದಿಂದಾಗಲಿ ಇಲ್ಲವೆ ಪ್ರಯೋಜನದ ಕಾರಣದಿಂದಾಗಲಿ ಬೇರೊಂದರ್ಥವು ಸ್ಫುರಿಸುವುದಕ್ಕೆ ನಿಯಾಮಕವಾದ ಮತ್ತು ಮನುಷ್ಯನಿಂದ ಶಬ್ದಕ್ಕೆ ಆರೋಪಿತವಾದ ಎರಡನೆಯ ಕ್ರಿಯೆ ಅಥವಾ ವ್ಯಾಪಾರವೇ ಲಕ್ಷಣೆ.

'ಕಾರ್ಯದಲ್ಲಿ ಕುಶಲ' ಇತ್ಯಾದಿ ಪ್ರಯೋಗಗಳಲ್ಲಿ 'ಕುಶ(ದರ್ಭೆ)ಗಳನ್ನು ಕೊಯ್ಯುವವನು' ಇತ್ಯಾದಿ ವಾಚ್ಯಾರ್ಥ ಹೊಂದಿಕೊಳ್ಳದೆ ಹೋಗುವುದರಿಂದ ಮತ್ತು 'ಗಂಗೆಯಲ್ಲಿ ಗೊಲ್ಲರ ಹಳ್ಳಿ' ಇತ್ಯಾದಿ ವಾಕ್ಯಗಳಲ್ಲಿ ಗಂಗಾಪ್ರವಾಹ ಹಳ್ಳಿಗೆ ಆಲಂಬನವಾಗುವುದು ಅಸಾಧ್ಯವಾದುದರಿಂದ ಮುಖ್ಯಾರ್ಥಕ್ಕೆ ಮೊದಲು ಬಾಧೆ ಬರುತ್ತದೆ. (ಆ ಬಾಧೆಯನ್ನು ಪರಿಹರಿಸುವುದಕ್ಕಾಗಿ) ಮುಖ್ಯಾರ್ಥದೊಡನೆ ಯೋಗ ಅಥವಾ ಸಂಬಂಧವಿರುವಂತೆ ಜನರ ಮಾತಿನ ರೂಢಿಯನ್ನನುಸರಿಸಿ 'ಕುಶಲ' ಎಂದರೆ 'ವಿವೇಚನಾಶಕ್ತಿಯುಳ್ಳವನು' ಎಂದು ಅರ್ಥಮಾಡುತ್ತೇವೆ. ಹಾಗೆಯೇ 'ಗಂಗಾತೀರದ ಹಳ್ಳಿ' ಎಂದಾಗ ಬಾರದ ಶೀತತ್ವ ಪಾವನತ್ವ ಮುಂತಾದ ಧರ್ಮಾತಿಶಯಗಳು ಚೆನ್ನಾಗಿ ಪ್ರಕಟವಾಗಲೆಂಬ ಪ್ರಯೋಜನವನ್ನು ದೃಷ್ಟಿಯಲ್ಲಿಟ್ಟು 'ಗಂಗೆಯಲ್ಲಿ ಎಂಬ ಮುಖ್ಯಾರ್ಥದ ಬದಲು 'ಗಂಗಾತೀರದಲ್ಲಿ' ಎಂಬ ಅಮುಖ್ಯಾರ್ಥವನ್ನು ಸ್ವೀಕರಿಸುತ್ತೇವೆ. ಹೀಗೆ ಮುಖ್ಯಾರ್ಥದಿಂದ ಸೂಚ್ಯವಾದ ಅಮುಖ್ಯಾರ್ಥವೇ ಲಕ್ಷ್ಯಾರ್ಥ. ಇಂತಹ ಸೂಚನೆಯಲ್ಲಿ ನಿಯಾಮಕವಾದ ಶಬ್ದವ್ಯಾಪಾರವು (ನೇರವಾದುದಲ್ಲ) ಆರೋಪಿತವಾದುದು; ವಸ್ತುತಃ ಅದು ನಡುವಣ ವಾಚ್ಯಾರ್ಥದಲ್ಲಿಯೇ ಇರತಕ್ಕುದು (ಸಾಕ್ಷಾತ್ ಶಬ್ದದಲ್ಲಲ್ಲ). ಅದೇ ಲಕ್ಷಣೆ.

---

[36] 'ಮುಖ್ಯ' ವೆಂದರೆ ಇಲ್ಲಿ ಪ್ರಥಮ ಎಂದರ್ಥವೇ ಹೊರತು ಪ್ರಧಾನವೆಂದಲ್ಲ (ಸಾಹಿತ್ಯ ಚೂಡಾಮಣಿ).

ಸ್ವಸಿದ್ಧಯೇ ಪರಾಕ್ಷೇಪಃ ಪರಾರ್ಥಂ ಸ್ವಸಮರ್ಪಣಮ್ ।
ಉಪಾದಾನಂ ಲಕ್ಷಣಂ ಚೇತ್ಯುಕ್ತಾ ಶುದ್ಧೈವ ಸಾ ದ್ವಿಧಾ ॥ ೫ ॥

ತನ್ನ ಸಿದ್ಧಿಗಾಗಿ (ತನಗೆ ಸಂಬಂಧಿಸಿದ) ಮತ್ತೊಂದರ್ಥವನ್ನು ಸಾಮರ್ಥ್ಯ ಬಲದಿಂದ ಸೂಚಿಸುವುದು 'ಉಪಾದಾನ ಲಕ್ಷಣೆ'; ಮತ್ತೊಂದು ಅರ್ಥದ ಸಲುವಾಗಿ ತನ್ನನ್ನೇ ತ್ಯಾಗಮಾಡಿಕೊಳ್ಳುವುದು 'ಲಕ್ಷಣ ಲಕ್ಷಣೆ.' ಹೀಗೆ ಶುದ್ಧ ಲಕ್ಷಣೆ ಎರಡು ಬಗೆಯೆನ್ನುತ್ತಾರೆ.

"ಈಟಿಗಳು ಪ್ರವೇಶಿಸುತ್ತವೆ", "ಕೋಲುಗಳು ಪ್ರವೇಶಿಸುತ್ತವೆ" ಮುಂತಾದ ವಾಕ್ಯಗಳಲ್ಲಿ ಈಟಿ, ಕೋಲು ಇತ್ಯಾದಿಗಳು (ತಾವೇ ಪ್ರವೇಶಿಸುವುದಶಕ್ಯವಾದ ಕಾರಣ) ತಮ್ಮ ಪ್ರವೇಶದ ಸಿದ್ಧಿಗಾಗಿ ತಮ್ಮನ್ನು ಹಿಡಿದ ಮನುಷ್ಯರನ್ನು ಸೂಚಿಸುತ್ತವೆ. ಇಲ್ಲಿ ಉಪಾದಾನವಿರುವುದರಿಂದ[37] ಲಕ್ಷಣೆ **'ಉಪಾದಾನ ಲಕ್ಷಣೆ'** ಯೆನಿಸುತ್ತದೆ. "ಹಸುವನ್ನು ಕಟ್ಟಬೇಕು" ಎಂಬ ವೇದವಾಕ್ಯದಲ್ಲಿ 'ಹಸು'ವೆಂದರೆ ಮುಖ್ಯಾರ್ಥ ಹಸುವಿನ ಜಾತಿಯಾದರೂ ಜಾತಿಯನ್ನು ಕಟ್ಟಲು ಬರುವುದಿಲ್ಲವಾದ ಪ್ರಯುಕ್ತ, ಮುಖ್ಯಾರ್ಥವಾದ ಜಾತಿ ವ್ಯಕ್ತಿಯೆಂಬ ಅಮುಖ್ಯಾರ್ಥವನ್ನು ಸೂಚಿಸುತ್ತದೆಂದೂ[38] "ವಿಶೇಷಣ (=ಜಾತಿ) ನಿರೂಪಣೆಯಲ್ಲಿ ಮಾತ್ರ ಶಬ್ದ ನಿರತವಾಗಿರುವುದೆಂದ ಮೇಲೆ, ಅದರ ವಿಶೇಷ ಮುಷ್ಟಿ ಶಕ್ತಿ (=ಅಭಿಧೆ)ಯೆಲ್ಲವೂ ಅಷ್ಟರಲ್ಲೇ

[37] ಉಪಾದಾನವೆಂದರೆ ಕೂಡಿಸಿಕೊಳ್ಳುವಿಕೆ ಅಥವಾ ಸೇರಿಸಿಕೊಳ್ಳುವಿಕೆ. ಲಕ್ಷ್ಯಾರ್ಥದಲ್ಲಿ ಸೇರಿಸಲ್ಪಟ್ಟಿರುವ ಅಂಶ ಯಾವುದೆಂದರೆ ಮುಖ್ಯಾರ್ಥದಲ್ಲಿಲ್ಲದ ಅರ್ಥಾಂತರವಾಗಬಹುದು. ಉದಾಹರಣೆಯಲ್ಲಿ 'ಮನುಷ್ಯರು' ಎಂಬ ಹೊಸ ಅರ್ಥ ಲಕ್ಷ್ಯಾರ್ಥದಲ್ಲಿ ಸೇರಿಕೊಳ್ಳುತ್ತದೆ. ಇದನ್ನೇ ಮುಕುಲಭಟ್ಟನು 'ಕ್ವಚಿತ್ ಖಲು ಅರ್ಥಾಂತರೋಪಾದಾನೇನ ಲಕ್ಷಣಾ ಪ್ರವರ್ತತೇ" (ಅಭಿಧಾವೃತ್ತಿಮಾತೃಕಾ, ಪು. ೬) ಎಂದು ಸ್ಪಷ್ಟವಾಗಿ ಹೇಳಿದ್ದಾನೆ. ಮುಕುಲನ ಗ್ರಂಥವನ್ನೋದಿದ್ದ ಮಮ್ಮಟನೂ ಈ ಅಭಿಪ್ರಾಯದಿಂದಲೇ ಬರೆದಿರುವನೆನ್ನುವುದು ಯುಕ್ತ. ಆದರೆ ವಿಶ್ವನಾಥನೇ ಮುಂತಾದವರು ಬೇರೆ ವಿವರಣೆಯನ್ನು ಕೊಡುತ್ತಾರೆ. ಅವರ ಪ್ರಕಾರ ಮುಖ್ಯಾರ್ಥವೇ ('ಈಟಿ' ಇತ್ಯಾದಿ) ಲಕ್ಷ್ಯಾರ್ಥದಲ್ಲಿಯೂ ಮಾಯವಾಗದೆ ಉಳಿದುಕೊಳ್ಳುತ್ತದೆ; ಆದ್ದರಿಂದ ಉಪಾದಾನ ಲಕ್ಷಣೆಯೆಂಬ ಹೆಸರು ಸಾರ್ಥಕವೆನ್ನುತ್ತಾರೆ.

[38] ಮುಕುಲಭಟ್ಟನು (ಕ್ರಿ. ಶ. ಹತ್ತನೆಯ ಶತಮಾನ) ತನ್ನ 'ಅಭಿಧಾವೃತ್ತಿಮಾತೃಕೆ'ಯಲ್ಲಿ ಹೀಗೆ ಹೇಳಿ ಈ ಉದಾಹರಣೆಯನ್ನು ಕೊಟ್ಟಿದ್ದಾನೆ. ಆ ವಾದವನ್ನು ಇಲ್ಲಿ ಮಮ್ಮಟನು ಖಂಡಿಸುತ್ತಿದ್ದಾನೆ. (ಹೋಲಿಸಿ—. . . ಉಪಾದಾನಮ್. ಯಥಾ ಗೌರನುಬಂಧ್ಯ ಇತಿ. ಅತ್ರ ಹಿ ಗೋತ್ವಸ್ಯ ಯಾಗಂ ಪ್ರತಿ ಸಾಧನತ್ವಂ ವ್ಯಕ್ತ್ಯಾಕ್ಷೇಪಮಂತರೇಣ ನೋಪಪದ್ಯತೇ ಇತಿ ಶಕ್ತಿಸಿದ್ಧ್ಯರ್ಥತಯಾ ವ್ಯಕ್ತೇಃ ಆಕ್ಷೇಪಃ, ಪು ೬-೭). ಆದರೆ ನಾಗೇಶಭಟ್ಟನು ವಾದ ಮಂಡನಮಿಶ್ರರದೆಂದು ತನ್ನ ಉದ್ಯೋತದಲ್ಲಿ ಬರೆದಿದ್ದಾನೆ.

ಮುಗಿದುಬಿಡುವುದರಿಂದ ಮುಂದೆ ವಿಶೇಷ್ಯ (=ವ್ಯಕ್ತಿ)ವನ್ನೂ ಅದೇ ಬೋಧಿಸಲು ಬಾರದು" ಎಂಬ ಸಿದ್ಧಾಂತದಂತೆ[39] ಪ್ರಕೃತದಲ್ಲಿಯೂ ಹಸುವೆಂಬ ವ್ಯಕ್ತಿಯನ್ನು ನೇರವಾಗಿ 'ಹಸು' ಎಂಬ ಶಬ್ದವು ಬೋಧಿಸಲು ಅಸಮರ್ಥವಾಗಿದೆಯೆಂದೂ, ಆದುದರಿಂದ ಇಂತಹ ಪ್ರಯೋಗಗಳೆಲ್ಲವೂ 'ಉಪಾದಾನಲಕ್ಷಣೆ'ಗೆ ಉದಾಹರಣೆಗಳೆಂದೂ ಭಾವಿಸಲಾಗದು. ಏಕೆಂದರೆ ಇಲ್ಲಿ (ಲಕ್ಷಣೆಯನ್ನು ಸಮರ್ಥಿಸುವುದಕ್ಕೆ ಅತ್ಯಗತ್ಯವಾದ) ಪ್ರಯೋಜನವಾವುದೂ ಇಲ್ಲ; ಇದನ್ನು ರೂಢಿಯೆನ್ನುವಂತೆಯೂ ಇಲ್ಲ. ಜಾತಿಯೂ ವ್ಯಕ್ತಿಯೂ ಅವಿನಾಭಾವಿಗಳು (ಒಂದನ್ನು ಬಿಟ್ಟು ಒಂದು ಇರಲಾರದವು). ಆದುದರಿಂದ ಜಾತಿ ವ್ಯಕ್ತಿಯನ್ನು ಸೂಚಿಸುವುದು ಸಹಜವಾಗಿಯೇ ಇದೆ.[40] (ಅದಕ್ಕೆ ಲಕ್ಷಣೆಯೆನ್ನುವ ಪ್ರಸಂಗವೇನೂ ಇಲ್ಲ). ಉದಾಹರಣೆಗೆ "ಮಾಡಲ್ಪಡಲಿ" ಎಂಬ ಕರ್ಮಣಿಪ್ರಯೋಗದಲ್ಲಿ ಕ್ರಿಯಾರ್ಥ (ನೇರವಾಗಿ ಕರ್ಮಕ್ಕೆ ಅನ್ವಯಿಸುತ್ತಿದ್ದರೂ) ಕರ್ತವ್ಯವನ್ನು ಸೂಚಿಸುತ್ತದೆ. "ಮಾಡು" ಎಂಬ ಕರ್ತರಿಪ್ರಯೋಗದಲ್ಲಿ ಕ್ರಿಯೆ (ನೇರವಾಗಿ ಕರ್ತೃವನ್ನು ಕುರಿತರೂ) ಕರ್ಮವನ್ನು ಸೂಚಿಸುತ್ತದೆ.[41] ಅಥವಾ "ಪ್ರವೇಶಿಸು" ಎಂದಿಷ್ಟೇ ಹೇಳಿದಾಗ "ಮನೆಯನ್ನು" ಎಂಬುದೂ "ಉಂಡೆಯನ್ನು" ಎಂದಿಷ್ಟೇ ಹೇಳಿದಾಗ "ತಿನ್ನು" ಎಂಬುದೂ ಪ್ರಸಂಗಬಲದಿಂದಲೇ ಸೂಚಿತವಾಗುತ್ತವೆ.[42] (ಇಲ್ಲೆಲ್ಲೂ ಲಕ್ಷಣೆಯನ್ನು ಹೇಳುವ ಕಾರಣವಿಲ್ಲ).

"ದೇವದತ್ತನು ಪುಷ್ಟ, ಆದರೆ ಹಗಲು ಊಟಮಾಡುವುದಿಲ್ಲ" ಎಂಬಲ್ಲಿ "ರಾತ್ರಿ

---

39 ಇದು ಪ್ರಸಿದ್ಧವಾದ ಮೀಮಾಂಸಕರ ನ್ಯಾಯ. ಇದನ್ನೇ 'ವಿಶೇಷಣ ತಿಳಿದಲ್ಲದೆ ವಿಶೇಷ್ಯ ತಿಳಿಯದು' ('ನಾಗೃಹೀತವಿಶೇಷಣಾ ವಿಶೇಷ್ಯಬುದ್ಧಿಃ') ಎಂದು ಹೇಳುವುದೂ ಉಂಟು. ಇಲ್ಲಿ ವಿಶೇಷ್ಯವೆಂದರೆ ವ್ಯಕ್ತಿ; ಜಾತಿ ವಿಶೇಷಣ. (ಸಂಪ್ರದಾಯ ಪ್ರಕಾಶಿನಿ). ಈ ನ್ಯಾಯವನ್ನೇ ಸಾಹಿತ್ಯದರ್ಪಣದಲ್ಲಿ "ಶಬ್ದಬುದ್ಧಿಕರ್ಮಣಾಂ ವಿರಮ್ಯ ವ್ಯಾಪಾರಾಭಾವಃ" ಎಂಬ ಮಾತುಗಳಲ್ಲಿ ಹೇಳಿದೆ. ಶಬ್ದದ ವ್ಯಾಪಾರ ನಿಂತು ನಿಂತು ಮುಂದುವರಿಯಲಾರದೆಂದು ತಾತ್ಪರ್ಯ.

40 ಇಂತಹ ಸೂಚನೆಗೆ ತರ್ಕದಲ್ಲಿ "ಅನುಮಾನ" ವೆನ್ನುತ್ತಾರೆ; ಮೀಮಾಂಸೆಯಲ್ಲಿ 'ಅರ್ಥಾಪತ್ತಿ'ಯೆಂದರೂ ಎನ್ನಬಹುದು. ಮುಂದೆ ಟಿಪ್ಪಣಿಗಳನ್ನೋದಿ.

41 ಸಾಕಾಂಕ್ಷವಾದ ಒಂದರ್ಥದಿಂದ ಮತ್ತೊಂದು ಅರ್ಥ ಅಧ್ಯಾಹಾರವಾಗುತ್ತದೆಂಬುದು ಪ್ರಾಭಾಕರ ಮೀಮಾಂಸಕರ ಮತ. ಅದನ್ನನುಸರಿಸಿ ಮಮ್ಮಟನು ಈ ಅರ್ಥಾಧ್ಯಾಹಾರದ ಉದಾಹರಣೆಗಳನ್ನು ಕೊಟ್ಟಿದ್ದಾನೆ.

42 ಆದರೆ ಭಾಟ್ಟ ಮೀಮಾಂಸಕರು ನೇರವಾದ ಅರ್ಥದಲ್ಲಿ ಅಧ್ಯಾಹಾರವನ್ನು ಒಪ್ಪದೆ ಶಬ್ದಮಾತ್ರ ಅಧ್ಯಾಹಾರಕ್ಕೆ ಯೋಗ್ಯವೆನ್ನುತ್ತಾರೆ. ಆ ಮತವನ್ನನುಸರಿಸಿ ಮಮ್ಮಟನು ಇಲ್ಲಿ ಈ ಶಬ್ದಾಧ್ಯಾಹಾರದ ಉದಾಹರಣೆಗಳನ್ನೂ ಕೊಟ್ಟಿದ್ದಾನೆ.

ಊಟಮಾಡುತ್ತಾನೆ" ಎಂಬಂಶವು ಕೂಡ ಲಕ್ಷಣೆಯಿಂದ ಬಂದುದಲ್ಲ. ಅದು 'ಶ್ರುತಾರ್ಥಾಪತ್ತಿ'ಗೆ ಇಲ್ಲವೆ 'ಅರ್ಥಾಪತ್ತಿ'ಗೆ ಉದಾಹರಣೆ.[43]

"ಗಂಗೆಯಲ್ಲಿ ಗೊಲ್ಲರ ಹಳ್ಳಿ" ಎಂಬಲ್ಲಿ ಹಳ್ಳಿಗೆ ಆಲಂಬನ ಸಿದ್ಧಿಸುವ ಸಲುವಾಗಿ 'ಗಂಗೆ'ಯೆಂಬ ಶಬ್ದ ತನ್ನ ಮುಖ್ಯಾರ್ಥವನ್ನೂ ಕಳೆದುಕೊಳ್ಳುವುದರಿಂದ ಇಂತಹ ಪ್ರಯೋಗಗಳಲ್ಲಿ 'ಲಕ್ಷಣ' ಅಥವಾ ಸೂಚಕವಾದ ಚಿಹ್ನೆಯಿದೆ.[44] ಆದಕಾರಣ ಇದು **ಲಕ್ಷಣ ಲಕ್ಷಣೆ**ಯೆನಿಸುತ್ತದೆ.

---

[43] ಇದನ್ನು ಕೂಡ ಮುಕುಲಭಟ್ಟನು ಉಪಾದಾನ ಲಕ್ಷಣೆಗೇ ಉದಾಹರಣೆಯೆಂದು ಬರೆದಿದ್ದಾನೆ. ಇಲ್ಲಿ ಅರ್ಥಪೂರ್ಣಕ್ಕಾಗಿ 'ರಾತ್ರಿ ಊಟಮಾಡುತ್ತಾನೆ' ಎಂಬ ಶಬ್ದಾಂತರಗಳ ಅಧ್ಯಾಹಾರವನ್ನು ಅವನೂ ಶ್ರುತಾರ್ಥಾಪತ್ತಿಯೆಂದೇ ಒಪ್ಪಿದರೂ ಉಪಾದಾನ ಲಕ್ಷಣೆಯ ಲಕ್ಷಣಗಳೆಲ್ಲ (ಸ್ವಸಿದ್ಧಿಗೆ ಅನ್ಯಾರ್ಥದ ಆಕ್ಷೇಪ; ಲಕ್ಷ್ಯಾರ್ಥದಲ್ಲಿ ಅದರ ಅಂತರ್ಭಾವ ಇತ್ಯಾದಿ) ಇಲ್ಲಿ ಅನ್ವಯಿಸುವುದರಿಂದ ಲಕ್ಷಣಾವಿಷಯವೆಂದು ಅವನ ಅಭಿಮತ. ಆದರೆ ಅರ್ಥಾಪತ್ತಿಯ ವಿಷಯವೇ ಬೇರೆ; ಲಕ್ಷಣಾ ವಿಷಯವೇ ಬೇರೆ ಎನ್ನುವ ಮಮ್ಮಟನು ಅಲ್ಲಿ ಅರ್ಥಾಪತ್ತಿಯುಂಟೇ ಹೊರತು ಲಕ್ಷಣೆಯಿಲ್ಲವೆನ್ನುತ್ತಾನೆ.

ಅರ್ಥಗಳು ವಿಸಂಗತವೆಂಬಂತೆ ಭಾಸವಾಗುತ್ತಿರುವಾಗ, ಸಮನ್ವಯದ ಸಲುವಾಗಿ ಅಧ್ಯಾಹಾರ ಮಾಡುವುದೇ ಅರ್ಥಾಪತ್ತಿ. ಪ್ರತ್ಯಕ್ಷವಾಗಿ ಪುಷ್ಟನಾದ ದೇವದತ್ತನನ್ನು ನಾವು ನೋಡುತ್ತಿರುವಾಗ, ಅವನು ಹಗಲು ಊಟವಿಲ್ಲದ ಮೇಲೆ ರಾತ್ರಿ ಮಾಡಿಯೇ ಮಾಡುತ್ತಾನೆಂದುಕೊಳ್ಳುವುದು ದೃಷ್ಟಾರ್ಥಾಪತ್ತಿ. ನಾವು ನೋಡದಿದ್ದರೂ ಇತರರಿಂದ ಆ ವಾಕ್ಯವನ್ನು ಕೇಳಿದಾಗ ಶಬ್ದರೂಪವಾದ ಅಧ್ಯಾಹಾರ ಮಾಡಿಕೊಳ್ಳುತ್ತೇವೆ. ಅದು ಶ್ರುತಾರ್ಥಾಪತ್ತಿ. ಪ್ರಾಭಾಕರರು ದೃಷ್ಟಾರ್ಥಾಪತ್ತಿಯನ್ನೊಪ್ಪುತ್ತಾರೆ; ಭಾಟ್ಟರು ಶ್ರುತಾರ್ಥಾಪತ್ತಿಯನ್ನು; ನೈಯಾಯಿಕರು ಅರ್ಥಾಪತ್ತಿಯನ್ನು ಬೇರೆ ಪ್ರಮಾಣವೆನ್ನದೆ ಅದನ್ನು ಅನುಮಾನದಲ್ಲಿಯೇ ತರುತ್ತಾರೆ.

ಮಮ್ಮಟನ ಟೀಕೆಯನ್ನು ವಿಮರ್ಶಿಸುತ್ತಾ ಪ್ರೊ|| ಎ. ಬಿ. ಗಜೇಂದ್ರಗಡಕರ ಅವರು 'ಮುಕುಲನು ಹೇಳಿದ್ದು ನಿರ್ದುಷ್ಟ; ಉದಾಹರಣೆಯಲ್ಲಿ ಲಕ್ಷಣೆಯ ಲಕ್ಷಣಗಳೆಲ್ಲ ಅನ್ವಯಿಸುತ್ತವೆ. ಮಮ್ಮಟನ ಖಂಡನೆ ಸಕಾರಣವಾಗಿಲ್ಲ. ಮೀಮಾಂಸಕರು ಯಾವುದನ್ನು ಅರ್ಥಾಪತ್ತಿಯೆನ್ನುವರೋ ಅದನ್ನು ಆಲಂಕಾರಿಕರು ಲಕ್ಷಣೆಯೆನ್ನುವುದರಲ್ಲಿ ತಪ್ಪೇನು? ಮೀಮಾಂಸಕರಂತೆ ಆಲಂಕಾರಿಕರೇನೂ ಅರ್ಥಾಪತ್ತಿಯನ್ನೇ ಒಂದು ಪ್ರಮಾಣವೆನ್ನುವವರಲ್ಲ' ಎಂದು ಮುಂತಾಗಿ ಬರೆದಿರುವುದು (ಪು. ೨೭೧) ಅವಿಚಾರಿತರಮಣೀಯ. ಏಕೆಂದರೆ ಪದಾರ್ಥ, ವಾಕ್ಯಾರ್ಥ ತತ್ತ್ವಗಳನ್ನು ಪ್ರಥಮತಃ ಪ್ರತಿಪಾದಿಸಿದ ದಾರ್ಶನಿಕರೇ ಮೀಮಾಂಸಕರು. ಅಭಿಧೆ, ಲಕ್ಷಣೆ ಮುಂತಾದ ವಿಭಾಗಗಳನ್ನು ಮಾಡಿದವರೂ ಅವರೇ. ಅವರ ಹಾದಿಯನ್ನು ಅನುಸರಿಸಿ ಆಲಂಕಾರಿಕರು ಹೊರಟಿದ್ದಾರೆಯೇ ಹೊರತು ಇವರದೇ ಆದ ಬೇರೆ ದಾರಿಯೊಂದಿಲ್ಲ. ಕಾವ್ಯಶಾಸ್ತ್ರಗಳೆರಡಕ್ಕೂ ಸಮಾನವಾದ ಶಬ್ದಾರ್ಥ ವಿವೇಚನೆಯಲ್ಲಿ ಆಲಂಕಾರಿಕರಿಗೆ ಮೀಮಾಂಸಕರ ಮತವೂ ಪ್ರಮಾಣವೇ; ಕೇವಲ ಕಾವ್ಯನಿಷ್ಠವಾದ ಅಂಶಗಳಲ್ಲಿ ಮಾತ್ರ ಅವರು ವೈಯಾಕರಣರ ಸ್ಫೋಟವಾದವನ್ನು ಮಾನ್ಯಮಾಡಿ ವ್ಯಂಜನಾವೃತ್ತಿಯನ್ನು ಸ್ಥಾಪಿಸುತ್ತಾರೆ.

[44] ಇಲ್ಲಿ 'ಲಕ್ಷಣ'ವೆಂದರೆ 'ಉಪಲಕ್ಷಣ'ವೆಂದರ್ಥ. ಯಾವುದಾದರೊಂದನ್ನು ಸೂಚಿಸುವ

ಲಕ್ಷಣೆಗೆ ಮೇಲೆ ಹೇಳಿದ ಎರಡು ಬಗೆಗಳೂ ಶುದ್ಧ; 'ಉಪಚಾರ' (ಸಾದೃಶ್ಯಮೂಲವಾದ ಸಮಾರೋಪ)[45] ಅಲ್ಲಿ ಸೇರಿಕೊಂಡಿಲ್ಲವಾದುದರಿಂದ. ಈ ಎರಡು ಬಗೆಗಳಲ್ಲಿಯೂ ಲಕ್ಷ್ಯಾರ್ಥ ಮತ್ತು ಲಕ್ಷಕವಾದ ವಾಚ್ಯಾರ್ಥಗಳಿಗೆ ಪರಸ್ಪರ ಭೇದವನ್ನು ಬಲಪಡಿಸುವಂತಹ ಪ್ರತ್ಯೇಕತೆಯೇನೂ ಇಲ್ಲ.[46] ಗಂಗಾತೀರವನ್ನು (ಗಂಗಾತೀರವೆಂಬ ಶಬ್ದದಿಂದ ನೇರವಾಗಿ ಹೇಳದೆ) ಗಂಗೆಯೆಂಬ ಶಬ್ದದಿಂದ ಹೇಳುವಾಗ, ಆ ಅಭಿನ್ನ ಅರ್ಥಪ್ರತೀತಿ ಬರುವಾಗ ಮಾತ್ರ, ವಿವಕ್ಷಿತವಾದ ಪ್ರಯೋಜನವು ಪ್ರತೀತವಾಗುತ್ತದೆ. ಗಂಗೆಗೂ ಗಂಗಾತೀರಕ್ಕೂ ಸುಮ್ಮನೆ ಸಾಮೀಪ್ಯ ಸಂಬಂಧವಿದೆಯೆಂಬುದಿಷ್ಟೇ ಪ್ರತೀತವಾದರೆ "ಗಂಗಾತೀರದಲ್ಲಿ ಹಳ್ಳಿ" ಯೆಂಬ ಮುಖ್ಯ ಶಬ್ದಪ್ರಯೋಗಕ್ಕೂ "ಗಂಗೆಯಲ್ಲಿ ಹಳ್ಳಿ"ಯೆಂಬ ಲಕ್ಷಣಾಶಬ್ದ ಪ್ರಯೋಗಕ್ಕೂ ವ್ಯತ್ಯಾಸವೇನು?[47]

---

ಹೆಗ್ಗುರುತೇ ಉಪಲಕ್ಷಣ. 'ಕಾಗೆಯಿರುವುದೇ ದೇವದತ್ತನ ಮನೆ' ಎನ್ನುವಾಗ ಕಾಗೆ ಉಪಲಕ್ಷಣ ಅಥವಾ ಹೆಗ್ಗುರುತು.

45 ಮುಕುಲನ ಪ್ರಕಾರ 'ಉಪಚಾರ'ವೆಂದರೆ ಒಂದನ್ನು ಮತ್ತೊಂದೆಂದು ಆರೋಪಿಸುವುದು:—ಉದಾ.—ಆಯುಸ್ಸೇ ಘೃತ. ಈ ಅಭೇದದ ಆರೋಪಕ್ಕೆ ಕಾರ್ಯಕಾರಣಭಾವ ನಿಮಿತ್ತವಾದ್ದರಿಂದ ಇದು ಶುದ್ಧೋಪಚಾರ. ಆದರೆ 'ಮುಖವೇ ಚಂದ್ರ', 'ವಟುವೇ ಬೆಂಕಿ' 'ವಾಹೀಕನೇ ಹಸು' ಇತ್ಯಾದಿಗಳಲ್ಲಿ ಅಭೇದದ ಕಲ್ಪನೆಗೆ ಅವುಗಳಲ್ಲಿರುವ ಸದೃಶಗುಣಗಳೇ ನಿಮಿತ್ತವಾದ್ದರಿಂದ ಇದು ಗೌಣ ಉಪಚಾರ. ಮಮ್ಮಟನು ಇಲ್ಲಿ ಗುಣಮೂಲವಾದ ಉಪಚಾರವನ್ನೇ ಪ್ರಸ್ತಾಪಿಸುತ್ತಿರುವುದು ಸ್ಪಷ್ಟ.

46 ಉಪಾದಾನ ಲಕ್ಷಣೆ ಮತ್ತು ಲಕ್ಷಣ ಲಕ್ಷಣೆಗಳೇ ಪ್ರಸ್ತುತವಾದ ಎರಡು ಬಗೆಗಳು. ಮುಕುಲಭಟ್ಟನು ಈ ಎರಡು ಬಗೆಗಳ ಉದಾಹರಣೆಗಳಲ್ಲೂ ('ಈಟಿಗಳು ಪ್ರವೇಶಿಸುತ್ತವೆ' ಮತ್ತು 'ಗಂಗೆಯಲ್ಲಿ ಹಳ್ಳಿ') ಲಕ್ಷ್ಯ—ಲಕ್ಷಕಗಳಿಗೆ ಭೇದ ಅಥವಾ ಪ್ರತ್ಯೇಕತೆ ("ತಾಟಸ್ಥ್ಯ") ಯೇ ಎದ್ದು ಕಾಣುವುದೆಂದು ಹೇಳಿ ಆದ್ದರಿಂದ ಅವು "ಶುದ್ಧ" ಲಕ್ಷಣೆಯೆಂದು ವಿವರಿಸಿದ್ದನು. ಲಕ್ಷಕವೆಂದರೆ ಶಬ್ದದ ವಾಚ್ಯಾರ್ಥ; ಲಕ್ಷ್ಯವೆಂದರೆ ಲಕ್ಷ್ಯಾರ್ಥ. ಈಟಿಗಳೇ (ಲಕ್ಷಕ) ಬೇರೆ, ಅದನ್ನು ಹಿಡಿದ ಪುರುಷರೇ (ಲಕ್ಷ್ಯ) ಬೇರೆ; ಗಂಗೆಯೇ (ಲಕ್ಷಕ) ಬೇರೆ, ಗಂಗಾತೀರವೇ (ಲಕ್ಷ್ಯ) ಬೇರೆ. ಆದರೆ ಮಮ್ಮಟನು ಹೀಗೆ ಪ್ರತ್ಯೇಕತೆಯುಂಟೆಂಬುದನ್ನು ಖಂಡಿಸಿ ಮುಕುಲನ ಮತವನ್ನು ದೂಷಿಸುತ್ತಾನೆ.

47 ಮುಕುಲನಂತೆ ಲಕ್ಷ್ಯ—ಲಕ್ಷಕಗಳಲ್ಲಿ ಪ್ರತ್ಯೇಕತೆಯುಂಟೆನ್ನುವುದಾದರೆ ಲಕ್ಷಣೆಯನ್ನು ಆಶ್ರಯಿಸಲು ವಿಶಿಷ್ಟ ಪ್ರಯೋಜನವೇ ಇಲ್ಲವಾಗುತ್ತವೆಂಬುದು ಮಮ್ಮಟನ ಮುಖ್ಯ ವಾದ. ಶೀತತ್ವ, ಪಾವನತ್ವ ಮುಂತಾದ ಪ್ರಯೋಜನಾತಿಶಯಗಳು ಸಿದ್ಧಿಸಬೇಕಾದರೆ ಗಂಗಾತೀರವೂ ಗಂಗೆಯೂ ಅಭಿನ್ನವೆನ್ನಬೇಕೇ ಹೊರತು ಪ್ರತ್ಯೇಕವೆಂದಲ್ಲ. ಪ್ರಯೋಜನ ತಪ್ಪಿದ ಮೇಲೆ ಲಕ್ಷಣೆಯ ಪ್ರಯೋಗದ ಅಗತ್ಯವಾದರೂ ಏನೆಂಬ ಪ್ರಶ್ನೆ ಪ್ರಶ್ನೆಯಾಗಿಯೇ ಉಳಿಯುತ್ತದೆ. ಆದ್ದ

ಸಾರೋಪಾನ್ಯಾ ತು ಯತ್ರೋಕ್ತೌ ವಿಷಯೀ ವಿಷಯಸ್ತಥಾ ॥೬*a*॥

ಎಲ್ಲಿ ವಿಷಯಿ ಮತ್ತು ವಿಷಯ ಎರಡನ್ನೂ ಒಟ್ಟಿಗೆ ಹೇಳಿರುವುದೋ ಅದು 'ಸಾರೋಪಾ' ಎಂಬ ಬೇರೆ ಲಕ್ಷಣೆ.

ಸಮಾರೋಪಿತ ವಸ್ತು ಮತ್ತು ಸಮಾರೋಪಕ್ಕೆ ವಿಷಯ[48] ಇವೆರಡರ ಪರಸ್ಪರ ಭೇದಗಳು ಮರೆಯಾಗದಿದ್ದರೂ[49] ಒಂದಕ್ಕೊಂದು ವಿಶೇಷಣವಾಗುವಂತೆ ನಿರ್ದೇಶಿಸಿದರೆ ಅದು 'ಸಾರೋಪಾ' ಎಂಬ ಲಕ್ಷಣೆ.

ವಿಷಯ್ಯಂತಃಕೃತೇಽನ್ಯಸ್ಮಿನ್ ಸಾ ಸ್ಯಾತ್ ಸಾಧ್ಯವಸಾನಿಕಾ ॥೬*b*॥

ವಿಷಯಿಯಿಂದ ಇನ್ನೊಂದು ಮರೆಯಾಗಿದ್ದರೆ ಅದು 'ಸಾಧ್ಯವಸಾನಾ' ಎಂಬ ಲಕ್ಷಣೆ.

ಸಮಾರೋಪದ ವಿಷಯವು ಸಮಾರೋಪಿತ ವಸ್ತುವಿನಿಂದ ಮುಚ್ಚಿಹೋಗಿದ್ದರೆ ಆ ಲಕ್ಷಣೆಯನ್ನು 'ಸಾಧ್ಯವಸಾನಾ' ಎನ್ನಬೇಕು. (ಸಾಧ್ಯವಸಾನಾ=ಅಧ್ಯಾಹಾರಯುಕ್ತ)[50]

ಭೇದಾವಿಮೌ ಚ ಸಾದೃಶ್ಯಾತ್ ಸಂಬಂಧಾಂತರತಸ್ತಥಾ ।
ಗೌಣೌ ಶುದ್ಧೌ ಚ ವಿಜ್ಞೇಯೌ ॥೭*abc*॥

ಈ ಎರಡು ಭೇದಗಳೂ ಕೂಡ ಸಾದೃಶ್ಯಸಂಬಂಧವಿದ್ದಾಗ 'ಗೌಣ'ಗಳೆಂದೂ[51] ಸಾದೃಶ್ಯವಲ್ಲದ ಬೇರೆ ಸಂಬಂಧವಿದ್ದಾಗ 'ಶುದ್ಧ'ಗಳೆಂದೂ ತಿಳಿಯಬೇಕು.

---

ರಿಂದ "ಶುದ್ಧ" ವೆಂಬ ಲಕ್ಷಣಾವಿಭಾಗಕ್ಕೆ ಉಪಚಾರದ ಅಮಿಶ್ರಣವು ಮೂಲವೇ ಹೊರತು ಲಕ್ಷ್ಯ—ಲಕ್ಷಕಗಳ ಪ್ರತ್ಯೇಕತೆಯಲ್ಲವೆಂದು ಮಮ್ಮಟನ ಅಭಿಪ್ರಾಯ.

48 ಸ್ಥೂಲವಾಗಿ ಇವನ್ನು ಉಪಮಾನ ಮತ್ತು ಉಪಮೇಯಗಳೆನ್ನಬಹುದು.

49 ಅರ್ಥದಲ್ಲಿ ಐಕ್ಯವಿದ್ದರೂ ಎರಡು ಪ್ರತ್ಯೇಕ ಶಬ್ದಗಳ ಪ್ರಯೋಗವಿರುವುದರಿಂದ ಪರಸ್ಪರ ಭೇದವು ಮರೆಯಾಗುವುದಿಲ್ಲ.

50 ಇಲ್ಲಿ ಉಪಮಾನವೊಂದೇ ಶಬ್ದತಃ ಉಕ್ತವಾಗುವುದರಿಂದ ಭೇದ ಮರೆಯಾಗಿರುತ್ತದೆ.

51 ಮುಕುಲನು ಈ ಭೇದಗಳನ್ನು (ಸಾರೋಪಾ ಮತ್ತು ಸಾಧ್ಯವಸಾನಾ) "ಗೌಣ" ವೆನ್ನುವ ಕಾರಣವೇ ಬೇರೆ. ಅವನ ಪ್ರಕಾರ ಇವುಗಳಲ್ಲಿ ಲಕ್ಷ್ಯ—ಲಕ್ಷಕಗಳು ಅಭಿನ್ನವಾಗಿರುತ್ತವೆ; ಶುದ್ಧಭೇದಗಳಲ್ಲಿದ್ದಂತೆ ಭಿನ್ನವಾಗಿರುವುದಿಲ್ಲ. "ಮುಖಚಂದ್ರ" ಎಂಬ ಸಮಾಸದಲ್ಲಿ ಮುಖ, ಚಂದ್ರ ಎರಡೂ ಅಭಿನ್ನವೇ ಹೊರತು ಭಿನ್ನವಲ್ಲ. ಆದರೆ ಮಮ್ಮಟನ ಪ್ರಕಾರ ಅವೆರಡರಲ್ಲಿರುವ ಸಾದೃಶ್ಯವೇ "ಗೌಣ"ವೆನ್ನಲು ನಿಯಾಮಕ.

ಈ ಎರಡು ಭೇದಗಳೆಂದರೆ 'ಸಾರೋಪಾ' ಮತ್ತು 'ಸಾಧ್ಯವಸಾನಾ' ಎಂಬವು. ಸಾದೃಶ್ಯಸಂಬಂಧ ಬಂದಾಗ ಇವಕ್ಕೆ ಕ್ರಮವಾಗಿ ಉದಾಹರಣೆ:— 'ವಾಹೀಕನು[52] ಹಸು' ಮತ್ತು "ಇಗೋ ಹಸು!". (ಈ ವಾಕ್ಯಗಳ ವಿವರಣೆಯಲ್ಲಿ ಮತಭೇದವುಂಟು :—)

೧. 'ಹಸು' ಎಂಬ ಶಬ್ದ, ಲಕ್ಷಣೆಯಿಂದ ತನ್ನ ಮುಖ್ಯಾರ್ಥದಲ್ಲಿರುವ ಜಾಡ್ಯ, ಮಾಂದ್ಯ ಮೊದಲಾದ ಗುಣಗಳನ್ನು ಮೊದಲು ಸೂಚಿಸಿ, ತನ್ಮೂಲಕ (ಅದೇ ಗುಣಗಳುಳ್ಳ) ವಾಹೀಕ (=ಒಂದು ದೇಶದ ಮನುಷ್ಯ)ನೆಂಬ ಅರ್ಥಾಂತರವನ್ನು ನೇರವಾಗಿ ಬೋಧಿಸಲು ಸಮರ್ಥವಾಗುವುದೆಂದು ಕೆಲವರ ಅಭಿಪ್ರಾಯ.

೨. ತನ್ನ ಮುಖ್ಯಾರ್ಥದಲ್ಲಿರುವ ಗುಣಗಳಿಂದ ಅಭಿನ್ನವಾದ ಪುರುಷಗತಗುಣಗಳು ಮಾತ್ರ ಲಕ್ಷಿತವಾಗುತ್ತವೆ; ಪುರುಷನೆಂಬ ಅರ್ಥವನ್ನು ಅವು ನೇರವಾಗಿ ಬೋಧಿಸಲಾರವು ಎಂಬುದು ಮತ್ತೆ ಕೆಲವರ ಮತ.

೩. ಎರಡಕ್ಕೂ ಸಮಾನವಾದ ಗುಣಗಳನ್ನು ಆಶ್ರಯಿಸಿ (ಪುರುಷನೆಂಬ) ಎರಡನೆಯ ಅರ್ಥವೇ ಲಕ್ಷಿತವಾಗುತ್ತದೆ ಎಂಬುದು ಮೂರನೆ ಅಭಿಪ್ರಾಯ.[53] ಇದನ್ನು ಪುಷ್ಟೀಕರಿಸಲು ಬೇರೆ ಪ್ರಮಾಣವೂ ಉಂಟು—

---

[52] ವಾಹೀಕ=ಬಾಹ್ಲೀಕ, ಪಂಜಾಬಿನ ಒಂದು ಪ್ರಾಂತದ ಹೆಸರು. ಇಲ್ಲಿಯ ಜನರು ಕ್ರೂರಿಗಳು ಮತ್ತು ಬುದ್ಧಿಹೀನರೆಂದು ಪ್ರಸಿದ್ಧರಾಗಿದ್ದರು. 'ವಾಹೀಕ'ನೆಂದರೆ ನೇಗಿಲನ್ನು ಹೊರುವವನು, ಕೂಲಿ, ಮುಂತಾದ ಅರ್ಥಗಳನ್ನೂ ಮಾಡಿದ್ದಾರೆ.

[53] ಈ ಮೂರು ಅಭಿಪ್ರಾಯಗಳ ಮರ್ಮ ತಿಳಿಯದೆ ಗಜೇಂದ್ರಗಡಕರ, ಸುಕಠಣಕರ ಮುಂತಾದ ಆಧುನಿಕ ವಿದ್ವಾಂಸರು ತಮ್ಮ ಟಿಪ್ಪಣಿಗಳಲ್ಲಿ ಬಹಳ ಒದ್ದಾಡಿದ್ದಾರೆ. ಈ ಮತಭೇದಗಳಿಗೆ ಮೂಲವೇನೆಂದು ತಿಳಿಯಬೇಕಾದರೆ ಭಟ್ಟಗೋಪಾಲನ ಸಾಹಿತ್ಯಚೂಡಾಮಣಿಯನ್ನೋದಬೇಕು. ಅಲ್ಲಿ ಉದ್ಭಟ, ಅಭಿನವಗುಪ್ತ, ಮಹಿಮಭಟ್ಟ, ಇವರ ವಾಕ್ಯಗಳನ್ನು ಪೂರ್ಣವಾಗಿ ಅನುವಾದ ಮಾಡಿ ಇವುಗಳ ಔಚಿತ್ಯವನ್ನು ನಿರೂಪಿಸಲಾಗಿದೆ. ಇಲ್ಲಿ ಮಮ್ಮಟನು ಉದ್ಭಟನ ಅಭಿಪ್ರಾಯವನ್ನೇ ಬರೆಯುತ್ತಿರುವುದು ನಿರ್ವಿವಾದ. ಉದ್ಭಟನು ಹೇಳುವ ಮಾತುಗಳಿವು :— "ಕೇಚಿತ್ ಶಬ್ದಾರೋಪಪೂರ್ವಂ ಅರ್ಥಾರೋಪಂ ಬ್ರುವತೇ. ಅಪರೇ ವಿಪರ್ಯಯಮ್. ಅನ್ಯೇ ಯೌಗಪದ್ಯಮ್. ಏಷ ಏವ ಯುಕ್ತಃ ಪಕ್ಷಃ"—(ಕೆಲವರು ಶಬ್ದಾರೋಪದ ಅನಂತರವೇ ಅರ್ಥಾರೋಪವೆನ್ನುತ್ತಾರೆ; ಕೆಲವರು ಅರ್ಥಾರೋಪದ ಅನಂತರ ಶಬ್ದಾರೋಪವೆನ್ನುತ್ತಾರೆ; ಇತರರು ಎರಡು ಆರೋಪಗಳೂ ಏಕಕಾಲದಲ್ಲಿಯೇ ಉಂಟೆನ್ನುತ್ತಾರೆ. ಇದೇ ಯೋಗ್ಯವಾದ ಪಕ್ಷ). ಇದನ್ನು ಮೊದಲು ಉದಾಹರಿಸಿ ವಿವರಿಸಿದವರು ಅಭಿನವಗುಪ್ತರು. (ಲೋಚನದಲ್ಲಿ) ಅವರ ವಿವರಣೆ ಹೀಗಿದೆ:—"ಲಕ್ಷಣೆ ಗೌಣಿಯನ್ನೂ ಒಳಗೊಳ್ಳುತ್ತದೆ. ಕೇವಲ ಶಬ್ದವು ಅರ್ಥಾಂತರವನ್ನು ಲಕ್ಷಿಸಿ ಅದರೊಡನೆಯೇ ಸಾಮಾನಾಧಿಕರಣ್ಯ (=ವಿಶೇಷಣ-ವಿಶೇಷ್ಯಭಾವ)ವನ್ನು ಪಡೆಯುತ್ತದೆ. ಅಥವಾ ವಾಚ್ಯಾರ್ಥವು ಅರ್ಥಾಂತರವನ್ನು (=ಲಕ್ಷ್ಯಾರ್ಥವನ್ನು) ಲಕ್ಷಿಸಿ

'ಮುಖ್ಯಾರ್ಥವನ್ನು ಬಿಡದೆ ಬರುವ ಪ್ರತೀತಿಯೇ ಲಕ್ಷಣೆ; ಲಕ್ಷಿತವಾದ ಗುಣಗಳ ಯೋಗವಿದ್ದರೆ ಆಗ ವ್ಯಾಪಾರವು ಗೌಣವೆನ್ನುವೆವು.'[54] ಇಲ್ಲಿ ಬಿಡದೆ (ಮೂಲ—'ಅವಿನಾಭೂತ') ಎನ್ನುವುದಕ್ಕೆ ಸಾಮಾನ್ಯ ಸಂಬಂಧವುಳ್ಳ ಎಂದರ್ಥವೇ

---

ತನ್ನ ವಾಚಕಶಬ್ದವನ್ನು ಆದರ ವಾಚಕಶಬ್ದದೊಡನೆ ಸಮಾನಾಧಿಕರಣವಾಗುವಂತೆ ಮಾಡುತ್ತದೆ. ಅಥವಾ ಶಬ್ದಾರ್ಥಗಳೆರಡೂ ಏಕಕಾಲದಲ್ಲಿ ಲಕ್ಷಿಸುತ್ತಾ ಬೇರೆ ಶಬ್ದಾರ್ಥಗಳೆರಡರೊಡನೆಯೂ ಸಂವಿಶ್ರವಾಗಿಬಿಡುತ್ತವೆ.''

'ವಾಹೀಕನೇ ಹಸು' ಎಂಬ ಉದಾಹರಣೆಯನ್ನು ತೆಗೆದುಕೊಂಡು ಮಮ್ಮಟನು ಈ ಮೂರು ಮತಗಳನ್ನೂ ವಿವರಿಸುತ್ತಿದ್ದಾನೆ. ಹಸುವೆಂಬ ಶಬ್ದವನ್ನು ವಾಹೀಕನಿಗೆ ವಿಶೇಷಣವೆಂದು ಮೊದಲು ಆರೋಪಿಸುವುದರಿಂದ, ಎಂದರೆ ಶಬ್ದಾರೋಪ ವಾಕ್ಯದಲ್ಲಿರುವುದರಿಂದ, ಹಸುವಿನಲ್ಲಿರುವ ಗುಣಗಳಿಗೆ ಸದೃಶವಾದ ಗುಣಗಳನ್ನುಳ್ಳ ಮನುಷ್ಯನೆಂಬ ಲಕ್ಷ್ಯಾರ್ಥವು 'ಹಸು' ಎಂಬ ವಾಚ್ಯಾರ್ಥದಿಂದ ಅಭಿಹಿತವಾಗುತ್ತದೆ ಎಂಬುದು ಮೊದಲನೆಯ ಪಕ್ಷ. ಈ ಶಬ್ದಾರೋಪವು ಮೊದಲಲ್ಲ; ಇದು ಸಿದ್ಧಿಸುವುದಕ್ಕಾಗಿ ಹಸು, ವಾಹೀಕ, ಇಬ್ಬರಲ್ಲಿಯೂ ಇರುವ ಗುಣಗಳೆಂಬ ಅರ್ಥಗಳಿಗೆ ಮೊದಲು ಅಭೇದದ ಅಧ್ಯಾರೋಪ ಮಾಡುತ್ತೇವೆ. ಆದ್ದರಿಂದ ಲಕ್ಷ್ಯಾರ್ಥ ಗುಣಗಳೇ ಹೊರತು ಪುರುಷನಲ್ಲ, ಎಂಬುದು ಎರಡನೆಯ ಪಕ್ಷ. ಆದರೆ ವಿಶಿಷ್ಟಗುಣಯುಕ್ತ ಪುರುಷನೆಂಬ ಅರ್ಥಾಂತರವು ಸದೃಶ ಗುಣಗಳ ಮೂಲಕ ಲಕ್ಷಿತವಾಗುತ್ತದೆನ್ನುವುದು ಮೂರನೆಯ ಪಕ್ಷ. ಇಲ್ಲಿ ವಾಚಕಶಬ್ದ ವಾಚ್ಯಾರ್ಥಗಳಿಗೂ ಲಕ್ಷಕ ಲಕ್ಷ್ಯಾರ್ಥಗಳಿಗೂ ಏಕಕಾಲದಲ್ಲಿ ಸಂವಿಶ್ರಣವನ್ನು ಹೇಳಿದಂತಾಗುತ್ತದೆ. ಅರ್ಥಪ್ರತೀತಿ ಬೇಗ ಬರುತ್ತಿರುವಾಗ ಶಬ್ದ, ಅರ್ಥಗಳ ಆರೋಪದಲ್ಲಿ ಪೂರ್ವಾಪರ ಕಲ್ಪನೆಗಳಿಗವಕಾಶವಿಲ್ಲವೆಂದು ಈ ಪಕ್ಷ ಸೂಚಿಸುತ್ತದೆ. ಆದ್ದರಿಂದಲೇ ಉದ್ಭಟನು ಆದನ್ನು 'ಯುಕ್ತ'ವೆಂದಿರುವುದು. ಮಹಿಮಭಟ್ಟನು ಮಾತ್ರ ಈ ಸಮಶೀರ್ಷಿಕೆಯ 'ಶಬ್ದಾರ್ಥಾರೋಪ' ತರ್ಕವಿರುದ್ಧವೆಂದು ದೂಷಿಸುತ್ತಾನೆ. ಹೋಲಿಸಿ—

> ಪ್ರಧಾನೇತರಭಾವೇನಾವಸ್ಥಾನಾದಾರ್ಥಶಬ್ದಯೋಃ |
> ಸಮಶೀರ್ಷಿಕಯಾರೋಪಃ ನ ತಯೋರುಪಪದ್ಯತೇ ||
>
> —ವ್ಯಕ್ತಿವಿವೇಕ

[54] ಇದು ಕುಮಾರಿಲಭಟ್ಟರ ತಂತ್ರವಾರ್ತಿಕದಿಂದ (ಅ-೧೦, ಪಾ. ೪, ಸೂ ೨೨) ಉದಾಹೃತವಾದ ಕಾರಿಕೆ. ಅವರು ಶಬ್ದಗಳಿಗೆ ಅಭಿಧಾ, ಲಕ್ಷಣಾ ಎಂಬ ವ್ಯಾಪಾರಗಳನ್ನು ಹೇಳುವಂತೆ 'ಗುಣವೃತ್ತಿ'ಯೆಂಬ ಮೂರನೆಯ ವ್ಯಾಪಾರವನ್ನೊಪ್ಪುತ್ತಾರೆ; ಎಂದರೆ ಕುಮಾರಿಲಭಟ್ಟರ ಪ್ರಕಾರ ಲಕ್ಷಣಾ, ಮತ್ತು ಗುಣವೃತ್ತಿಗಳು ಬೇರೆ ಬೇರೆ ವೃತ್ತಿಗಳೇ ಹೊರತು ಗುಣವೃತ್ತಿಯು ಲಕ್ಷಣೆಯಲ್ಲಿ ಅಂತರ್ಗತವಾಗುವುದಿಲ್ಲ. ಅವೆರಡರ ವ್ಯತ್ಯಾಸವನ್ನೂ ಅವರು ಈ ಕಾರಿಕೆಯಲ್ಲಿ ಹೇಳಿದ್ದಾರೆ. '' ಮಾನಾಂತರವಿರುದ್ಧೇ ತು ಮುಖ್ಯಾರ್ಥಸ್ಯ ಪರಿಗ್ರಹೇ '' (—ಮುಖ್ಯಾರ್ಥವನ್ನೇ ಆಶ್ರಯಿಸುವುದು ಕಾರಣಾಂತರದಿಂದ ಬಾಧಿತವಾದಾಗ ಎಂಬುದು ಹಿಂದಿನ ವಾಕ್ಯಭಾಗ). ಮುಖ್ಯಾರ್ಥದೊಡನೆ ಸಾಕ್ಷಾತ್ತಾಗಿ ಯೋಗ ಅಥವಾ ಸಂಬಂಧವು ಲಕ್ಷಣೆಗೆ ನಿಯಾಮಕವೆಂದೂ ಗುಣವೃತ್ತಿಗೆ ಲಕ್ಷ್ಯಮಾಣವಾದ ಗುಣಗಳ ಯೋಗ ಮಾತ್ರ ನಿಯಾಮಕವೆಂದೂ ಇಲ್ಲಿ ಸ್ಪಷ್ಟವಾಗಿ

ಹೊರತು ಪಾರಿಭಾಷಿಕವಾದ ಅವಿನಾಭಾವ ಅಥವಾ ತಾದಾತ್ಮ್ಯವನ್ನುಳ್ಳ ಎಂದಲ್ಲ. ಹಾಗಾಗುವ ಪಕ್ಷಕ್ಕೆ "ಮಂಚಗಳು ದನಿಗೈಯುತ್ತವೆ" ಮುಂತಾದ ಪ್ರಯೋಗಗಳಲ್ಲಿ ಲಕ್ಷಣೆಯೇ ಇಲ್ಲದೆ ಹೋದೀತು. ತಾದಾತ್ಮ್ಯ ಸಹಜವಾಗಿಯೇ ಅರ್ಥಾತ್ ಸಿದ್ಧವಾಗುವ ಪ್ರಯುಕ್ತ ಅಲ್ಲೆಲ್ಲ ಲಕ್ಷಣೆಯನ್ನು ಆಶ್ರಯಿಸುವ ಕಾರಣವಿಲ್ಲವೆಂದು ಈಗಾಗಲೇ ಹೇಳಲಾಗಿದೆ.[55]

'ತುಪ್ಪವೇ ಆಯುಸ್ಸು,' 'ಇಗೋ ಆಯುಸ್ಸು'[56] ಎಂಬ ಪ್ರಯೋಗಗಳಲ್ಲಿ ಸಾದೃಶ್ಯದ ಬದಲು ಕಾರ್ಯಕಾರಣಭಾವವೆಂಬ ಬೇರೊಂದು ಸಂಬಂಧವಿದೆ. ಇಂತಹ ಕಡೆಗಳಲ್ಲಿ ಕಾರ್ಯಕಾರಣ ಭಾವವೇ ಮುಂತಾದುವುಗಳ ಜ್ಞಾನ ಮೊದಲು ಬಂದ ಮೇಲೆ ಆರೋಪ ಹಾಗು ಅಧ್ಯವಸಾನಗಳು ಹೊರಡುತ್ತವೆ.[57]

ಮೇಲಿನ ಎರಡು ವಿಧವಾದ ಗೌಣವೃತ್ತಿಗಳಲ್ಲಿ[58] ಪ್ರಯೋಜನವೇನೆಂದರೆ ಕ್ರಮವಾಗಿ (೧) ಭೇದವಿದ್ದರೂ ತಾದ್ರೂಪ್ಯದ ಪ್ರತೀತಿ ಮತ್ತು (೨) ಸರ್ವಥಾ ಅಭೇದದ ಪ್ರತೀತಿ. ಹಾಗೆಯೇ ಎರಡು ಬಗೆಯ ಶುದ್ಧ ಲಕ್ಷಣಾಭೇದಗಳಲ್ಲಿ[59] ಪ್ರಯೋಜನ

---

ಹೇಳಿರುವುದರಿಂದ ಇದೂ ಮಮ್ಮಟನ ಅಭಿಪ್ರಾಯಕ್ಕೆ ಪೋಷಕವಾಗಿದೆ. ಒಂದರಲ್ಲಿ ನೇರವಾದ ಯೋಗವೂ ಇನ್ನೊಂದರಲ್ಲಿ ಎರಡರ ಗುಣಗಳಿಗೆ ಮಾತ್ರ ಯೋಗವೂ ಇರುತ್ತದೆ. ಆದರೆ ವ್ಯಾಖ್ಯಾಕಾರರು ಇಲ್ಲಿ ಅಭಿಪ್ರಾಯವನ್ನು ಅನೇಕ ವಿಧವಾಗಿ ಎಳೆದೆಳೆದು ಮನಸ್ಸಿಗೆ ಭ್ರಾಂತಿ ಬರುವಂತೆ ಮಾಡುತ್ತಾರೆ. ಶಬ್ದಾರ್ಥಾರೋಪಗಳೆರಡೂ ಸಂಮಿಶ್ರವಾದಲ್ಲದೆ ಲಕ್ಷಕ ಶಬ್ದಕ್ಕೂ ಲಕ್ಷ್ಯಾರ್ಥಕ್ಕೂ ಗುಣಯೋಗ ಉಪಪನ್ನವಾಗುವುದಿಲ್ಲ. ಕುಮಾರಿಲಭಟ್ಟರ ಪ್ರಮಾಣವನ್ನು ಕೊಟ್ಟರೂ ಮಮ್ಮಟನು ಅವರಂತೆ ಲಕ್ಷಣೆ, ಗೌಣಿಗಳನ್ನು ಬೇರೆಬೇರೆಯೆನ್ನದೆ ಗೌಣಿ ಲಕ್ಷಣೆಯ ಪ್ರಭೇದವೆಂದಿರುವುದು ಗಮನಾರ್ಹ.

[55] ಮೇಲೆ ೪೧-೪೩ ಟಿಪ್ಪಣಿಗಳನ್ನೋದಿ.

[56] ಪೂರ್ಣ ಶ್ಲೋಕ ಹೀಗಿದೆ :—

ಆಯುಃ ಘೃತಂ ಯಶಸ್ತ್ಯಾಗೋ ಭಯಂ ಚೌರಃ ಸುಖಂ ಪ್ರಿಯಾ |
ವೈರಂ ದ್ಯೂತಂ ಗುರುಜ್ಞಾನಂ ಶ್ರೇಯಃ ಸತ್ತೀರ್ಥಸೇವನಂ ||

ಆಯುಸ್ಸಿಗೆ ತುಪ್ಪ, ಯಶಸ್ಸಿಗೆ ತ್ಯಾಗ, ಭಯಕ್ಕೆ ಕಳ್ಳ, ಸುಖಕ್ಕೆ ಪ್ರಿಯ ಇವು ಪ್ರಬಲ ಕಾರಣಗಳೆಂದು ಭಾವ. ಕಾರ್ಯ ಕಾರಣಗಳೆರಡನ್ನೂ ಪ್ರತ್ಯೇಕ ಶಬ್ದಗಳಿಂದ ಹೇಳಿರುವುದರಿಂದ ಇದು 'ಸಾರೋಪಾ'. ಕಾರಣವನ್ನು ಹೇಳದೆ ಕಾರ್ಯವೊಂದನ್ನೇ ಹೇಳಿದ್ದರೆ 'ಸಾಧ್ಯವಸಾನಾ'. ಸಾರೋಪಾ ಲಕ್ಷಣೆಯನ್ನು ಎಲ್ಲ ರೂಪಕಾಲಂಕಾರಗಳಲ್ಲಿಯೂ ಸಾಧ್ಯವಸಾನಾ ಲಕ್ಷಣೆಯನ್ನು ಎಲ್ಲ ಅತಿಶಯೋಕ್ತಿ ಅಲಂಕಾರಗಳಲ್ಲೂ ಗಮನಿಸಬಹುದು.

[57] ಗುಣವೃತ್ತಿಯ ಉದಾಹರಣೆಗಳಂತೆ ಸಾದೃಶ್ಯಸಂಬಂಧದ ಪರಾಮರ್ಶದಿಂದಲ್ಲ.

[58] 'ವಾಹೀಕನು ಹಸು', 'ಇಗೋ ಹಸು' ಎಂಬುವೇ ಉದಾಹರಣೆಗಳು.

[59] 'ತುಪ್ಪವೇ ಆಯುಸ್ಸು', 'ಇಗೋ ಆಯುಸ್ಸು' ಎಂಬುವು ಉದಾಹರಣೆಗಳು. ಇವನ್ನಾಗಲೇ ಹೇಳಿದೆ.

ಕ್ರಮವಾಗಿ (೧) ಅನ್ಯವಿಲಕ್ಷಣವಾದ ಕಾರ್ಯಕಾರಿತ್ವ ಮತ್ತು (೨) ಒಮ್ಮೆಯೂ ತಪ್ಪದೆ ಕಾರ್ಯವನ್ನು ಉಂಟುಮಾಡುವ ಸಾಮರ್ಥ್ಯ.

ಕೆಲವೊಮ್ಮೆ 'ಅದರ ಸಲುವಾಗಿ' ಎಂಬರ್ಥದಲ್ಲಿಯೂ ಅಧ್ಯಾರೋಪವು ಬರಬಹುದು. ಉದಾ. :—ಇಂದ್ರನ ಸಲುವಾಗಿ ನೆಟ್ಟ ಕಂಭವು 'ಇಂದ್ರ'ನೆನಿಸುತ್ತದೆ. ಕೆಲವೊಮ್ಮೆ ಸ್ವಸ್ವಾಮಿಭಾವದಲ್ಲಿ—ಉದಾ. : ರಾಜನ ಕಡೆಯ ಅಧಿಕಾರಿಯೇ 'ರಾಜ'ನೆನಿಸುತ್ತಾನೆ. ಕೆಲವೊಮ್ಮೆ ಅವಯವ-ಅವಯವಿಭಾವದಲ್ಲಿ—ಉದಾ. : 'ಅಗ್ರಹಸ್ತ' ಎಂಬ ಸಮಾಸದಲ್ಲಿ ಹಸ್ತ ಎಂದರೆ ಅವಯವದ ತುದಿ ಮಾತ್ರ.[60] ಕೆಲವೊಮ್ಮೆ ಆ ಕೆಲಸವನ್ನು ಮಾಡುವವನು ಎಂಬ ಅರ್ಥದಲ್ಲಿ—ಉದಾ.:—(ಜನ್ಮದಿಂದ) 'ಬಡಗಿಯಲ್ಲದಿದ್ದರೂ (ವೃತ್ತಿಯಲ್ಲಿ) ಬಡಗಿ.'[61]

ಲಕ್ಷಣಾ ತೇನ ಷಡ್ವಿಧಾ ‖ ೭$d$ ‖

ಹೀಗೆ ಲಕ್ಷಣೆ ಆರು ಬಗೆ.[62]

---

[60] ಹಸ್ತವೆಂದರೆ ಪೂರ್ಣ ಕೈ ಮುಖ್ಯಾರ್ಥ. 'ಅಗ್ರಹಸ್ತ'ವೆಂದರೆ ಕೈಯೆಂದರ್ಥವಲ್ಲ ; ಕೈತುದಿಯೆಂದರೆ ಕೈಬೆರಳೆಂದರ್ಥ. ಹೋಲಿಸಿ, ವಾಮನ—'ಹಸ್ತಾಗ್ರಾಗ್ರಹಸ್ತಾದಯೋ ಗುಣಗುಣಿನೋರ್ಭೇದಾಭೇದಾತ್."

[61] ಈ ಎಲ್ಲ ಉದಾಹರಣೆಗಳಲ್ಲೂ ಸಾದೃಶ್ಯೇತರ ಸಂಬಂಧ ಅಧ್ಯಾರೋಪಕ್ಕೆ ನಿಮಿತ್ತವಾದುದರಿಂದ ಅವು "ಶುದ್ಧ" ಲಕ್ಷಣೆಗಳೆನಿಸುತ್ತವೆ. ಹೋಲಿಸಿ—"ಸಹಚರಣ—ಸ್ಥಾನ—ತಾದರ್ಥ್ಯ—ವೃತ್ತ—ಮಾನ—ಧಾರಣ—ಸಾಮೀಪ್ಯ—ಯೋಗ—ಸಾಧನ—ಆಧಿಪತ್ಯೇಭ್ಯೋ ಬ್ರಾಹ್ಮಣ—ಮಂಚ—ಕಟ—ರಾಜ—ಸಕ್ತು—ಚಂದನ—ಗಂಗಾ—ಶಕಟ—ಅನ್ನ—ಪುರುಷೇಷು ಅತದ್ಭಾವೇಽಪಿ ತದುಪಚಾರಃ"—ನ್ಯಾಯಸೂತ್ರ II. ii. ೬೩. ಇಲ್ಲಿ 'ಉಪಚಾರ'ವೆಂದರೆ ಆರೋಪವೆಂಬ ಸಾಮಾನ್ಯಾರ್ಥವೇ ಹೊರತು ಸಾದೃಶ್ಯ ಮಾತ್ರ ಮೂಲವಾದ ಆರೋಪವೆಂಬ ಸಂಕುಚಿತಾರ್ಥವಿಲ್ಲ.

[62] ಇದನ್ನು ಪಟ್ಟಿಮಾಡಿ ಹೀಗೆ ತೋರಿಸಬಹುದು :—



ಮೊದಲಿನ ಎರಡು ಬಗೆಗಳನ್ನೂ[63] ಸೇರಿಸಿದರೆ ಎಂದು ತಾತ್ಪರ್ಯ. ಅದಾದರೋ-

ವ್ಯಂಗ್ಯೇನ ರಹಿತಾ ರೂಢೌ ಸಹಿತಾ ತು ಪ್ರಯೋಜನೇ । ೮*ab* ।

ರೂಢಿಯನ್ನಾಶ್ರಯಿಸುವಾಗ ವ್ಯಂಗ್ಯಾರ್ಥವಿಲ್ಲದಿರುತ್ತದೆ; ಆದರೆ ಪ್ರಯೋಜನವನ್ನಾಶ್ರಯಿಸುವಾಗ ವ್ಯಂಗ್ಯಾರ್ಥವನ್ನೊಳಗೊಂಡಿರುತ್ತದೆ.[64]

ಏಕೆಂದರೆ ಪ್ರಯೋಜನ ವ್ಯಂಜನಾವ್ಯಾಪಾರದಿಂದ ಮಾತ್ರ ಗಮ್ಯ.

ತಚ್ಚ ಗೂಢಮಗೂಢಂ ವಾ । ೮*c* ।

ಅದು ಗೂಢವಾಗಿರಬಹುದು[65]; ಇಲ್ಲವೆ ಅಗೂಢವಾಗಿರಬಹುದು.

'ಅದು' ಎಂದರೆ ವ್ಯಂಗ್ಯವಾದ ಅರ್ಥ. ಗೂಢವ್ಯಂಗ್ಯಕ್ಕೆ ಉದಾಹರಣೆ—

ಮುಖಂ ವಿಕಸಿತಸ್ಮಿತಂ ವಶಿತವಕ್ರಿಮ ಪ್ರೇಕ್ಷಿತಂ
ಸಮುಚ್ಛಲಿತವಿಭ್ರಮಾ ಗತಿರಪಾಸ್ತಸಂಸ್ಥಾ ಮತಿಃ
ಉರೋ ಮುಕುಲಿತಸ್ತನಂ ಜಘನಮಂಸಬಂಧೋದ್ಧುರಂ
ಬತೇಂದುವದನಾತನೌ ತರುಣಿಮೋದ್ಗಮೋ ಮೋದತೇ ॥

ಮೊಗದೊಳರಳಿದೆ ನಗೆಯು ನೇತ್ರವು ಕೊಂಕನೇ ಬಸಗೈದಿದೆ
ಮೇಲೆ ಚಿಮ್ಮಿದೆ ಗತಿಯ ಲೀಲೆಯು ಮತಿಯು ತೊರೆದಿದೆ ಸೀಮೆಯ।
ಎದೆಯು ಮೊಲೆಗಳ ಮುಗುಳ ತೋರ್ಪುದು ಪೀನ ಜಘನವು ವೈಮೆಯ
ಚಂದ್ರವದನೆಯ ದೇಹದೊಳಹಾ! ಏರುಜವ್ವನ ನಲಿದಿದೆ ॥[66]

---

ಸ್ಪಷ್ಟವಾಗಿರುವ ಈ ಭೇದಗಳ ಬದಲು ಚಂಡೀದಾಸ, ಗೋವಿಂದ, ಮಾಣಿಕ್ಯಚಂದ್ರ, ಮುಂತಾದ ಟೀಕಾಕಾರರು ಬೇರೆ ವಿಭಾಗಕ್ರಮಗಳನ್ನು ಸೂಚಿಸಿದ್ದಾರೆ. ಅವು ವ್ಯರ್ಥವೆಂದು ಇಲ್ಲಿ ಕೈಬಿಟ್ಟಿದೆ.

[63] 'ಉಪಾದಾನ' ಮತ್ತು 'ಲಕ್ಷಣ' ಲಕ್ಷಣೆಗಳೇ ಮೊದಲಿನ ಎರಡು ಭೇದಗಳು.

[64] 'ಲಕ್ಷಣೆ' ಎಂದು ಅಧ್ಯಾಹಾರ ಮಾಡಿಕೊಳ್ಳಬೇಕು.

[65] ಕಾವ್ಯಾರ್ಥಪರಾಮರ್ಶದಲ್ಲಿ ಪರಿಪಕ್ವವಾದ ಬುದ್ಧಿಯುಳ್ಳ ಸಹೃದಯರಿಗೆ ಮಾತ್ರ ವೇದ್ಯವಾದುದು 'ಗೂಢ'ವೆಂದು ಪ್ರದೀಪಕಾರನು ಬರೆಯುತ್ತಾನೆ.

[66] ನಗೆಗೆ ಪುಷ್ಪಧರ್ಮವನ್ನು ಆರೋಪಿಸುವುದರಿಂದ ಸೌರಭವೂ, ನೇತ್ರಕ್ಕೆ ಚೇತನಕ್ರಿಯೆಯನ್ನಾರೋಪಿಸುವುದರಿಂದ ಅನುರಾಗವೂ, ಮೂರ್ತವಸ್ತುಧರ್ಮವನ್ನು ಅಮೂರ್ತವಾದ ವಿಲಾಸಕ್ಕೆ ಆರೋಪಿಸುವುದರಿಂದ ರತಿಯೋಗ್ಯತ್ವವೂ, ಹಾಗೆಯೇ ಮತಿಗೆ ಚೇತನಕ್ರಿಯೆಯನ್ನಾರೋಪಿಸುವುದರಿಂದ ಜಾಣ್ಮೆಯೂ, ಎದೆಗೆ ಮೊಗ್ಗೆನ್ನುವಾಗ ರೂಪಾತಿಶಯವೂ, ಜಘನದ ಪೀನತ್ವಾರೋಪದಲ್ಲಿ ಭೋಗಯೋಗ್ಯತ್ವವೂ, 'ನಲಿದಿದೆ' ಎಂಬ ಚೇತನಕ್ರಿಯೆಯಿಂದ ಯೌವನಾರಂಭದ ಅನಿತರಸಾಧಾರಣತ್ವವೂ ಸಹೃದಯರಿಗೆ ವ್ಯಂಗ್ಯವಾಗಿ ಸ್ಫುರಿಸಿ ಚಮತ್ಕಾರವನ್ನುಂಟುಮಾಡುವುವೆಂದು 'ಸಾಹಿತ್ಯಚೂಡಾಮಣಿ'ಯಲ್ಲಿ ವಿವರಿಸಿದೆ.

ಅಗೂಢವ್ಯಂಗ್ಯಕ್ಕೆ ಉದಾಹರಣೆ—

ಶ್ರೀ ಪರಿಚಯಾಜ್ಜಡಾ ಅಪಿ ಭವಂತ್ಯಭಿಜ್ಞಾ ವಿದಗ್ಧಚರಿತಾನಾಮ್ ।
ಉಪದಿಶತಿ ಕಾಮಿನೀನಾಂ ಯೌವನಮದ ಏವ ಲಲಿತಾನಿ ॥

ಸಿರಿ ಬರೆ ಜಡರುಂ ಪರಿಣತ-
ಚರಿತಂಗಳೊಳಪ್ಪರಲ್ತೆ ಕೋವಿದಮತಿಗಳ್ ।
ನೆರೆವುದು ಕಲಿಸಲ್ ಜವ್ವನ-
ದುರವಣೆ ಮೇಣ್ ಲಲನೆಯರ್ಗೆ ಸಲ್ಲೀಲೆಗಳಂ ॥

ಇಲ್ಲಿ 'ಉಪದಿಶತಿ' ಅಥವಾ 'ಕಲಿಸಲ್ ನೆರೆವುದು' ಎಂಬ ಶಬ್ದದಿಂದ 'ಅನಾಯಾಸವಾಗಿ ಪಾಠವನ್ನು ಕಲಿಸುವುದು' ಎಂಬರ್ಥ ಗಮ್ಯವಾದರೂ ವಾಚ್ಯಾರ್ಥದಷ್ಟೇ ಸ್ಫುಟವಾಗಿ ಪ್ರತೀತವಾಗುತ್ತದೆ.[67]

ತದೇಷಾ ಕಥಿತಾ ತ್ರಿಧಾ ॥೮॥

ಹೀಗೆ ಲಕ್ಷಣೆ (ವ್ಯಂಗ್ಯದ ದೃಷ್ಟಿಯಿಂದ) ಮೂರು ವಿಧ.

ಅವ್ಯಂಗ್ಯ, ಗೂಢವ್ಯಂಗ್ಯ ಮತ್ತು ಅಗೂಢವ್ಯಂಗ್ಯ ಎಂಬವೇ ಮೂರು ಬಗೆಗಳು.[68]

ತದ್ಭೂಃ ಲಾಕ್ಷಣಿಕಃ ॥೯a॥

---

[67] ಇಲ್ಲಿ ವ್ಯಂಗ್ಯಾರ್ಥ ಸರ್ವರಿಗೂ ಸುಲಭವೇದ್ಯವಾದುದರಿಂದ ಅಗೂಢ. ಅಲಂಕಾರ ದೃಷ್ಟಾಂತ.

[68] ವ್ಯಂಗ್ಯಾರ್ಥವನ್ನು ವಿಭಾಜಕತ್ವವೆಂದು ಭಾವಿಸಿದರೆ, ಈ ಹೊಸ ದೃಷ್ಟಿಯಿಂದ ಲಕ್ಷಣೆ ಮೂರುಬಗೆಯದಾಗುತ್ತದೆ:—



ಆ ಲಕ್ಷಣಾವ್ಯಾಪಾರವನ್ನುಳ್ಳದ್ದು 'ಲಾಕ್ಷಣಿಕ'[69]

ಇಲ್ಲಿ ಶಬ್ದವೆಂದು ಅಧ್ಯಾಹಾರಮಾಡಿಕೊಳ್ಳಬೇಕು. 'ತದ್ಭೂಃ' ಎಂದರೆ ಅದರ ಆಶ್ರಯವಾದುದು.

ತತ್ರ ವ್ಯಾಪಾರೋ ವ್ಯಂಜನಾತ್ಮಕಃ ॥೯b॥

ಅಲ್ಲಿ (=ವ್ಯಂಗ್ಯವಾದ ಪ್ರಯೋಜನವುಳ್ಳ ಲಾಕ್ಷಣಿಕ ಶಬ್ದದಲ್ಲಿ) ವ್ಯಂಜನಾ ಎಂಬ ವ್ಯಾಪಾರವೂ ಇರುತ್ತದೆ.

ಏಕೆಂಬುದನ್ನು ಹೇಳುತ್ತಾನೆ—

ಯಸ್ಯ ಪ್ರತೀತಿಮಾಧಾತುಂ ಲಕ್ಷಣಾ ಸಮುಪಾಸ್ಯತೇ ॥೯cd॥

ಫಲೇ ಶಬ್ದೈಕಗಮ್ಯೇಽತ್ರ ವ್ಯಂಜನಾನ್ನಾಪರಾ ಕ್ರಿಯಾ ॥೧೦ab॥

ಯಾವುದರ ಪ್ರತೀತಿಯನ್ನು ಮಾಡಿಕೊಡಲು ಲಕ್ಷಣಾ ವ್ಯಾಪಾರವನ್ನು ಆಶ್ರಯಿಸುತ್ತೇವೆಯೋ ಆ ಶಬ್ದಮಾತ್ರಗಮ್ಯವಾದ ಪ್ರಯೋಜನವನ್ನು ಬೋಧಿಸುವಾಗ ಶಬ್ದಕ್ಕೆ ವ್ಯಂಜನೆಯಲ್ಲದೆ ಬೇರೆ ವ್ಯಾಪಾರವಿಲ್ಲ.

ಪ್ರಯೋಜನವನ್ನು ಪ್ರತಿಪಾದಿಸಬೇಕೆಂದೇ ಎಲ್ಲಿ ಲಕ್ಷಣಾಯುಕ್ತವಾದ ಶಬ್ದವನ್ನು ಪ್ರಯೋಗಿಸಿದೆಯೋ ಅಲ್ಲಿ ಅದರ (ಪ್ರಯೋಜನದ) ಪ್ರತೀತಿ ಬೇರಾವುದರಿಂದಲೂ ಬರುವುದೆಂಬಂತಿಲ್ಲ; ಆ ಶಬ್ದವೊಂದರಿಂದಲೇ ಬರುತ್ತದೆನ್ನಬೇಕು. ಆಗ ಶಬ್ದದ ವ್ಯಾಪಾರ ಕೂಡ ವ್ಯಂಜನೆಯಲ್ಲದೆ ಬೇರೊಂದಾಗಲಾರದು.[70] ಏಕೆಂದರೆ—

---

[69] ಮೂಲಕಾರಿಕೆಗಳನ್ನು ಪ್ರಸಂಗೋಚಿತವಾಗಿ ಒಡೆದೊಡೆದು ವಿವರಿಸುವುದು ಶಾಸ್ತ್ರಕಾರರ ಸರಣಿ. ಈ "ಖಂಡೀಕೃತ್ಯ ಪಠನ"ವನ್ನು ಧ್ವನ್ಯಾಲೋಕದಲ್ಲೂ ನೋಡಬಹುದು.

[70] ಲಕ್ಷಣಾವ್ಯಾಪಾರದ ನಿರೂಪಣೆ ಮುಗಿದ ಮೇಲೆ ಲಕ್ಷಣಾಮೂಲವಾದ ವ್ಯಂಜನಾ ವ್ಯಾಪಾರದಿಂದ ಆರಂಭಿಸಿ ಆ ವ್ಯಾಪಾರದ ಪೂರ್ಣ ನಿರೂಪಣೆಗೆ ಮಮ್ಮಟನು ತಿರುಗುತ್ತಾನೆ. ಆನಂದವರ್ಧನನಿಗಿಂತ ಹಿಂದಿನ ಲಾಕ್ಷಣಿಕರು ವ್ಯಂಜನಾವ್ಯಾಪಾರವನ್ನೇ ಒಪ್ಪುತ್ತಿರಲಿಲ್ಲ. ವ್ಯಾಕರಣದ ಸ್ಫೋಟವಾದದಲ್ಲಿ ಒಪ್ಪಿದಂತೆ ಅಲಂಕಾರಶಾಸ್ತ್ರದಲ್ಲೂ ಇವನ್ನು ಒಪ್ಪಬೇಕೆಂದು ಮೊದಲು ವಾದಿಸಿದವನು ಆನಂದವರ್ಧನ. ಅವನ ವಾದವನ್ನು ಪುರಸ್ಕರಿಸದೆ ತಾರ್ಕಿಕರು ಅದು "ಅನುಮಾನ"ದಲ್ಲೇ ಅಂತರ್ಗತವಾಗುವುದೆನ್ನುತ್ತಿದ್ದರು: ಮೀಮಾಂಸಕರು "ಅರ್ಥಾಪತ್ತಿ"ಯಲ್ಲೇ ಅದನ್ನು ತರುತ್ತಿದ್ದರು. 'ಧ್ವನ್ಯಾಲೋಕ'ವನ್ನು ಖಂಡಿಸಲು 'ಹೃದಯದರ್ಪಣ', 'ವ್ಯಕ್ತಿವಿವೇಕ' ಮುಂತಾದ ಸ್ವತಂತ್ರಗ್ರಂಥಗಳೇ ರಚಿತವಾಗಿದ್ದುವು. ಅಂತೆಯೇ ಅಭಿನವಗುಪ್ತರು ಆನಂದವರ್ಧನನನ್ನು ಸಮರ್ಥಿಸಲು ತಮ್ಮ ಪ್ರೌಢವಾದ 'ಲೋಚನ'ವನ್ನೂ ಬರೆದಿದ್ದರು. ಮಮ್ಮಟನು ತನ್ನ ಅಧಿಕಾರವಾಣಿಯಿಂದ ವ್ಯಂಜನಾವ್ಯಾಪಾರದ ಅಸ್ತಿತ್ವವನ್ನು ಮತ್ತೆ ಸಮರ್ಥಿಸುವು

ನಾಭಿಧಾ ಸಮಯಾಭಾವಾತ್ ‖೧೦c‖

ಅದಕ್ಕೆ ಆ ಸಂಕೇತವಿಲ್ಲದ ಕಾರಣ ಅದು ಅಭಿಧೆಯಲ್ಲ.

"ಗಂಗೆಯಲ್ಲಿ ಹಳ್ಳಿ" ಎನ್ನುವಾಗ ಗಂಗಾತೀರದಲ್ಲಿ ಪ್ರತೀತವಾಗುವ ಪಾವನತ್ವ ಮುಂತಾದ ಧರ್ಮಗಳಾವುವೂ 'ಗಂಗೆ'ಯೆಂಬ ಶಬ್ದಕ್ಕೆ ಸಂಕೇತಿತವಾದ ಅರ್ಥಗಳಲ್ಲ.

ಹೇತ್ವಭಾವಾನ್ನ ಲಕ್ಷಣಾ ‖ ೧೦d ‖

ಅಗತ್ಯವಾದ ನಿಮಿತ್ತಗಳಿಲ್ಲದಿರುವುದರಿಂದ ಲಕ್ಷಣೆಯೂ ಅಲ್ಲ.

ಮುಖ್ಯಾರ್ಥದ ಬಾಧೆ ಮುಂತಾದ ಮೂರು ಲಕ್ಷಣೆಯನ್ನಾಶ್ರಯಿಸಲು ಅಗತ್ಯವಾದ ನಿಮಿತ್ತಗಳು. ಹೇಗೆಂದರೆ—

ಲಕ್ಷ್ಯಂ ನ ಮುಖ್ಯಂ ನಾಪ್ಯತ್ರ ಬಾಧೋ ಯೋಗಃ ಫಲೇನ ನೋ ।
ನ ಪ್ರಯೋಜನಮೇತಸ್ಮಿನ್ ನ ಚ ಶಬ್ದಃ ಸ್ಖಲದ್ಗತಿಃ ‖ ೧೧ ‖

ಲಕ್ಷ್ಯಾರ್ಥವೇ ಮುಖ್ಯಾರ್ಥವಲ್ಲ; ಇಲ್ಲಿ ಅದಕ್ಕೆ ಬಾಧೆಯೂ ಇಲ್ಲ; ಪ್ರಯೋಜನದೊಡನೆ ಸಂಬಂಧ ಮೊದಲೇ ಇಲ್ಲ; ಅದಕ್ಕೆ ಬೇರೊಂದು ಪ್ರಯೋಜನವನ್ನೂ ಹೇಳುವಂತಿಲ್ಲ; ಶಬ್ದ ತನ್ನ ಗತಿಯಲ್ಲಿ ಸ್ವಲ್ಪವೂ ಕುಂಠಿತವೇ ಅಲ್ಲ.[71]

---

ದಕ್ಕಾಗಿ ವಿಷಯವನ್ನೆಲ್ಲ ಕೂಲಂಕಷವಾಗಿ ಚರ್ಚಿಸಿದ್ದಾನೆ. ವ್ಯಂಜನಾವ್ಯಾಪಾರದ ಸಮರ್ಥನೆಗಾಗಿಯೇ ಲಕ್ಷಣೆಯ ವ್ಯಾಪ್ತಿಯನ್ನು ಅವನಷ್ಟು ಖಚಿತವಾಗಿ ಮೊದಲು ಮಾಡಿಕೊಟ್ಟಿರುವುದು. ಲಕ್ಷಣೆಯ ವ್ಯಾಪ್ತಿ ಇಷ್ಟೇ ಪರಿಮಿತವೆಂದು ಸಿದ್ಧವಾದ ಮೇಲೆ ಅದಕ್ಕಿಂತ ಹೊರಗಾದ ವ್ಯಂಜನಾವ್ಯಾಪಾರವನ್ನು ಸಾಧಿಸುವುದು ಸುಲಭ. ಆನಂದವರ್ಧನನ ಲಕ್ಷಣಾನಿರೂಪಣೆಗಿಂತಲೂ ಮಮ್ಮಟನ ನಿರೂಪಣೆ ಮಾರ್ಮಿಕವೂ ತಲಸ್ಪರ್ಶಿಯೂ ಪರಿಪೂರ್ಣವೂ ಆಗಿರುವುದೇ ಅವನ ಶಾಸ್ತ್ರದೃಷ್ಟಿಯ ಪ್ರಗಲ್ಭತೆಗೆ ಮಾನದಂಡ. ನಿಜವಾಗಿಯೂ ಮಮ್ಮಟನನ್ನು ಧ್ವನಿಪ್ರಸ್ಥಾಪನ ಪರಮಾಚಾರ್ಯನೆಂದು ಮುಂದಿನವರು ಮನಸಾರೆ ಗೌರವಿಸುವುದಕ್ಕೆ ಅವನ ದ್ವಿತೀಯೋಲ್ಲಾಸದ ನಿಷ್ಕೃಷ್ಟನಿರೂಪಣೆಯೇ ಕಾರಣ.

[71] ಹೋಲಿಸಿ—**ಕನ್ನಡ ಧ್ವನ್ಯಾಲೋಕ** I, ೨೦. ಗಂಗಾ ಶಬ್ದಕ್ಕೆ ತೀರವೆಂಬ ಲಕ್ಷ್ಯಾರ್ಥವನ್ನು ಹೇಳುವಾಗ ಗತಿ ಅಥವಾ ವ್ಯಾಪಾರವು ನೇರವಲ್ಲ; ವಕ್ರ. ಏಕೆಂದರೆ ಮುಖ್ಯಾರ್ಥದ ನಂತರ ಅದು ಮುಖ್ಯಾರ್ಥಯೋಗ, ರೂಢಿ, ಇತ್ಯಾದಿಗಳನ್ನು ಹಿಂಬಾಲಿಸಿ ಮತ್ತೆ ಹೊರಡಬೇಕಾಗುತ್ತದೆ. ಆದರೆ ಶೀತತ್ವಾದಿ ಪ್ರಯೋಜನವನ್ನು ಸೂಚಿಸಲು ಅದು ನೇರವಾಗಿಯೇ ವ್ಯಂಜನಾವ್ಯಾಪಾರದಿಂದ ಶಕ್ತವಾಗಿದೆ. ಲಕ್ಷಣಾಸ್ಥಲದಂತೆ ಶಬ್ದದ ಗತಿಗೆ ಅಲ್ಲಿ ಸ್ಖಲನವೇನೂ ಇಲ್ಲ. ಆದ್ದರಿಂದ ಪ್ರಯೋಜನ ಹೇಗೆಯೂ ಲಕ್ಷಣಾವೇದ್ಯವಲ್ಲ; ಲಕ್ಷಣಾ ವಿಲಕ್ಷಣವಾದ ವ್ಯಾಪಾರದಿಂದ ಮಾತ್ರ ಬೋಧ್ಯವೆಂದಂತಾಯಿತು. ಇದರ ವ್ಯಾಖ್ಯಾನದಲ್ಲಿಯೂ ಕೆಲವು ಟೀಕಾಕಾರರು ಎಡವಿದ್ದಾರೆ.

'ಗಂಗೆ'ಯೆಂಬ ಶಬ್ದ 'ಪ್ರವಾಹ'ವೆಂಬ ಮುಖ್ಯಾರ್ಥದಲ್ಲಿ ಬಾಧಿತವಾಗುವ ಕಾರಣ ಹೇಗೆ 'ತೀರ'ವೆಂಬರ್ಥವನ್ನು ಲಕ್ಷಣೆಯಿಂದ ಬೋಧಿಸುವುದೋ ಹಾಗೆಯೇ 'ತೀರ'ವೂ ಸಹ ತನ್ನ ಮುಖ್ಯಾರ್ಥದಲ್ಲಿ ಬಾಧಿತವಾಗುತ್ತಿದ್ದರೆ ಮಾತ್ರ ಆ ಪ್ರಯೋಜನವನ್ನು (ಪಾವನತ್ವ, ಇತ್ಯಾದಿ) ಲಕ್ಷಿಸುವುದೆನ್ನಲು ಬರುತ್ತಿತ್ತು. ಆದರೆ ಮೊದಲನೆಯದಾಗಿ ತೀರ ಗಂಗಾಶಬ್ದದ ಮುಖ್ಯಾರ್ಥವೇ ಅಲ್ಲ. ಎರಡನೆಯದಾಗಿ ಅದರಲ್ಲಿ ಬಾಧೆಗೂ ಅವಕಾಶವಿಲ್ಲ. ಮೂರನೆಯದಾಗಿ ಗಂಗಾಶಬ್ದದಿಂದ ಪ್ರತೀತ ವಾಗುವ ತೀರಕ್ಕೂ ಅದರ ಲಕ್ಷ್ಯಾರ್ಥವೆನ್ನಬೇಕೆನ್ನುತ್ತಿರುವ ಪಾವನತ್ವ ಇತ್ಯಾದಿ ಗಳಿಗೂ ಸಂಬಂಧವೇ ಇಲ್ಲ. ನಾಲ್ಕನೆಯದಾಗಿ, ವಸ್ತುತಃ ಪ್ರಯೋಜನವಾಗಿರುವು ದನ್ನೇ ಲಕ್ಷ್ಯವೆನ್ನಲು ಮತ್ತೊಂದು ಪ್ರಯೋಜನವಾವುದೂ ಇಲ್ಲ. ಕಡೆಯದಾಗಿ 'ಗಂಗಾ'ಶಬ್ದ ತಟವನ್ನು ಹೇಗೆ ನೇರವಾಗಿ ಬೋಧಿಸಲಾರದೋ ಹಾಗೆ ಪ್ರಯೋಜನ ವನ್ನು ಬೋಧಿಸಲು ಅಸಮರ್ಥವಾಗಿಲ್ಲ.

**ಏವಮಪ್ಯನವಸ್ಥಾ ಸ್ಯಾದ್ ಯಾ ಮೂಲಕ್ಷಯಕಾರಿಣೀ ॥ ೧೨*ab* ॥**

ಹೀಗಾಗುವುದಾದರೆ ಮೂಲವನ್ನೇ ನಾಶಮಾಡುವ ಅನವಸ್ಥೆಯೊದಗೀತು. ಪ್ರಯೋಜನವೂ ಲಕ್ಷಣಾಗಮ್ಯವೆನ್ನುವುದಾದರೆ ಅದಕ್ಕೆ ಇನ್ನೊಂದು ಪ್ರಯೋಜನ, ಆ ಪ್ರಯೋಜನಕ್ಕೆ ಮತ್ತೊಂದು ಪ್ರಯೋಜನ, ಹೀಗೆ ಕೊನೆಯಿಲ್ಲದೆ ಕಲ್ಪಿಸುತ್ತಾ ಹೋಗುವ ಪ್ರಸಂಗವೊದಗಿ ಪ್ರಕೃತದ ಪ್ರತೀತಿಯೇ ತಪ್ಪಿಹೋದೀತು.

ಹಾಗಲ್ಲ; ಪಾವನತ್ವ ಮುಂತಾದ ಧರ್ಮಗಳಿಂದೊಡಗೂಡಿದ ತೀರವೇ ಲಕ್ಷ್ಯಾರ್ಥ; 'ಗಂಗಾತೀರದಲ್ಲಿ ಹಳ್ಳಿ' ಎಂದು ಹೇಳಿದಾಗ ಬರುವ ಅರ್ಥಕ್ಕಿಂತಲೂ ಹೆಚ್ಚಾಗಿರುವ ಅತಿಶಯದ ಪ್ರತೀತಿಯೇ ಪ್ರಯೋಜನ. ಆದುದರಿಂದ ಪ್ರಯೋಜನ ಸಹಿತವಾದುದರಲ್ಲಿಯೇ ಲಕ್ಷಣೆಯನ್ನಲು ಬರುತ್ತದೆ. ಇನ್ನು 'ವ್ಯಂಜನೆಯಿಂದಾಗ ಬೇಕಾದುದೇನು?'[72] ಎಂದು ಪೂರ್ವಪಕ್ಷದವರು ಹೇಳಬಹುದು. ಅದಕ್ಕೋಸ್ಕರ ಇದನ್ನು ಹೇಳುತ್ತಾನೆ—

**ಪ್ರಯೋಜನೇನ ಸಹಿತಂ ಲಕ್ಷಣೀಯಂ ನ ಯುಜ್ಯತೇ ॥ ೧೨*cd* ॥**

---

[72] ಇದುವರೆಗೆ ನಿರಾಕರಿಸಿದುದನ್ನು 'ದ್ವಿತೀಯಲಕ್ಷಣಾವಾದ'ವೆಂದೂ ಇದನ್ನು 'ವಿಶಿಷ್ಟ ಲಕ್ಷಣಾವಾದ'ವೆಂದೂ ಹೇಳಬಹುದು. ದ್ವಿತೀಯಲಕ್ಷಣಾವಾದದಲ್ಲಿ ತೀರ ಪ್ರಥಮಲಕ್ಷಣೆಯ ವಿಷಯವೆಂದೂ ಪ್ರಯೋಜನ ದ್ವಿತೀಯಲಕ್ಷಣೆಯ ವಿಷಯವೆಂದೂ ಹೇಳಿದರೆ, ಈ ಹೊಸವಾದದಲ್ಲಿ ತೀರ ಮತ್ತು ಪ್ರಯೋಜನ ಎರಡೂ ಒಟ್ಟಿಗೆ ಪ್ರಥಮಲಕ್ಷಣೆಯಿಂದಲೇ ಪ್ರತೀತವಾಗುವುದೆಂದು ಹೇಳಲ್ಪಡುತ್ತದೆ.

ಪ್ರಯೋಜನದಿಂದ ಕೂಡಿದುದೇ ಲಕ್ಷಣೆಗೆ ವಿಷಯವೆನ್ನುವುದು ಸರಿಯಲ್ಲ. ಏಕೆಂದರೆ—

ಜ್ಞಾನಸ್ಯ ವಿಷಯೋಹ್ಯನ್ಯಃ ಫಲಮನ್ಯದುದಾಹೃತಮ್ ‖ ೧೩*ab* ‖

ಜ್ಞಾನದ ವಿಷಯವೇ ಬೇರೆ; ಫಲವೇ ಬೇರೆ ಎಂದು ನಿರ್ಣಯಿಸಿದ್ದಾರೆ.[73]

ಪ್ರತ್ಯಕ್ಷವೇ ಮುಂತಾದ ಜ್ಞಾನಕ್ಕೆ 'ಕರಿಯದು' ಮುಂತಾದುದು ವಿಷಯ; ಅದರ ಫಲ ಮಾತ್ರ (ಜ್ಞೇಯಧರ್ಮವಾದ) ಪ್ರಕಟತೆ ಅಥವಾ (ಜ್ಞಾತೃಧರ್ಮವಾದ) ಸಂವೇದನ.[74]

ವಿಶಿಷ್ಟೇ ಲಕ್ಷಣಾ ನೈವಂ ‖ ೧೩*c* ‖

(ಪ್ರಯೋಜನ) ವಿಶಿಷ್ಟವಾದುದನ್ನು ಲಕ್ಷಣೆ ಬೋಧಿಸಲಾರದು.

ಮೇಲೆ ಹೇಳಿದ್ದರಿಂದಲೇ ಇದರ ವಿವರಣೆಯಾದಂತಾಗಿದೆ.

ವಿಶೇಷಾಃ ಸ್ಯುಸ್ತು ಲಕ್ಷಿತೇ ‖ ೧೩*d* ‖

ಲಕ್ಷ್ಯಾರ್ಥದಲ್ಲಿ (ವ್ಯಾಪಾರಾಂತರಗಮ್ಯವಾದ) ವಿಶೇಷಗಳುಂಟಾಗಬಹುದು; ಅಷ್ಟೆ.

'ತೀರ'ವೇ ಮುಂತಾದ ಲಕ್ಷ್ಯಾರ್ಥದಲ್ಲಿ 'ಪಾವನತ್ವ' ಮುಂತಾದ ವಿಶೇಷಗಳು ಇರಬಹುದು. ಆದರೆ ಅವು ಅಭಿಧೆ, ತಾತ್ಪರ್ಯ, ಲಕ್ಷಣೆ ಈ ಮೂರು ವ್ಯಾಪಾರ

---

[73] 'ಜ್ಞಾನ'ವೆಂದರೆ ಪ್ರತ್ಯಕ್ಷ, ಅನುಮಾನ, ಉಪಮಾನ, ಶಬ್ದ ಮುಂತಾದ ಪ್ರಮಾಣಗಳಿಂದ ಬರುವ ಪ್ರತೀತಿ. ಪ್ರತ್ಯಕ್ಷಜ್ಞಾನಕ್ಕೆ ವಸ್ತುಗಳು ವಿಷಯ, ಅದರ ಪ್ರಯೋಜನವೂ ವಸ್ತುವೇ ಅಲ್ಲ. ವಸ್ತುವಿನಲ್ಲಿ ಅಥವಾ ಜ್ಞಾತೃವಿನಲ್ಲಿ ಉಂಟಾಗುವ ಧರ್ಮ. ಹಾಗೆಯೇ ಗಂಗಾತೀರವೆಂಬುದು ವಸ್ತು; ಶೀತತ್ವವೆಂಬುದು ಧರ್ಮ. ಇವೆರಡೂ ಒಂದೇ ವ್ಯಾಪಾರದಿಂದ ಬೋಧ್ಯವಾಗಲಾರವು, ಬೇರೆಬೇರೆಯಾದ ಕಾರಣ. ಜ್ಞಾನದ ವಿಷಯ ಮತ್ತು ಫಲಗಳು ಬೇರೆಬೇರೆಯೆಂಬುದನ್ನು ಎಲ್ಲ ದಾರ್ಶನಿಕರೂ ಒಪ್ಪುತ್ತಾರೆ.

[74] ಭಾಟ್ಟಮೀಮಾಂಸಕರ ಪ್ರಕಾರ ಪ್ರತ್ಯಕ್ಷಜ್ಞಾನದ ಫಲ ಜ್ಞೇಯವಸ್ತುವಿನ ಧರ್ಮವಾದ 'ಪ್ರಕಟತೆ'; ಒಂದು ವಸ್ತುವನ್ನು ನಾವು ನೋಡಿದರೆ ಆ ವಸ್ತುವಿನಲ್ಲಿ 'ಪ್ರಕಟತೆ'ಯೆಂಬ ಧರ್ಮವು ಉತ್ಪನ್ನವಾಗುವುದೆಂದು ಅವರ ಮತ. ಇದೇ ಆ ಪ್ರತ್ಯಕ್ಷಜ್ಞಾನದ ಫಲ ಅಥವಾ ಪ್ರಯೋಜನ. ಆದರೆ ಪ್ರಾಭಾಕರ ಮೀಮಾಂಸಕರ ಮತ್ತು ತಾರ್ಕಿಕರ ಪ್ರಕಾರ ಜ್ಞಾನದಿಂದ ಜ್ಞೇಯವಸ್ತುವಿನಲ್ಲಿ ಧರ್ಮವಾವುದೂ ಬರುವುದಿಲ್ಲ; ಜ್ಞಾತೃವಿನಲ್ಲಿ ಮಾತ್ರ 'ಸಂವೇದನ' ಅಥವಾ 'ಅನುವ್ಯವಸಾಯ'ವೆಂಬ ಧರ್ಮವು ಹುಟ್ಟುವುದು. ಈ ಎರಡು ಸಿದ್ಧಾಂತಗಳಲ್ಲೂ ಜ್ಞಾನದ ವಿಷಯವೇ ಬೇರೆ ಪ್ರಯೋಜನವೇ ಬೇರೆ ಎಂಬ ತತ್ತ್ವ ಮಾತ್ರ ಸಮಾನ. ಮಮ್ಮಟನು ಇಲ್ಲಿ ಎರಡು ಸಿದ್ಧಾಂತಗಳಿಗೂ ಅನ್ವಯಿಸಿ ವಿವರಿಸುತ್ತಿದ್ದಾನೆ.

ಗಳಿಗಿಂತಲೂ ಬೇರೆಯಾದ ಮತ್ತೊಂದು ವ್ಯಾಪಾರದಿಂದ ಮಾತ್ರ ಗಮ್ಯ. ಆ ವ್ಯಾಪಾರವನ್ನು ವ್ಯಂಜನ, ಧ್ವನನ, ದ್ಯೋತನ ಮುಂತಾದ ಪದಗಳಿಂದ ಹೆಸರಿಸಬಹುದು. ಅದುಂಟೆಂದು ಅವಶ್ಯವಾಗಿ ಅಂಗೀಕರಿಸಲೇಬೇಕು.

ಇಲ್ಲಿಯ ವರೆಗೆ ಲಕ್ಷಣಾಮೂಲವಾದ ವ್ಯಂಜಕತ್ವವನ್ನು ಹೇಳಲಾಯಿತು ಇನ್ನು ಅಭಿಧಾಮೂಲವಾದುದನ್ನು ವಿವರಿಸುತ್ತಾನೆ—

ಅನೇಕಾರ್ಥಸ್ಯ ಶಬ್ದಸ್ಯ ವಾಚಕತ್ವೇ ನಿಯಂತ್ರಿತೇ ।
ಸಂಯೋಗಾದ್ಯೈರವಾಚ್ಯಾರ್ಥಧೀಕೃದ್ ವ್ಯಾಪೃತಿರಂಜನಮ್ ॥೧೪॥

ನಾನಾರ್ಥಗಳನ್ನುಳ್ಳ ಶಬ್ದದ ವಾಚಕತ್ವಶಕ್ತಿ ಒಂದರ್ಥದಲ್ಲಿ ಮಾತ್ರ ನಿಯಮಿತವಾದ ಮೇಲೆ 'ಸಂಯೋಗ' ಮುಂತಾದುವುಗಳ ಪ್ರಭಾವದಿಂದ ಮತ್ತೊಂದರ್ಥ ಸ್ಫುರಿಸುತ್ತಿದ್ದರೆ ಅಲ್ಲಿ ವ್ಯಾಪಾರ ವಾಚಕತ್ವವಲ್ಲ; ವ್ಯಂಜನೆಯೇ.

"'ಸಂಯೋಗ', 'ವಿಯೋಗ', 'ಸಾಹಚರ್ಯ', 'ವಿರೋಧ', 'ಅರ್ಥ', 'ಪ್ರಕರಣ', 'ಲಿಂಗ', ಶಬ್ದಾಂತರದ 'ಸನ್ನಿಧಿ', 'ಸಾಮರ್ಥ್ಯ,' 'ಔಚಿತ್ಯ', 'ದೇಶ', 'ಕಾಲ', 'ವ್ಯಕ್ತಿ', 'ಸ್ವರ'—ಇವೇ ಮುಂತಾದುವು ಶಬ್ದದ ಅರ್ಥ ಸಂದಿಗ್ಧವಾದಾಗ ಸ್ಪಷ್ಟತೆಯನ್ನುಂಟುಮಾಡಲು ಸಹಾಯಕವಾಗುವುವು"[75] ಎಂದು ಹೇಳಿರುವ ಪ್ರಕಾರ—

'ಶಂಖಚಕ್ರಗಳನ್ನುಳ್ಳ ಹರಿ', 'ಶಂಖಚಕ್ರಗಳಿಲ್ಲದ ಹರಿ' ಎಂಬಲ್ಲಿ ಹರಿಯೆಂದರೆ[76] ಶ್ರೀಮನ್ನಾರಾಯಣನೇ; 'ರಾಮಲಕ್ಷ್ಮಣರು' ಎಂಬಲ್ಲಿ ದಶರಥನ ಮಕ್ಕಳೇ; 'ಅವರದು ರಾಮಾರ್ಜುನರ ಗತಿಯಾಯಿತು' ಎಂಬಲ್ಲಿ ಪರಶುರಾಮ ಕಾರ್ತವೀರ್ಯಾರ್ಜುನರೇ; 'ಭವನಾಶನನಾದ ಸ್ಥಾಣುವನ್ನು ಭಜಿಸು' ಎಂಬಲ್ಲಿ ಶಿವನೇ; 'ದೇವನಿಗೆ ಎಲ್ಲವೂ ವಿದಿತ' ಎಂಬಲ್ಲಿ ದೇವನೆಂದರೆ ನೀನು; 'ಮಕರಧ್ವಜನು ಕುಪಿತನಾಗಿರುವನು' ಎಂಬಲ್ಲಿ ಕಾಮ; 'ಪುರವೈರಿಯಾದ ದೇವ'ನೆಂದರೆ ಶಂಭು; 'ಕೋಗಿಲೆ ಮಧುವಿನಿಂದ ಮತ್ತವಾಗಿದೆ' ಎಂದರೆ ವಸಂತದಲ್ಲಿ; 'ಕಾಂತಾಮುಖ ರಕ್ಷಿಸಲಿ' ಎಂದರೆ ಸಾಮ್ಮುಖ್ಯ; 'ರಾಜಧಾನಿಯಲ್ಲಿ ಪರಮೇಶ್ವರನು ರಾಜಿಸುತ್ತಾನೆ' ಎಂದರೆ ರಾಜ; ಹಗಲು 'ಚಿತ್ರಭಾನು ಬೆಳಗುತ್ತಾನೆ' ಎಂದರೆ ಸೂರ್ಯ; ಅದನ್ನೇ ರಾತ್ರಿ ಹೇಳಿದರೆ ಅಗ್ನಿ; ಮಿತ್ರ ಬೆಳಗುತ್ತಾನೆ ('ಮಿತ್ರ' ಎಂಬುದು ನಪುಂಸಕ

---

[75] ಭರ್ತೃಹರಿಯ ವಾಕ್ಯಪದೀಯ, II, ೭೩೧. (ಕಾಶೀ ಸಂಸ್ಕೃತ ಗ್ರಂಥಮಾಲೆ).

[76] 'ಹರಿ'ಯ ನಾನಾರ್ಥಗಳಲ್ಲಿ ಇಂದ್ರ, ಯಮ, ಸೂರ್ಯ, ಚಂದ್ರ, ಸಿಂಹ, ಕುದುರೆ, ಕೋತಿ, ಹಾವು, ಕಪ್ಪೆ, ಎಲ್ಲವೂ ಬರುತ್ತವೆ.

ಲಿಂಗದಲ್ಲಿ ಪ್ರಯುಕ್ತ) ಎಂದರೆ ಸ್ನೇಹಿತ; ಅದೇ ಪುಲ್ಲಿಂಗವಿದ್ದಾಗ 'ಸೂರ್ಯ'. ಸ್ವರವು 'ಇಂದ್ರಶತ್ರು' ಮುಂತಾದ ವೇದಪ್ರಯೋಗಗಳಲ್ಲಿ ಮಾತ್ರ ವಿಶೇಷಾರ್ಥ ವನ್ನು ತರುತ್ತದೆ; ಕಾವ್ಯದಲ್ಲಲ್ಲ. 'ಇವೇ ಮುಂತಾದುವು' ಎನ್ನುವುದರಿಂದ—

ಏದ್ದಹಮೇತ್ತತ್ಥಣಿಆ ಏದ್ದಹಮೇತ್ತೇಹಿಂ ಅಚ್ಛಿವತ್ತೇಹಿಂ ।
ಏದ್ದಹಮೇತ್ತಾವತ್ಥಾ ಏದ್ದಹಮೇತ್ತೇಹಿಂ ದಿಅಏಹಿಂ ॥

ಇನಿತಿನಿತು ಪಿರಿಯ ಮೊಲೆಯವ-
ಳಿನಿತಿನಿತೆಸಲಕ್ಷಿಪತ್ರಮವಳಾನನದೊಳ್ ।
ಇನಿತೀ ದೊರೆಯಾದಳ್ ಮೇಣ್
ಇನಿತೀ ದಿವಸಂಗಳಲ್ಲಿ ಸುಡಿಯಲ್ಕಾರೆಂ ॥

ಮುಂತಾದೆಡೆಗಳಲ್ಲಿ ಅಭಿನಯಾದಿಗಳೂ ಅರ್ಥದ್ಯೋತಕವಾಗುತ್ತವೆ.

ಹೀಗೆ ಸಂಯೋಗಾದಿಗಳು ಶಬ್ದದ ಇತರಾರ್ಥ ವಾಚಕತ್ವವನ್ನು ನಿವಾರಿ ಸಿದ್ದರೂ ನಾನಾರ್ಥಕ ಶಬ್ದ ಒಮ್ಮೊಮ್ಮೆ ಅರ್ಥಾಂತರವನ್ನು ಬೋಧಿಸುತ್ತಿದ್ದರೆ ಅಲ್ಲಿ ಅಭಿಧೆಯೆನ್ನಲಾಗದು, ಅದರ ಶಕ್ತಿ ನಿಯಮಿತವಾಗಿಬಿಟ್ಟಿರುವ ಪ್ರಯುಕ್ತ. ಅಲ್ಲಿ ಲಕ್ಷಣೆಗೂ ಅವಕಾಶವಿಲ್ಲ, ಮುಖ್ಯಾರ್ಥಬಾಧೆಯೇ ಮುಂತಾದ ನಿಮಿತ್ತಗಳಿಲ್ಲದಿರು ವುದರಿಂದ. ಆದರೆ ವ್ಯಂಜನೆಯೇ ಶಬ್ದದ ವ್ಯಾಪಾರ. ಉದಾಹರಣೆ—

ಭದ್ರಾತ್ಮನೋ ದುರಧಿರೋಹತನೋರ್ವಿಶಾಲ- ॥
ವಂಶೋನ್ನತೇಃ ಕೃತಶಿಲೀಮುಖಸಂಗ್ರಹಸ್ಯ ।
ಯಸ್ಯಾನುಪಪ್ಲುತಗತೇಃ ಪರವಾರಣಸ್ಯ
ದಾನಾಂಬುಸೇಕಸುಭಗಃ ಸತತಂ ಕರೋಽಭೂತ್ ॥

ಭದ್ರಾತ್ಮನುಂ ದುರಧಿರೂಢನುಮಾ ವಿಶಾಲ-
ವಂಶೋನ್ನತಂ ಕೃತಶಿಲೀಮುಖಸಂಗ್ರಹಂ ಮೇಣ್ ।
ನಿತ್ಯಾನುಪಪ್ಲುತಗತಂ ಪರವಾರಣಂ ತಾಂ
ದಾನಾಂಬುವಿಂದೆ ಸುಭಗಂ ಕರಮಾಯ್ತುವಂಗಂ[77]

---

[77] ಇದು ರಾಜನ ಪ್ರಶಂಸಾಪರವಾದ ಶ್ಲೋಕ. ಅವನು ದಾನವೀರನೆಂದು ವರ್ಣಿಸುವಾಗಲೇ ಶ್ಲೇಷೆಯಿಂದ ಶಬ್ದಗಳು ಆನೆಗೂ ಅನ್ವಯಿಸುತ್ತವೆ. ಆನೆ ಪ್ರಸ್ತುತವಲ್ಲದಿದ್ದರೂ ರಾಜನು ಆನೆಗೆ ಸಮಾನವೆಂಬುದು ವ್ಯಂಜನಾವ್ಯಾಪಾರ ಗಮ್ಯ. ರಾಜನ ದಾನೋದಕ, ಆನೆಯ ಮದೋದಕ, ಕರ—ಸೊಂಡಿಲುಗಳಂತೆ ಭದ್ರಸ್ವರೂಪ, ದುರಧಿರೋಹ—ಶರೀರ, ವಂಶೋನ್ನತಿ, ಶಿಲೀಮುಖ (ಬಿಲ್ಲು ಮತ್ತು ದುಂಬಿ) ಸಂಗ್ರಹ, ಅಪ್ರತಿಹತಗಮನ, ಪರವಾರಣತ್ವ ಮುಂತಾದ ವಿಶೇಷಣಗಳೂ ಎರಡು ಕಡೆಗೂ ಅನ್ವಯಿಸುವಂತಿವೆ. ಹೋಲಿಸಿ—ಕನ್ನಡ ಧ್ವನ್ಯಾಲೋಕ, ಪುಟ ೨೬-೪೯

ತದ್ಯುಕ್ತೋ ವ್ಯಂಜಕಶ್ಶಬ್ದಃ ॥ ೧೫*a* ॥

ಅದರಿಂದ ಕೂಡಿದ ಶಬ್ದ ವ್ಯಂಜಕ.
ಅದರಿಂದ ಎಂದರೆ ವ್ಯಂಜನಾವ್ಯಾಪಾರದಿಂದ.

ಯತ್ಸೋಽರ್ಥಾಂತರಯುಕ್ ತಥಾ । ೧೫*b* ।
ಅರ್ಥೋಽಪಿ ವ್ಯಂಜಕಸ್ತತ್ರ ಸಹಕಾರಿತಯಾ ಮತಃ ॥ ೧೫*cd* ॥

ಏಕೆಂದರೆ ಅದು (=ಶಬ್ದವು) ಅರ್ಥಾಂತರದೊಡನೆ ಕೂಡಿರುತ್ತದಾಗಿ ಹಾಗೆನಿಸುತ್ತದೆ. ಅರ್ಥವೂ ಕೂಡ (ಧ್ವನಿಸುವುದರಲ್ಲಿ) ಶಬ್ದಕ್ಕೆ ಸಹಕಾರಿಯಾಗುವುದರಿಂದ ಕಾವ್ಯದಲ್ಲಿ ವ್ಯಂಜಕವೆಂದೊಪ್ಪಲಾಗಿದೆ.

ಇಲ್ಲಿಗೆ ಕಾವ್ಯಪ್ರಕಾಶದಲ್ಲಿ 'ಶಬ್ದಾರ್ಥ ಸ್ವರೂಪ ನಿರ್ಣಯ' ಎಂಬ
ಎರಡನೆಯ ಉಲ್ಲಾಸ ಮುಗಿದುದು.

ನುತ ಶಬ್ದಾರ್ಥಂಗಳ ಸಂ-
ಗತಿಯಂ ನಿಷ್ಕೃಷ್ಟವಾಗಿ ಮಮ್ಮಟನೊರೆದಂ ।
ಮತಿವಂತರ್ ಕನ್ನಡಿಗರ್
ಹಿತಿಕರಿಸುಗೆ ಕಾವ್ಯತತ್ವನಿರ್ಣಯರಸಿಕರ್ ॥

## ಮೂರನೆಯ ಉಲ್ಲಾಸ

ಅರ್ಥಾಃ ಪ್ರೋಕ್ತಾಃ ಪುರಾ ತೇಷಾಮ್ ‖೧ *a*‖

ಅವುಗಳ (=ಶಬ್ದಗಳ) ಅರ್ಥಗಳನ್ನು ಹಿಂದೆ ಹೇಳಲಾಯಿತು.[1] ಅರ್ಥಗಳೆಂದರೆ ವಾಚ್ಯ, ಲಕ್ಷ್ಯ ಮತ್ತು ವ್ಯಂಗ್ಯವೆಂಬವು. 'ಅವುಗಳ' ಎಂದರೆ ವಾಚಕ, ಲಾಕ್ಷಣಿಕ ಮತ್ತು ವ್ಯಂಜಕಗಳ ಎಂದಭಿಪ್ರಾಯ.

ಅರ್ಥವ್ಯಂಜಕತೋಚ್ಯತೇ ‖೧*b*‖

ಈಗ ಅರ್ಥಕ್ಕಿರುವ ವ್ಯಂಜಕತ್ವವನ್ನು ವಿವರಿಸಲಾಗುತ್ತದೆ.[2] ಅದೆಂತೆಂದರೆ—

ವಕ್ತೃಬೋದ್ಧವ್ಯಕಾಕೂನಾಂ ವಾಕ್ಯವಾಚ್ಯಾನ್ಯಸನ್ನಿಧೇಃ ‖೧ *c d*‖

ಪ್ರಸ್ತಾವ ದೇಶ ಕಾಲಾದೇಃ ವೈಶಿಷ್ಟ್ಯಾತ್ ಪ್ರತಿಭಾಜುಷಾಮ್ ।
ಯೋಽರ್ಥಸ್ಯಾನ್ಯಾರ್ಥಧೀಹೇತುಃ ವ್ಯಾಪಾರೋ ವ್ಯಕ್ತಿರೇವ ಸಾ ‖೨‖

ಮಾತಾಡುವವ, ಕೇಳತಕ್ಕವ, ಕಾಕು,[3] ವಾಕ್ಯ, ವಾಚ್ಯವಿಷಯ, ಅನ್ಯರ ಸನ್ನಿಧಿ,[4] ಪ್ರಸ್ತಾವ, ದೇಶ, ಕಾಲ, ಇತ್ಯಾದಿಗಳ ವೈಶಿಷ್ಟ್ಯದಿಂದ ಪ್ರತಿಭಾ

---

[1] 'ಹಿಂದೆ' ಎಂದರೆ ಎರಡನೆಯ ಉಲ್ಲಾಸದಲ್ಲಿ. ಈ ವಾಕ್ಯವು ಹಿಂದಿನ ಉಲ್ಲಾಸಕ್ಕೂ ಈ ಉಲ್ಲಾಸಕ್ಕೂ ಇರುವ 'ಸಂಗತಿ'ಯನ್ನು ಸಮನ್ವಯಮಾಡಿ ತೋರಿಸುತ್ತದೆ.

[2] ಮಾಣಿಕ್ಯಚಂದ್ರನು ಕಾರಿಕೆಯ ಪ್ರಥಮಪಾದದಲ್ಲಿರುವ 'ತೇಷಾಮ್' ಎಂಬುದಕ್ಕೆ ದ್ವಿತೀಯಪಾದದೊಡನೆ ಅನ್ವಯ ಹೇಳುತ್ತಾನೆ.

ಶಬ್ದವ್ಯಂಜಕತೆಗಿಂತ ಭಿನ್ನವಾದುದೇ ಅರ್ಥವ್ಯಂಜಕತೆ. ಸ್ವಪ್ರಯೋಜನವಾದ ಲಾಕ್ಷಣಿಕ ಶಬ್ದಪ್ರಯೋಗವೆಲ್ಲ ಲಕ್ಷಣಾಮೂಲ ವ್ಯಂಜನೆ; ಶಬ್ದಗಳ ಅನೇಕಾರ್ಥ ಬಲದಿಂದ ಬರುವ ವ್ಯಂಜನೆಯೆಲ್ಲ ಅಭಿಧಾಮೂಲ ವ್ಯಂಜನೆ. ಇವೆರಡೂ ಶಬ್ದವ್ಯಂಜಕತೆಯ ಪ್ರಪಂಚದಲ್ಲಿ ಬರುತ್ತವೆ. ಇವೆರಡೂ ಅಲ್ಲದ ವ್ಯಂಜಕತ್ವವೇ ಅರ್ಥವ್ಯಂಜಕತೆ. ಶಬ್ದವ್ಯಂಜಕತೆಯಲ್ಲಿ ಆ ಶಬ್ದವನ್ನು ತೆಗೆದು ಸಮಾನಾರ್ಥಕ ಶಬ್ದವನ್ನು ಇಟ್ಟರೆ ವ್ಯಂಜಕತ್ವ ಮಾಯವಾಗುತ್ತದೆ. ಅರ್ಥವ್ಯಂಜಕತೆಯಲ್ಲಿ ಮಾತ್ರ ಉಳಿಯುತ್ತದೆ.

[3] ಶೋಕ, ಭಯ, ಮುಂತಾದ ಚಿತ್ತೋದ್ವೇಗಗಳಿಂದ ಮಾತಾಡುವಾಗ ಉಂಟಾಗುವ ಧ್ವನಿ ವಿಕಾರವೇ 'ಕಾಕು.'

[4] ಜತೆಯಲ್ಲಿ ಇರುವಿಕೆ.

ವಂತರಿಗೆ[5] ಒಂದರ್ಥದಿಂದ ಮತ್ತೊಂದರ್ಥವು ಸ್ಫುರಿಸುತ್ತಿದ್ದರೆ, ಅದಕ್ಕೆ ಕಾರಣ ವಾದ ವ್ಯಾಪಾರವು ವ್ಯಂಜನೆಯೇ ಸರಿ.[6]

'ಬೋದ್ಧವ್ಯ' ಎಂದರೆ ಯಾರನ್ನು ಕುರಿತು ವಕ್ತೃವು ಹೇಳುತ್ತಾನೋ ಅವನು. 'ಕಾಕು' ಎಂದರೆ ಧ್ವನಿವಿಕಾರ. 'ಪ್ರಸ್ತಾವ'ವೆಂದರೆ ಸಂದರ್ಭ. 'ಒಂದರ್ಥದಿಂದ' ಎನ್ನುವಾಗ ಅರ್ಥವೆಂದರೆ ವಾಚ್ಯ, ಲಕ್ಷ್ಯ, ವ್ಯಂಗ್ಯಗಳಲ್ಲೊಂದೆಂದು ಭಾವ.[7] ಈಗ ಕ್ರಮವಾಗಿ[8] ಉದಾಹರಣೆಗಳನ್ನು ಕೊಡಲಾಗುತ್ತದೆ :—

**ಅಇ ಪಿಹುಲಂ ಜಲಕುಂಭಂ ಘೇತ್ತೂಣ ಸಮಾಗದಮ್ಹಿ ಸಹಿ ತುರಿಅಮ್ ।**
**ಸಮಸೇಅಸಲಿಲಣೀಸಾಸಣೀಸಹಾ ವೀಸಮಾಮಿ ಖಣಮ್ ॥**

ಕೆಳದಿಯೆ, ಬಹುಭಾರದ ಕೊಡ-
ದೊಳ್ ನೀರಂ ಪೊತ್ತು ಬಂದೆನಾತುರದಿಂದಂ ।
ಬಳಲಿಕೆಯಿಂ ಬೆಮರ್ವುದು ಮೈ,
ಬಳೆವುದಿಸಿರ್, ವಿಶ್ರಮಿಪ್ಪೆನಾನೊಂದು ಚಣಂ ॥[9]

ಇಲ್ಲಿ ಚೌರ್ಯರತವನ್ನು ಮರೆಮಾಚುತ್ತಿರುವುದು ವ್ಯಂಗ್ಯ.[10]

---

[5] ಕಾವ್ಯರಸಾಸ್ವಾದದ ಸಂಸ್ಕಾರವುಳ್ಳವರಿಗೆ ಮಾತ್ರ; ಜೆಳ್ಳಕ್ಕರಿಗರಿಗೂ ಶುಷ್ಕವೈಯಾಕರಣಿಗಳಿಗೂ ವೇದಾಭ್ಯಾಸಜಡರಿಗೂ ಅಲ್ಲ. ಹೋಲಿಸಿ—

"ಸವಾಸನಾನಾಂ ಸಭ್ಯಾನಾಂ ರಸಸ್ಯಾನುಭವೋ ಭವೇತ್ ।
ನಿರ್ವಾಸನಾಸ್ತು ರಂಗಾಂತರ್ವೇಶ್ಮಕುಡ್ಯಾಶ್ಮಸನ್ನಿಭಾಃ" ॥

—ಸಾಹಿತ್ಯದರ್ಪಣದಲ್ಲಿ ಉದಾಹೃತ.

[6] ಅರ್ಥಕ್ಕೆ ಅರ್ಥಾಂತರವನ್ನು ಬೋಧಿಸುವ ಶಕ್ತಿಯು ವ್ಯಂಜನೆಯೇ ಎಂಬುದನ್ನು ಹಿಂದಿನ ಉಲ್ಲಾಸದಲ್ಲಿ ಉಪಪಾದಿಸಿದೆ. ತಾತ್ಪರ್ಯ, ಅರ್ಥಾಪತ್ತಿ, ಅನುಮಾನಗಳಿಗಿಂತ ಅದು ಭಿನ್ನವೆಂಬುದು ಧ್ವನಿವಾದಿಗಳ ಸಿದ್ಧಾಂತ.

[7] ಈ ಮೂರರಲ್ಲಿ ವಾಚ್ಯಾರ್ಥದ ವ್ಯಂಜಕತ್ವವನ್ನು ಮಾತ್ರ ಮಮ್ಮಟನು ವಿವರವಾಗಿ ಉದಾಹರಿಸಿದ್ದಾನೆ. ಅದರಂತೆಯೇ ಲಕ್ಷ್ಯಾರ್ಥ, ವ್ಯಂಗ್ಯಾರ್ಥಗಳ ವ್ಯಂಜಕತ್ವವನ್ನೂ ವಾಚಕರೇ ಊಹಿಸಿಕೊಳ್ಳಬಹುದೆಂದು ಕಡೆಗೆ ತಿಳಿಸುತ್ತಾನೆ.

[8] ಅರ್ಥವ್ಯಂಜಕತೆಯ ಸಾಧಕಗಳಲ್ಲಿ ಒಂದೊಂದನ್ನೂ ಕಾರಿಕೆಯಲ್ಲಿ ಹೇಳಿರುವ ಅನುಕ್ರಮದಲ್ಲಿಯೇ ಉದಾಹರಿಸಲಾಗುತ್ತದೆ.

[9] ಇದು ವಕ್ತೃವೈಶಿಷ್ಟ್ಯಕ್ಕೆ ಉದಾಹರಣೆ.

[10] ಈ ವ್ಯಂಗ್ಯಾರ್ಥಕ್ಕೆ, ವಕ್ತೃವು ಜಾರಿಣಿಯೆಂಬ ವೈಶಿಷ್ಟ್ಯವೇ ಕಾರಣ. ಅವಳು ಪತಿವ್ರತೆಯೇ ಆಗಿದ್ದ ಪಕ್ಷಕ್ಕೆ ವ್ಯಂಗ್ಯಾರ್ಥವೇನೂ ಹೊರಡುತ್ತಿರಲಿಲ್ಲ.

ಓಣ್ಣಿದ್ದಂ ದೋಬ್ಬಲ್ಲಂ ಚಿಂತಾ ಅಲಸತ್ತಣಂ ಸಣೀಸಸಿಅಮ್ ।
ಮಮ ಮಂದಭಾಇಣೀಏ ಕೇರಂ ಸಹಿ ತುಹವಿ ಅಹಹ ಪರಿಹವಇ ॥

ಜಾಗರಮಶಕ್ತಿ ಚಿಂತಾ-
ವೇಗಂ ನಿಡುಸುಯ್ಯ ಳಂತೆ ಬಳಲಿಕೆ ನಿನಗಂ।
ಸಂಗಡಿಸಿರ್ಪುವು ಭರದಿಂ-
ದೀಗಳ್ ತಾಮೆನ್ನ ಮಂದಭಾಗೆಯ ಕತದಿಂ ॥[11]

ಇಲ್ಲಿ ದೂತಿಯು ನಾಯಿಕೆಯ ಕಾಮುಕನನ್ನೇ ಉಪಭೋಗಿಸಿರುವಳೆಂಬುದು ವ್ಯಂಗ್ಯ.[12]

ತಥಾಭೂತಾಂ ದೃಷ್ಟ್ವಾ ನೃಪಸದಸಿ ಪಾಂಚಾಲತನಯಾಂ
ವನೇ ವ್ಯಾಧೈಃ ಸಾರ್ಧಂ ಸುಚಿರಮುಷಿತಂ ವಲ್ಕಲಧರೈಃ।
ವಿರಾಟಸ್ಯಾವಾಸೇ ಸ್ಥಿತಮನುಚಿತಾರಂಭನಿಭೃತಂ
ಗುರುಃ ಖೇದಂ ಖಿನ್ನೇ ಮಯಿ ಭಜತಿ ನಾದ್ಯಾಪಿ ಕುರುಷು ॥[13]

ರಾಜಸಭೆಯೊಳಗಂದು ಪಾಂಚಾಲನಂದನೆಯು
ಆ ತೆರದೊಳಾದುದನು ನಾಡೆ ನೋಡಿ,
ಬೇಡರೊಡನಾಡಿಯೆನೆ ಚಿರಕಾಲ ನೆಲಸಿದೆನು
ಕಾಡೊಳಗೆ ನಾರುಡೆಯನುಟ್ಟು ನಾನು ;

11 ಈ ಉಲ್ಲಾಸದುದ್ದಕ್ಕೂ ಮಮ್ಮಟನು ಜನಪದಸಾಹಿತ್ಯದಿಂದಲೇ ಹೆಚ್ಚಾಗಿ ಪ್ರಾಕೃತ ಶ್ಲೋಕಗಳನ್ನಾರಿಸುತ್ತಿರುವುದು ಗಮನಾರ್ಹ. ಈ ಪದ್ಯವು ಕೇಳುವವನ ವೈಶಿಷ್ಟ್ಯದಿಂದ ವ್ಯಂಜಕತ್ವ ಉಂಟಾಗುವುದಕ್ಕೆ ಉದಾಹರಣೆ.

12 ಇದನ್ನು ಮೊದಲನೆಯ ಉಲ್ಲಾಸದ "ನಿಶ್ಶೇಷ ಚ್ಯುತ ಚಂದನಂ' ಎಂಬ ಧ್ವನಿಕಾವ್ಯದ ಉದಾಹರಣೆಯೊಡನೆ ಹೋಲಿಸಿ. "ಧ್ವನಿ"ಕಾವ್ಯವು ಉತ್ತಮಕಾವ್ಯವೆನಿಸಲು ಶಬ್ದವ್ಯಂಜಕತೆಗಿಂತ ಅರ್ಥವ್ಯಂಜಕತೆಯೇ ಹೆಚ್ಚು ಸಾಧಕವೆಂಬುದು ನವೀನಾಲಂಕಾರಿಕರ ರಹಸ್ಯ. ಇದನ್ನರಿಯದೆ ಇಂದಿನ ಕವಿಗಳಲ್ಲಿ ಕೆಲವರು ಅರ್ಥವ್ಯಂಜಕತಾಶೂನ್ಯವಾದ, ನೇಯಶಬ್ದಭೂಯಿಷ್ಠವಾದ, ಕ್ಲಿಷ್ಟಪ್ರಯೋಗಗಳನ್ನೆಲ್ಲ ಧ್ವನಿಮಯವೆಂದು ಹೊಗಳಿಕೊಳ್ಳುವುದು ಹಾಸ್ಯಾಸ್ಪದ.

ಉದಾಹರಣೆಯಲ್ಲಿ 'ಬೋದ್ಧವ್ಯ'ಳಾದ ದೂತಿಯು ಜಾರಿಣಿಯೆಂಬ ವೈಶಿಷ್ಟ್ಯವನ್ನುಳ್ಳ ಕಾರಣ ವ್ಯಂಗ್ಯಾರ್ಥಕ್ಕವಕಾಶವಿದೆ.

13 ಭಟ್ಟನಾರಾಯಣನ ವೇಣೀಸಂಹಾರ ನಾಟಕ, I. 11. ಈ ಪದ್ಯವು ಏಳನೆಯ ಉಲ್ಲಾಸದಲ್ಲೂ ಉದಾಹೃತವಾಗಿದೆ.

ಆ ವಿರಾಟನ ಬೀಡೊಳಾಳ್ವೆಸವ ಗೈಯುತ್ತೆ,
ಮಾನವನೆ ನೀಗುತ್ತೆ, ವಾಸಗೈದೆ ;
ಅಣ್ಣಗಪ್ಪುದು ಖೇದವೆನ್ನೊಳೇ ಖಿನ್ನನೊಳು,
ಇನ್ನು ಮಾಗದು ನೋಡೆ ಕೌರವರೊಳು.[14]

ಇಲ್ಲಿ, 'ಖೇದವು ನನ್ನ ವಿಷಯದಲ್ಲಿ ಯೋಗ್ಯವಲ್ಲ, ಕೌರವರ ವಿಷಯದಲ್ಲಿಯಾದರೆ ಯೋಗ್ಯ'ವೆಂಬುದು ಕಾಕುವಿನಿಂದ[15] ವ್ಯಂಗ್ಯ. ಇಲ್ಲಿಯೂ ವಾಚ್ಯಾರ್ಥದ ಸಿದ್ಧಿಗಾಗಿಯೇ ಕಾಕುವು ಉಪಯುಕ್ತವಾಗಿದೆಯೆಂದು ತಿಳಿದು ಇದನ್ನು ಗುಣೀಭೂತ ವ್ಯಂಗ್ಯಕ್ಕೆ ಲಕ್ಷ್ಯವೆಂದು ಭ್ರಮಿಸಬಾರದು. ಏಕೆಂದರೆ ವಾಕ್ಯವು ಪ್ರಶ್ನಾರ್ಥಕವೆಂಬುದನ್ನು ಸೂಚಿಸುವಷ್ಟರಿಂದಲೇ ಕಾಕುವಿನ ಕೆಲಸ ಮುಗಿಯಲವಕಾಶವುಂಟು.[16]

---

14 'ನಿನ್ನ ಕೋಪಾಟೋಪವು ಅತಿಯಾದರೆ ಅಣ್ಣನು ಕೋಪಿಸಬಹುದು' ಎಂದು ಹೇಳುವ ಸಹದೇವನಿಗೆ ಭೀಮನು ಉತ್ತರ ಕೊಡುತ್ತಿದ್ದಾನೆ.

15 ಕಾಕುವನ್ನು ಕಡೆಯ ಸಾಲಿನಲ್ಲಿ ಕಾಣಬಹುದು. ಸುಮ್ಮನೆ ಓದಿದರೆ ಶೋಚ್ಯಸತ್ಯದ ಸಾಮಾನ್ಯ ನಿರೂಪಣೆ (= Statement) ಯೆನಿಸುತ್ತದೆ. ಆದರೆ ಧ್ವನಿಯನ್ನು ಬದಲಾಯಿಸಿಕೊಂಡು ಓದಿದರೆ ಎರಡು ಪ್ರಶ್ನಾರ್ಥಕ ವಾಕ್ಯ (= Questions) ಗಳಾಗುತ್ತವೆ :—ಅಣ್ಣಗಪ್ಪುದು ಖೇದವೆನ್ನೊಳೇ ? ಇನ್ನು ಮಾಗದು ನೋಡೆ ಕೌರವರೊಳು ? ಇವುಗಳಲ್ಲಿ 'ಅಪ್ಪುದು', 'ಆಗದು', ಎಂಬ ಕ್ರಿಯೆಗಳು ಅಪ್ಪುದೇ ? ಆಗದೇ ? ಎಂಬ ಪ್ರಶ್ನೆಯನ್ನೇ ಕಾಕುವಿನಿಂದ ಎತ್ತಿ ತೋರಿಸುತ್ತವೆ. ಈ ಪ್ರಶ್ನೆಗಳು 'ಇದು ಯೋಗ್ಯವಲ್ಲ', ಇತ್ಯಾದಿ ವ್ಯಂಗ್ಯಾರ್ಥವನ್ನು ಧ್ವನಿಸುತ್ತವೆ.

16 ಲಕ್ಷ್ಯದಲ್ಲಿ ವ್ಯಂಗ್ಯಾರ್ಥದ ಪ್ರತೀತಿ ಬಂದಮೇಲೆ, ಅದು ಮುಖ್ಯವೋ ಅಮುಖ್ಯವೋ ಎಂಬುದನ್ನು ನಿರ್ಧರಿಸುವುದೇ ಸಹೃದಯನ ಮುಖ್ಯ ಕಾರ್ಯ. ಈ ಸೂಕ್ಷ್ಮನಿರ್ಧಾರವನ್ನು ಮಾಡಬಲ್ಲ ಯೋಗ್ಯತೆಯಿಲ್ಲದವನು ಧ್ವನಿವಾದಿಗಳ ದೃಷ್ಟಿಯಲ್ಲಿ ವಿಮರ್ಶಕನೇ ಅಲ್ಲ. ಆನಂದವರ್ಧನನು ಈ ಸೂಕ್ಷ್ಮವಿಚಾರವನ್ನು ಹೇಗೆ ಮಾಡಬೇಕೆಂದು ದಾರಿಯನ್ನಾಗಲೇ ತೋರಿಸಿದ್ದನು. ಆದರೆ ಮಮ್ಮಟನು ದಾರಿಯನ್ನು ಶಾಸ್ತ್ರದೃಷ್ಟಿಯಿಂದ ಪರಿಪುಷ್ಟಗೊಳಿಸಿ, ನಿಷ್ಕೃಷ್ಟ ವಿವೇಚನೆಯನ್ನು ಐದನೆಯ ಉಲ್ಲಾಸದಲ್ಲಿ ಮಾಡಿದ್ದಾನೆ. ವ್ಯಂಗ್ಯಾರ್ಥವು ಮುಖ್ಯವಾಗಿದ್ದಾಗ ಕಾವ್ಯವು 'ಧ್ವನಿಕಾವ್ಯ'; ಅಮುಖ್ಯವಾಗಿದ್ದಾಗ 'ಗುಣೀಭೂತ ವ್ಯಂಗ್ಯ' ಅಥವಾ ಮಧ್ಯಮಕಾವ್ಯವೆಂಬ ಮಾತು ಮೊದಲನೆಯ ಉಲ್ಲಾಸದಲ್ಲೇ ಬಂದಿದೆ. ಈಗ ಪ್ರಸ್ತುತವಾದ ಪದ್ಯದಲ್ಲಿ ವ್ಯಂಗ್ಯಾರ್ಥವು ಮುಖ್ಯವೋ, ಅಮುಖ್ಯವೋ ಎಂಬುದೇ ಪ್ರಶ್ನೆ. ಮಮ್ಮಟನೇ ಐದನೆಯ ಉಲ್ಲಾಸದ ಪ್ರಾರಂಭದಲ್ಲಿ ಹೇಳುವಂತೆ ವ್ಯಂಗ್ಯಾರ್ಥವು (೧) ಅಗೂಢವಾಗಿದ್ದರೆ, (೨) ಮತ್ತೊಂದಕ್ಕೆ ಅಂಗವಾಗಿದ್ದರೆ, (೩) ವಾಚ್ಯಾರ್ಥವು ಸಿದ್ಧಿಸುವುದಕ್ಕೆ ಅಗತ್ಯವಾಗಿದ್ದರೆ, (೪) ಅಸ್ಫುಟವಾಗಿದ್ದರೆ, (೫) ಸಂಶಯಾಸ್ಪದವಾದ ಪ್ರಾಧಾನ್ಯವನ್ನು ಪಡೆದಿದ್ದರೆ. (೬) ವಾಚ್ಯದೊಡನೆ ಸಮಪ್ರಾಧಾನ್ಯವನ್ನು ಪಡೆದಿದ್ದರೆ, (೭) ಕಾಕುವಿನಿಂದ ಸೂಚಿತವಾಗಿದ್ದರೆ ಮತ್ತು (೮) ಅಸುಂದರವಾಗಿದ್ದರೆ, ಅದನ್ನು ಗುಣೀಭೂತ ವ್ಯಂಗ್ಯವೆಂದೇ ಪರಿಗಣಿಸಬೇಕು. ಪ್ರಕೃತದಲ್ಲಿ ೧, ೨, ೪, ೫, ೬, ೮ ನೆಯ ನಿಯಮಗಳಾವುವೂ

ತಇಆ ಮಹ ಗಂಡತ್ಥಲಣಿಮಿಅಂ ದಿಟ್ಠಿಂ ಣ ಣೇಸಿ ಅಣ್ಣತ್ತೋ।
ಏಣ್ಹಿಂ ಸಚ್ಚೇ ಅ ಅಹಂ ತೇ ಅ ಕಪೋಲಾ ಣ ಸಾ ದಿಟ್ಠೀ ॥

ನೀನಾಗ ಕೆನ್ನೆಯೊಳು ನೆಟ್ಟಿರುವ ದಿಟ್ಟಿಯನು
ಒಂದಿನಿತು ಬೇರೆಡೆಗೆ ಕಳಿಸಲಿಲ್ಲ।
ಈಗಳದೆ ನಾನಿರುವೆ, ಅವೆ ನೋಡೆ ಕೆನ್ನೆಗಳು
ದಿಟ್ಟಿಯಾದೊಡೆ ತಾನು ಮೊದಲದಲ್ಲ ॥[17]

ಇಲ್ಲಿ, 'ನನ್ನ ಕೆನ್ನೆಯಲ್ಲಿ ಪ್ರತಿಬಿಂಬಿತಳಾದ ನನ್ನ ಸಖಿಯನ್ನು ನೀನು ನೋಡುತ್ತಿದ್ದ ದೃಷ್ಟಿಯೇ ಬೇರೆಯಾಗಿದ್ದಿತು; ಅವಳು ಹೋದಮೇಲೆ ನಿನ್ನ ದೃಷ್ಟಿಯು ಬೇರೊಂದಾಗಿಬಿಟ್ಟಿದೆ; ನಿಜವಾಗಿಯೂ ನೀನವಳ ಗುಪ್ತಕಾಮುಕನೇ,' ಎಂಬುದು ವ್ಯಂಗ್ಯ.[18]

---

ಅನ್ವಯಿಸುವುದಿಲ್ಲ. ಆದರೆ ೩ ಮತ್ತು ೭, ಈ ನಿಯಮಗಳು ಅನ್ವಯಿಸುವಂತೆ ಭಾಸವಾಗಬಹುದು. ಮಮ್ಮಟನು ಹಾಗೆ ತಿಳಿಯುವುದು ಸರಿಯಲ್ಲವೆಂದು ಸಂಶಯಪರಿಚ್ಛೇದ ಮಾಡುತ್ತಿದ್ದಾನೆ. ಇಲ್ಲಿ ವಾಚ್ಯಾರ್ಥವು ಸ್ವತಃ ಅಸಂಭವವಾಗಿದ್ದಿದ್ದರೆ ಮಾತ್ರ ೩ ನೆಯ ನಿಯಮವು ಅನ್ವಯಿಸಬಹುದಿತ್ತು. ಆದರೆ ವಸ್ತುತಃ ಕಾಕುವಿಲ್ಲದೆ ಓದಿದರೂ ವಾಚ್ಯಾರ್ಥವು ಅಸಂಭವವಾಗುವಂತಿಲ್ಲ. ಸ್ವತಃ ವಾಚ್ಯಾರ್ಥವು ಅಸಂಭವವಲ್ಲವೆನಿಸುವ ಸ್ಥಳದಲ್ಲಿ ಕಾಕುವು ಬಂದರೆ ಅದು ೭ ನೆಯ ನಿಯಮವೆನಿಸುವುದಿಲ್ಲ; ಏಕೆಂದರೆ ಅನಿವಾರ್ಯವಾಗಿ ಕಾಕುವನ್ನು ಶರಣುಹೋಗಲೇಬೇಕಾದಾಗ ಮಾತ್ರ, ಆ ಕಾಕುವಿನಿಂದ ಬಂದ ವ್ಯಂಗ್ಯಾರ್ಥವು ಗುಣೀಭೂತವೆನಿಸುತ್ತದೆ. ಇಲ್ಲಿ ಕಾಕುವಿನಿಂದ ವ್ಯಂಗ್ಯಾರ್ಥ ಬರಲಿಲ್ಲವೆಂದರೆ ವಾಚ್ಯದ ಸಿದ್ಧಿಗೆ ಯಾವ ಆತಂಕವೂ ಇಲ್ಲ. ಅಷ್ಟೇ ಅಲ್ಲ; ಕಾಕುವಿನ ವ್ಯಾಪ್ತಿಯು ಪ್ರಶ್ನಾರ್ಥಬೋಧನಮಾಡಿದೊಡನೆ ಮುಗಿಯಿತೆನ್ನಲೂ ಅವಕಾಶವಿದೆ. ಹೀಗೆ ಅದರ ಕೆಲಸ ತೀರಿದನಂತರ 'ನನ್ನ ಮೇಲೆ ಕೋಪ ಯೋಗ್ಯವಲ್ಲ'ವೆಂದರ್ಥವು ರಸಿಕರಿಗೆ ಬರುತ್ತಿದ್ದರೆ, ಆ ವ್ಯಂಗ್ಯಾರ್ಥವು ಪ್ರಧಾನವಾಗುತ್ತದೆಯೇ ಹೊರತು, ಗುಣೀಭೂತ ಅಥವಾ ಅಪ್ರಧಾನವೆನಿಸುವುದಿಲ್ಲ. "ಕಾಕ್ವಾಕ್ಷಿಪ್ತ"ವಾದ ಗುಣೀಭೂತವ್ಯಂಗ್ಯದಲ್ಲಿಯಾದರೋ ಚರಮವ್ಯಂಗ್ಯಾರ್ಥದಲ್ಲಿ ಕಾಕು ಪರ್ಯವಸಾನ ಹೊಂದುವುದೇ ಹೊರತು, ತನ್ಮಧ್ಯೆ ವಿಶ್ರಾಂತವಾಗುವುದಿಲ್ಲ ಉದಾ. "ಮಥ್ನಾಮಿ ಕೌರವಶತಂ . . .' (ಮತ್ತೂ ಹೆಚ್ಚಿನ ವಿವರಗಳಿಗೆ ಮುಂದೆ ಐದನೆಯ ಉಲ್ಲಾಸವನ್ನೋದಿ).

[17] ಇದು ವಾಕ್ಯವೈಶಿಷ್ಟ್ಯವು ವ್ಯಂಜಕವಾಗುವುದಕ್ಕೆ ಉದಾಹರಣೆ. ಇಲ್ಲಿಯೂ ವಕ್ತೃ, ಬೋದ್ಧವ್ಯರ, ವೈಶಿಷ್ಟ್ಯವೂ ಉಂಟು. ಆದರೆ ಅಷ್ಟರಿಂದಲೇ ವ್ಯಂಗ್ಯಾರ್ಥ ಸಿದ್ಧಿಸುವುದಿಲ್ಲ.

[18] ಹೇಳಲಾದ ವ್ಯಂಗ್ಯಾರ್ಥದ ಸಿದ್ಧಿಗೆ ವಾಕ್ಯದಲ್ಲಿ ಬರುವ 'ಆಗ,' 'ಈಗ,' 'ಮೊದಲದು :, ಎಂಬ ವಿಶಿಷ್ಟ ಪದಗಳು ಕಾರಣ. ಇವುಗಳಿರುವುದರಿಂದಲೇ ರಸಿಕರು ಸೂಕ್ಷ್ಮವಾದ ಪರಾಮರ್ಶಕ್ಕೆ

ಉದ್ದೇಶೋಽಯಂ ಸರಸಕದಲೀಶ್ರೇಣಿಶೋಭಾತಿಶಾಯೀ
ಕುಂಜೋತ್ಕರ್ಷಾಂಕುರಿತರಮಣೀವಿಭ್ರಮೋ ನರ್ಮದಾಯಾಃ ।
ಕಿಂಚೈತಸ್ಮಿನ್ ಸುರತಸುಹೃದಸ್ತನ್ವಿ ತೇ ವಾನ್ತಿ ವಾತಾಃ
ಯೇಷಾಮಗ್ರೇ ಸರತಿ ಕಲಿತಾಕಾಂಡಕೋಪೋ ಮನೋಭೂಃ ॥

ನೋಡು ನರ್ಮದೆಯೆಡೆಯ ಕಂಗೊಳಿಸೆಳೆಯ ಬಾಳೆಯ ಸಾಲನು
ಬಳ್ಳಿವನೆಗಳ ಸೊಬಗು ಕುದುರಿಸೆ ಚೆನ್ನೆಯರ ವೈಚೆಲುವನು ।
ಸುರತಸಖರೆನಲಿಲ್ಲಿ ತಣ್ಣನೆ ಗಾಳಿ ನಿನಗಿದೊ ಸುಳಿವುವು
ಗಾಳಿಗಳ ಮುಂದಾಳು ಕಾಮನು ಮುನಿದು ಕೆಮ್ಮನೆ ನಡೆವನು ॥[19]

ಇಲ್ಲಿ, 'ರತಕ್ಕೋಸ್ಕರ ಪ್ರವೇಶಿಸು' ಎಂಬುದು ವ್ಯಂಗ್ಯ.[20]

ಣೋಲ್ಲೇಇ ಅಣಣ್ಣಮಣಾ[21]ಅತ್ತಾ ಮಂ ಘರಭರಮ್ಮಿ ಸಅಲಮ್ಮಿ ।
ಖಣಮೇತ್ತಂ ಜಇ ಸಂಝಾಇ ಹೋಇ ಣ ವ ಹೋಇ ವೀಸಾಮೋ ॥[22]

ಅತ್ತೆ ನೂಕುವಳೆನ್ನನೆಲ್ಲ ಮನೆಗೆಲಸದೊಳು
ಬೇರೊಂದು ಯೋಜನೆಯೆ ಅವಳಿಗಿಲ್ಲ ।
ಒಂದು ಚಣ ಸಂಜೆಯಲಿ ಸಿಕ್ಕಿದೊಡೆ ವಿಶ್ರಾಂತಿ–
ಯೆನಗುಂಟು ಸಿಕ್ಕದೊಡೆ ಬಿಡುವೆಯಿಲ್ಲ ॥

---

ಹೊರಡುತ್ತಾರೆ, ವಾಚ್ಯಾರ್ಥವನ್ನು ಮಾತ್ರ ಗ್ರಹಿಸುವುದರ ಬದಲು ವ್ಯಂಗ್ಯಾರ್ಥವನ್ನು ಕಲ್ಪಿಸುತ್ತಾರೆ.

ನಾಯಿಕೆಯ ಕೆನ್ನೆಗಳು ಕನ್ನಡಿಯಂತೆ ನಿರ್ಮಲವಾಗಿದ್ದು ಸಖಿಯ ಮುಖವು ಅದರಲ್ಲಿ ಪ್ರತಿಬಿಂಬಿತವಾಗಿತ್ತೆನ್ನುವುದು ಸ್ವಭಾವೋಕ್ತಿಯೋ, ಅತಿಶಯೋಕ್ತಿಯೋ ವಾಚಕರೇ ನಿರ್ಧರಿಸಬಹುದು. ಇದರಿಂದ ನಾಯಿಕೆಯ ಲಾವಣ್ಯವನ್ನು ವರ್ಣಿಸುತ್ತಿರುವಂಶ ಸ್ಪಷ್ಟ.

[19] ಇದು ವಾಚ್ಯಾಂಶದ ವೈಶಿಷ್ಟ್ಯವು ವ್ಯಂಜಕವಾಗುವುದಕ್ಕೆ ಉದಾಹರಣೆ.

[20] ಇಲ್ಲಿ ವರ್ಣಿತವಾಗಿರುವ ನದೀತೀರ, ಬಳ್ಳಿವನೆ, ತೆಂಗಾಳಿ, ಮುಂತಾದುವುಗಳ ವಿಶೇಷಣಗಳೆಲ್ಲವೂ ಸುರತಾಭಿಪ್ರಾಯವನ್ನು ಸೂಚಿಸುವುವಲ್ಲದೆ ಕಡೆಯ ಸಾಲು ಮನ್ಮಥನ ಮುಂದಾಳ್ತನವನ್ನು ಎಂದರೆ ನಾಯಕನ ಕಾಮಾತುರವನ್ನು ಎತ್ತಿ ತೋರಿಸುತ್ತದೆ. ವ್ಯಂಗ್ಯಾರ್ಥವನ್ನು ಹುಟ್ಟಿಸಲು ಈ ವಿಶಿಷ್ಟ ವರ್ಣನಾವಿಷಯಗಳೇ ಸಾಕಾಗಿವೆ.

[21] ಪಾಠಾಂತರ—'ಅಣೋಲ್ಲಮಣಾ' (=ಅನಾರ್ದ್ರಮನಾ=ಕಠಿನಹೃದಯಳು).

[22] ಇದು 'ಅನ್ಯಸನ್ನಿಧಿ'ಯ ವೈಶಿಷ್ಟ್ಯದಿಂದುಂಟಾಗುವ ವ್ಯಂಜಕತ್ವಕ್ಕೆ ನಿದರ್ಶನ.

ಇಲ್ಲಿ ಸಂಜೆ ಸಂಕೇತಕಾಲವೆಂಬುದನ್ನು ತಟಸ್ಥನೊಬ್ಬನಿಗೆ ಒಬ್ಬಾಕೆ ಸೂಚಿಸುತ್ತಿದ್ದಾಳೆ.[23]

**ಸುವ್ವಇ ಸಮಾಗಮಿಸ್ಸದಿ ತುಜ್ಝ ಪಿಓ ಅಜ್ಜ ಪಹರಮೇತ್ತೇಣ।**
**ಏಮೇಅ ಕಿತ್ತಿ ಚಿಟ್ಠಸಿ ತಾ ಸಹಿ ಸಜ್ಜೇಸು ಕರಣಿಜ್ಜಂ॥**

ಒಂದು ಪ್ರಹರದೊಳಗೆ ನಿನ್ನ
ಕಾಂತ ಬರುವನಂತೆ।
ಕೆಳದಿ, ಕೆಲಸವನ್ನು ನೋಡು,
ಸುಮ್ಮನೇಕೆ ನಿಂತೆ॥[24]

ಇಲ್ಲಿ, ಉಪಪತಿಯನ್ನು ಕೂಡಲು ಹೋಗುತ್ತಿರುವ ಅಭಿಸಾರಿಕೆಯನ್ನು ಒಬ್ಬಳು ತಡೆಯುತ್ತಿದ್ದಾಳೆ, ಸಂದರ್ಭವು ಯೋಗ್ಯವಾಗಿಲ್ಲವೆಂದು.[25]

ಅನ್ಯತ್ರ ಯೂಯಂ ಕುಸುಮಾವಚಾಯಂ
ಕುರುಧ್ವಮತ್ರಾಸ್ಮಿ ಕರೋಮಿ ಸಖ್ಯಃ।
ನಾಹಂ ಹಿ ದೂರಂ ಭ್ರಮಿತುಂ ಸಮರ್ಥಾ॥
ಪ್ರಸೀದತಾಯಂ ರಚಿತೋಽಞ್ಜಲಿರ್ವಃ॥

ಬೇರೆಡೆಗೆ ಪೂಗಳನು ಕೊಯ್ಯಿರೌ, ಕೆಳದಿಯರೆ
ನಾನಿಲ್ಲೆ ಹತ್ತಿರದೆ ಕೊಯ್ಯುತಿರುವೆ।
ನಡೆಯಲಾರೆನು ದೂರ, ಕನಿಕರವ ತೋರುವುದು
ಇದೊ ಕೈಯ ಮುಗಿಯುತ್ತೆ ಬೇಡುತಿರುವೆ[26]॥

---

[23] ಇಬ್ಬರು ಹೆಂಗಸರು ಎಂದಿನಂತೆ ಮಾತನಾಡುತ್ತಿದ್ದಾರೆ; ಅಲ್ಲೇ ಸಮೀಪದಲ್ಲಿ ಮರೆಯಾಗಿ ಮೂರನೆಯವನೊಬ್ಬನಿದ್ದಾನೆ. ಇದು ಹೇಳುವವಳಿಗೆ ಗೊತ್ತಿದೆ; ಕೇಳುವವಳಿಗೆ ಗೊತ್ತಿಲ್ಲ. ಆ ಮೂರನೆಯವನ ಇರುವಿಕೆಯಿಂದ ವಾಕ್ಯಕ್ಕೆ ಹೇಳಲಾದ ವ್ಯಂಗ್ಯಾರ್ಥವುಂಟಾಗುತ್ತದೆ. ಇಂತಹ ವ್ಯಂಗ್ಯಪೂರ್ಣ ಶ್ಲೋಕಗಳನ್ನೋದುವಾಗ ರಸಿಕರೇ ಅವುಗಳ ಆವರಣವನ್ನೆಲ್ಲ ಕಲ್ಪಿಸಿಕೊಳ್ಳಬೇಕಾಗುತ್ತದೆ. ಹಾಗೆ ಸ್ವಂತವಾಗಿ ಕಲ್ಪಿಸಿಕೊಂಡಾಗ ಬರುವ ಆನಂದವು ಬಿಡಿಸಿ ಟೀಕೆಯಲ್ಲಿ ಬರೆದಾಗ ಬರುವುದಿಲ್ಲ. ಕಾವ್ಯವು ಬುದ್ಧಿಗಮ್ಯವೆನ್ನುವುದಕ್ಕಿಂತಲೂ ಭಾವೈಕವೇದ್ಯವೆನ್ನುವುದು ಈ ಕಾರಣದಿಂದಲೇ. ವಸ್ತುವಿನಲ್ಲಿರುವ ಗ್ರಾಮ್ಯತ್ವ ಅಥವಾ ಅಶ್ಲೀಲ ದೋಷವು ಅರ್ಥವ್ಯಂಜಕತೆಯ ಪ್ರಭಾವದಿಂದ ಹೇಗೆ ದೂರವಾಗಿದೆಯೆಂಬುದನ್ನು ಗಮನಿಸಬೇಕು.

[24] ಸಂದರ್ಭದ ವೈಶಿಷ್ಟ್ಯವು ವ್ಯಂಜಕವಾಗುವುದಕ್ಕೆ ಇದು ಉದಾಹರಣೆ.

[25] ಇಲ್ಲಿ ನಾಯಿಕೆಯು ಅಭಿಸಾರಿಕೆಯಾಗಿ ಹೊರಟಿರುವಳೆಂಬ ಸಂದರ್ಭವಿಶೇಷವನ್ನು ಕಲ್ಪಿಸಿಕೊಂಡಾಗ ಮಾತ್ರ 'ಈಗ ಬೇಡ'ವೆಂಬ ನಿಷೇಧವು ವ್ಯಂಗ್ಯ.

[26] ಇದು ದೇಶದ ವೈಶಿಷ್ಟ್ಯದಿಂದ ವ್ಯಂಗ್ಯಾರ್ಥ ಬರುವುದಕ್ಕೆ ಉದಾಹರಣೆ.

ಇಲ್ಲಿ, 'ಈ ಸ್ಥಳವು ಏಕಾಂತವಾಗಿದೆ, ಪ್ರಚ್ಛನ್ನಕಾಮುಕನನ್ನು ಕರೆತರಲು ಹೋಗು' ಎಂಬುದನ್ನು ಒಬ್ಬಳು ತನ್ನ ನೆಚ್ಚಿನ ಕೆಳದಿಗೆ ಸೂಚಿಸುತ್ತಿದ್ದಾಳೆ.[27]

ಗುರುಅಣಪರವಸ ಪಿಅ ಕಿಂ ಭಣಾಮಿ ತುಹ ಮಂದಭಾಇಣೀ ಅಹಕಮ್ ।
ಅಜ್ಜ ಪವಾಸಂ ವಚ್ಚಸಿ ವಚ್ಚ ಸಅಂ ಜೇವ್ವ ಸುಣಸಿ ಕರಣಿಜ್ಜಮ್ ॥

ಇನಿಯನೆ, ಪಿರಿಯರ ಆಜ್ಞಾಧೀನನೆ
ಹತಭಾಗ್ಯಳು ನಿನಗೇನೊರೆವೆ।
ಪಯಣವನಿಂದೇ ಗೈವೊಡೆ ಗೈವುದು
ಮುಂದಿನದನು ನೀನಾಲಿಸುವೆ ॥[28]

ಇಲ್ಲಿ, 'ಈ ವಸಂತಕಾಲದಲ್ಲಿ ನೀನು ಹೋಗಿಬಿಡುವುದಾದರೆ ನಾನಂತೂ ಉಳಿಯುವುದಿಲ್ಲ, ನಿನ್ನ ಗತಿಯನ್ನು ಕಾಣೆ' ಎಂಬುದು ವ್ಯಂಗ್ಯ.[29] "ಇತ್ಯಾದಿಗಳು" ಎಂದಿರುವುದರಿಂದ ಅಭಿನಯ ಮುಂತಾದುವನ್ನು ಗ್ರಹಿಸಬೇಕು.[30] ಅಭಿನಯದ ವೈಶಿಷ್ಟ್ಯಕ್ಕೆ ಉದಾಹರಣೆ :—

ದ್ವಾರೋಪಾನ್ತನಿರನ್ತರೇ ಮಯಿ ತಯಾ ಸೌಂದರ್ಯಸಾರಶ್ರಿಯಾ
ಪ್ರೋಲ್ಲಾಸ್ಯೋರುಯುಗಂ ಪರಸ್ಪರಸಮಾಸಕ್ತಂ ಸಮಾಸಾದಿತಮ್ ।
ಆನೀತಂ ಪುರತಶ್ಶಿರೋಂಶುಕಮಧಃ ಕ್ಷಿಪ್ತೇ ಚಲೇ ಲೋಚನೇ
ವಾಚಸ್ತತ್ರ ನಿವಾರಿತಂ ಪ್ರಸರಣಂ ಸಂಕೋಚಿತೇ ದೋರ್ಲತೇ ॥

ಬಾಗಿಲೆಡೆಯೊಳು ನಾನು ಹತ್ತಿರವಿರಲು ಚೆಲುವಿನ ಚೆನ್ನೆಯು
ಕುಣಿಸಿ ತೊಡೆಗಳನೊಂದನೊಂದರೊಳಿರಿಸಿ ಕೂಡಿಸುತಿರ್ದಳು।
ತಲೆಯ ಸೆರಗನು ಮುಂದಕೆಳೆದಳು ಬೀರಿ ನೋಟವ ಕೆಳಗಡೆ
ಮಾತನರ್ಧಕೆ ಬಿಟ್ಟು ಭುಜಲತೆಯನ್ನು ಕುಸುಗಿಸುತಿರ್ದಳು ॥[31]

---

[27] ಮೇಲಿನ ಉದ್ದೇಶೋಽಯಂ' (ಅಡಿಟಿಪ್ಪಣಿ 19-20) ಎಂಬ ಶ್ಲೋಕದಲ್ಲಿ ಸಮಗ್ರ ವಾಚ್ಯಾಂಶವೂ ವ್ಯಂಜಕ; ದೇಶವೊಂದೇ ಅಲ್ಲ. ಈ ಉದಾಹರಣೆಯಲ್ಲಿ ದೇಶವೊಂದೇ ವ್ಯಂಜಕ (ಮಾಣಿಕ್ಯಚಂದ್ರ).

[28] ವಾಚ್ಯಾರ್ಥದ ಕಾಲವೈಶಿಷ್ಟ್ಯದಿಂದ ವ್ಯಂಜಕತ್ವ ಬರುವುದಕ್ಕೆ ಇದು ಲಕ್ಷ್ಯ.

[29] ಇಲ್ಲಿ ಪ್ರಸ್ತುತವಾದ ಕಾಲವು ವಸಂತಕಾಲವಲ್ಲದಿದ್ದರೆ ಉಕ್ತ ವ್ಯಂಜಕತ್ವವಿರುತ್ತಿರಲಿಲ್ಲ.

[30] ಮೂಲದಲ್ಲಿರುವ ಪದ 'ಚೇಷ್ಟೆ'. ಸಂಸ್ಕೃತದಲ್ಲಿ ಚೇಷ್ಟೆಯೆಂದರೆ ಅಭಿನಯ.

[31] ಪ್ರಥಮಾರ್ಧದಲ್ಲಿ 'ಸ್ಪೃಷ್ಟಕ'ವೆಂಬ ಆಲಿಂಗನಪ್ರಕಾರವೂ, ಸೆರಗನ್ನೆಳೆಯುವುದರಿಂದ

ಇಲ್ಲಿ, ಅಂಗಗಳ ಅಭಿನಯದಿಂದ ಪ್ರಚ್ಛನ್ನರಮಣನ ವಿಷಯದಲ್ಲಿ (ತರುಣಿಯ) ವಿಶಿಷ್ಟಾಭಿಪ್ರಾಯವು ವ್ಯಂಗ್ಯವಾಗಿದೆ.

ವಾಚಕರ ಆಕಾಂಕ್ಷೆಯೆಲ್ಲವೂ ಪರಿಹಾರವಾಗಬೇಕೆಂದು, ಮತ್ತು ಒಂದೊಂದರ ಉದಾಹರಣೆಯೂ ಅವಸರಪ್ರಾಪ್ತವೆಂದು ತಿಳಿದು, ಹೀಗೆ ಮತ್ತೆ ಮತ್ತೆ ಉದಾಹರಣೆ ಗಳನ್ನು ತೋರಿಸುತ್ತಿದ್ದೇವೆ.[32] 'ಮಾತಾಡುವವ' ಮುಂತಾದುವಲ್ಲಿ ಅನ್ಯೋನ್ಯ ಸಂಯೋಗವೊದಗುತ್ತಿದ್ದರೆ, ಎರಡು ಕೂಡಿ ಆದ ಸಂಯೋಗ ಮುಂತಾದುವುಗಳ ಉದಾಹರಣೆಗಳನ್ನೂ, ಹಾಗೆಯೇ ಲಕ್ಷ್ಯಾರ್ಥ, ವ್ಯಂಗ್ಯಾರ್ಥಗಳಿಗೆ ಬರುವ ವ್ಯಂಜ ಕತ್ವದ ಉದಾಹರಣೆಗಳನ್ನೂ ವಾಚಕರೇ ಊಹಿಸಿಕೊಳ್ಳಬಹುದು.[33]

[ಎರಡು ಕೂಡಿದ ಸಂಯೋಗದಲ್ಲಿ 'ಮಾತಾಡುವವ' ಮತ್ತು 'ಕೇಳತಕ್ಕವರ' ವೈಶಿಷ್ಟ್ಯ ಕೂಡಿದ ಉದಾಹರಣೆ :—

ಅತ್ತಾ ಏತ್ಥ ಣಿಮಜ್ಜಇ ಏತ್ಥ ಅಹಂ ದಿಅಸಏ ಪಲೋಏಹಿ ।
ಮಾ ಪಹಿಅ ರತ್ತಿಅಂಧಿಅ ಸೆಜ್ಜಾಏ ಮಹ ಣಿಮಜ್ಜಿಹಿಸಿ ॥

ಅತ್ತೆಯಿಲ್ಲಿ ನಿದ್ದೆಗೈವಳಿಲ್ಲಿ ನಾನು ಎಂಬುದನ್ನು
ಹಗಲಿನಲ್ಲೆ ಕಣ್ಣತುಂಬ ಪಾಂಥ ನೋಡಿರು ।

---

ಗುಪ್ತವಾಗಿ ಬರಬೇಕೆಂಬ ಸೂಚನೆಯೂ, ನೋಟವನ್ನು ಕೆಳಗೆ ಬೀರುವ ಮತ್ತು ಮಾತನ್ನು ನಿಲ್ಲಿಸುವ ಕ್ರಿಯೆಗಳಿಂದ ಸೂರ್ಯಾಸ್ತಮಯದ ವಿವಿಕ್ತಕಾಲವೂ, ಕಡೆಯ ವಾಕ್ಯದಿಂದ ಆಲಿಂಗ ನಾಭಿಪ್ರಾಯವೂ ವ್ಯಂಗ್ಯವೆಂದು ಪ್ರದೀಪಕಾರನು ಬರೆಯುತ್ತಾನೆ.

[32] ಎರಡನೆಯ ಉಲ್ಲಾಸದಲ್ಲೇ ವಾಚ್ಯಾದಿ ಅರ್ಥಗಳ ವ್ಯಂಜಕತ್ವವನ್ನು ಹೇಳಿದ್ದರೂ ವಾಚಕರ ಬುದ್ಧಿವೈಶದ್ಯಕ್ಕೋಸ್ಕರ ಬಿಡಿಸಿ ಬಿಡಿಸಿ ಉದಾಹರಿಸಲಾಯಿತೆಂದು ಮಮ್ಮಟನು ಸಮಾಧಾನ ಹೇಳುತ್ತಿದ್ದಾನೆ; ಅಲ್ಲದೆ ಅರ್ಥವ್ಯಂಜಕಗಳು ಇಂತಿಷ್ಟೆಂದು ತಿಳಿಸಿದ ಮೇಲೆ ಒಂದೊಂದನ್ನೂ ಉದಾಹರಿಸಿ ವಿವರಿಸುವುದು ಕ್ರಮಪ್ರಾಪ್ತವೂ ಆಗಿದೆ.

[33] ವಸ್ತುತಃ ಮೇಲೆ ನಿರ್ದೇಶಿಸಲಾದ ಹತ್ತು ಸಾಮಗ್ರಿಗಳಲ್ಲಿ ಒಂದಕ್ಕಿಂತ ಹೆಚ್ಚು ಸಾಮಗ್ರಿಗಳು ಕೂಡಿಯೇ ವಿಶಿಷ್ಟ ಉದಾಹರಣೆಗಳಲ್ಲಿ ವ್ಯಂಜಕತ್ವವನ್ನು ಪಡೆಯುತ್ತವೆ. ಆ ದೃಷ್ಟಿಯಿಂದ ಪರಸ್ಪರ ಸಂಪರ್ಕವೇ ಇಲ್ಲದ ಉದಾಹರಣೆ ಸಿಕ್ಕುವುದೇ ಕಷ್ಟ. ಯಾವ ಉದಾ ಹರಣೆಯಲ್ಲಿ ಎಷ್ಟು ಸಾಮಗ್ರಿಗಳು ಕೂಡಿಕೊಂಡಿರುವುವೆಂಬುದನ್ನು ವಾಚಕರೇ ನಿರ್ಧರಿಸಬಹು ದೆಂದು ಮಮ್ಮಟನ ಅಭಿಪ್ರಾಯ.

ಹಾಗೆಯೇ ಲಕ್ಷ್ಯಾರ್ಥ, ವ್ಯಂಗ್ಯಾರ್ಥಗಳ ವ್ಯಂಜಕತ್ವವನ್ನೂ ವಾಚಕರೇ ಊಹಿಸಿಕೊಳ್ಳ ಬಹುದೆನ್ನುತ್ತಾನೆ. ಏಕೆಂದರೆ ವ್ಯಂಜಕತ್ವದ ಸ್ವರೂಪದಲ್ಲಿ ವಾಚ್ಯಾರ್ಥಕ್ಕೂ ಲಕ್ಷ್ಯ, ವ್ಯಂಗ್ಯಾರ್ಥ ಗಳಿಗೂ ಯಾವ ಭೇದವೂ ಇಲ್ಲ.

ಕತ್ತಲಲ್ಲಿ ಕುರುಡ ನೀನು, ನಮ್ಮ ಸೆಜ್ಜೆಗಳಲಿ ಬಂದು
ಬಿದ್ದು ಬಿಡುವ ಭಂಗ ನಿನಗೆ ಬಾರದಂತಿರು ||][34]

ಶಬ್ದಪ್ರಮಾಣವೇದ್ಯೋಽರ್ಥೋ ವ್ಯನಕ್ತ್ಯರ್ಥಾನ್ತರಂ ಯತಃ |
ಅರ್ಥಸ್ಯ ವ್ಯಂಜಕತ್ವೇ ತಚ್ಛಬ್ದಸ್ಯ ಸಹಕಾರಿತಾ || ೩ ||

ಶಬ್ದಪ್ರಮಾಣದಿಂದ ವೇದ್ಯವಾದ ಅರ್ಥ ಮಾತ್ರ ಅರ್ಥಾಂತರವನ್ನು ಧ್ವನಿಸಲು ಸಮರ್ಥವಾಗುವುದರಿಂದ, ಅರ್ಥವು ವ್ಯಂಜಕವಾದಾಗ ಅದಕ್ಕೆ ಶಬ್ದದ ಸಹಕಾರಿತ್ವವುಂಟೇ ಉಂಟು.[35]

'ಶಬ್ದ . . .' ಎನ್ನುವುದರ ತಾತ್ಪರ್ಯವಿಷ್ಟೆ :—ಬೇರೆ ಪ್ರಮಾಣಗಳಿಂದ ವೇದ್ಯವಾದ ಅರ್ಥ ಎಂದೂ ವ್ಯಂಜಕವಾಗದು.[36]

ಇಲ್ಲಿಗೆ ಕಾವ್ಯಪ್ರಕಾಶದಲ್ಲಿ 'ಅರ್ಥ-ವ್ಯಂಜಕತಾ-ನಿರ್ಣಯ'ವೆಂಬ
ಮೂರನೆಯ ಉಲ್ಲಾಸ ಮುಗಿದುದು.

**ತಿರುಳೆನೆ ಕಾವ್ಯದೊಳರ್ಥದೆ**
**ಪೊರಮಡುವೀ ವ್ಯಂಜಕತ್ವಮಂ ಪರಿಪರಿಯಿಂ |**
**ಪರಿಭಾವಿಸೆ ಕನ್ನಡದೊಳ್**
**ಸುರುಚಿರ ರುಚಿಶುದ್ಧಿ ಸಿದ್ಧಮಪ್ಪುದು ಸಹಜಂ ||**

---

[34] ಮೇಲಿನ ಮಾತುಗಳನ್ನು ನೋಡಿದರೆ ಮಮ್ಮಟನು ಈ ಉದಾಹರಣೆಯನ್ನು ಗ್ರಂಥದಲ್ಲಿ ಸೇರಿಸಿಲ್ಲವೆಂದು ತೋರುತ್ತದೆ. ಗೋವಿಂದ, ಮಹೇಶ್ವರ, ಮುಂತಾದವರು ಇದನ್ನು ಮಮ್ಮಟನ ಮೂಲದಲ್ಲಿ ಸೇರಿಸುವುದಿಲ್ಲ. ಆದರೆ ಮಾಣಿಕ್ಯಚಂದ್ರನು ಮೂಲದಲ್ಲಿಯೇ ಸೇರಿಸಿದ್ದಾನೆ.

ಹೋಲಿಸಿ—ಕನ್ನಡ ಧ್ವನ್ಯಾಲೋಕ, ಪು. ೬.

[35] ಅರ್ಥವು ವ್ಯಂಜಕವೆಂದು ಇದುವರೆಗೂ ವಿವರಿಸಲಾಯಿತು. ಆದರೆ ಮೊದಲು ಅರ್ಥಜ್ಞಾನವಾಗುವುದು ಹೇಗೆ? ಕಾವ್ಯದಲ್ಲಿ ಶಬ್ದಜ್ಞಾನವಿಲ್ಲದೆ ಅರ್ಥಜ್ಞಾನವಾಗುವುದೇ ಸಾಧ್ಯವಿಲ್ಲ. ಆದ್ದರಿಂದ ಅರ್ಥವನ್ನು ವ್ಯಂಜಕವೆನ್ನುವಾಗಲೂ ಶಬ್ದವು ಅದಕ್ಕೆ ಸಹಕಾರಿಯೆಂದೊಪ್ಪಲೇ ಬೇಕು.

[36] ದರ್ಶನದಲ್ಲಿ 'ಪ್ರಮಾಣ'ಗಳನ್ನು ಪ್ರತ್ಯಕ್ಷ, ಅನುಮಾನ, ಶಬ್ದ, ಮುಂತಾಗಿ ವಿಂಗಡಿಸಿ ತೋರಿಸುತ್ತಾರೆ. 'ಅರ್ಥ'ವೆಂಬುದಕ್ಕೆ 'ವಸ್ತು'ವೆಂಬ ವಿಶಾಲಾರ್ಥ ಕಲ್ಪಿಸಿಕೊಂಡರೆ ಪ್ರತ್ಯಕ್ಷವೂ ಅರ್ಥಬೋಧಕವಾಗುತ್ತದೆ; ಅನುಮಾನವೂ ಅರ್ಥಬೋಧಕವಾಗುತ್ತದೆ. ನಾವು ಪರ್ವತವನ್ನು ಕಣ್ಣಿನಿಂದ ನೋಡುತ್ತಿರುವಾಗ ಪರ್ವತವೆಂಬ ಅರ್ಥ (=ವಸ್ತು) ಜ್ಞಾನಕ್ಕೆ ಪ್ರತ್ಯಕ್ಷವೇ ಪ್ರಮಾಣ. ಆದರೆ ಈ ಪ್ರತ್ಯಕ್ಷಪ್ರಮಾಣ ಲಭ್ಯವಾದ ಅರ್ಥವು ಯಾವುದಕ್ಕೂ ವ್ಯಂಜಕವಲ್ಲ. ಕಾವ್ಯದಲ್ಲಿ ಹಾಗಲ್ಲ. ಅಲ್ಲಿ ಶಬ್ದಬೋಧ್ಯವಾದ ಅರ್ಥಮಾತ್ರವಿರುತ್ತದೆಯೇ ಹೊರತು ಪ್ರಮಾಣಾಂತರಲಭ್ಯವಾದ ಅರ್ಥಗಳಲ್ಲ. ಇಂತಹ ಶಬ್ದ ಪ್ರಮಾಣವೇದ್ಯವಾದ ಅರ್ಥದಲ್ಲಿ ಮಾತ್ರ ವ್ಯಂಜಕತ್ವವು ಸಾಧ್ಯ. ಎಂದಮೇಲೆ ಅರ್ಥವ್ಯಂಜಕತ್ವವು ಕಾವ್ಯಮಾತ್ರಸಿದ್ಧವೆಂಬುದನ್ನು ಬೇರೆಯಾಗಿ ಹೇಳಬೇಕಾಗಿಲ್ಲ. ನಾಟ್ಯದಲ್ಲಿ ಪ್ರತ್ಯಕ್ಷದೃಷ್ಟವಾದ ಅರ್ಥಕ್ಕೂ ವ್ಯಂಜಕತ್ವವುಂಟೆಂದು ಮಹೇಶ್ವರನು ಬರೆಯುತ್ತಾನೆ.

# ನಾಲ್ಕನೆಯ ಉಲ್ಲಾಸ

ಶಬ್ದ, ಅರ್ಥಗಳ ವಿವರಣೆಯಾದೊಡನೆ ದೋಷ, ಗುಣ, ಅಲಂಕಾರಗಳ ಸ್ವರೂಪವನ್ನು ಹೇಳುವುದೇ ಕ್ರಮಾಗತವೆಂಬುದೇನೋ ಸರಿಯೆ.[1] ಆದರೂ ವಿಶೇಷ್ಯದ (=ಕಾವ್ಯದ) ಪರಿಜ್ಞಾನದಿಂದ ಮಾತ್ರ ವಿಶೇಷಣಗಳ (=ದೋಷಾದಿಗಳ) ಹೇಯತೆಯಾಗಲಿ, ಉಪಾದೇಯತೆಯಾಗಲಿ ತಿಳಿಯುವುದು ಸಾಧ್ಯವೆಂದು ಭಾವಿಸಿ[2] ಮೊದಲು ಕಾವ್ಯದ ಭೇದಗಳನ್ನು ಹೇಳುತ್ತಾನೆ.

ಅವಿವಕ್ಷಿತವಾಚ್ಯೋ ಯಸ್ತತ್ರ ವಾಚ್ಯಂ ಭವೇದ್ ಧ್ವನೌ।
ಅರ್ಥಾಂತರೇ ಸಂಕ್ರಮಿತಮತ್ಯನ್ತಂ ವಾ ತಿರಸ್ಕೃತಮ್ ॥ ೧ ॥

---

[1] ಈಗಾಗಲೇ ಮೊದಲನೆಯ ಉಲ್ಲಾಸದಲ್ಲಿ ಕಾವ್ಯಲಕ್ಷಣವನ್ನೂ ವಿಭಾಗವನ್ನೂ ಹೇಳಿ ಎರಡು ಮೂರನೆಯ ಉಲ್ಲಾಸಗಳಲ್ಲಿ ಲಕ್ಷಣಾಂತರ್ಗತವಾದ ಶಬ್ದಾರ್ಥಗಳನ್ನು ವಿವರಿಸಲಾಗಿದೆ. ಅದಾದೊಡನೆ ಲಕ್ಷಣದಲ್ಲಿರುವ ಇತರ ಅಂಶಗಳ, ಎಂದರೆ ದೋಷ, ಗುಣ, ಅಲಂಕಾರಗಳ ವಿವರಣೆ ಕ್ರಮಪ್ರಾಪ್ತವೆನ್ನಿಸುವುದು ಸಹಜ. ವಸ್ತುತಃ ಧ್ವನಿಕಾರನ ಅನುಯಾಯಿಯಾದ ಮಮ್ಮಟನು ಈ ಕ್ರಮವನ್ನು ಬಿಟ್ಟುಕೊಟ್ಟು ಧ್ವನಿಯ ಭೇದಗಳ ನಿರೂಪಣೆಗೆ ಈ ನಾಲ್ಕನೆಯ ಉಲ್ಲಾಸದಲ್ಲಿ ಹೊರಡುತ್ತಿದ್ದಾನೆ, ಕಾವ್ಯಕ್ಕೆ ಪ್ರಾಣಸ್ವರೂಪವಾದ ರಸತತ್ತ್ವದ ವಿವೇಚನೆಗೆ ಪೀಠಿಕೆಯಾಗುವಂತೆ. ಪ್ರಾಚೀನಾಲಂಕಾರಿಕರು ಅನುಸರಿಸುತ್ತಿದ್ದ ಸಾಂಪ್ರದಾಯಿಕ ನಿರೂಪಣೆಯಲ್ಲಿ ಧ್ವನಿವಿವೇಚನೆಗಾಗಲಿ, ಧ್ವನಿವಿಶೇಷವಾದ ರಸಾದಿಗಳ ಮೀಮಾಂಸೆಗಾಗಲಿ ಮಹತ್ವವಿರುತ್ತಿರಲಿಲ್ಲ. ಆನಂದವರ್ಧನನ ಮಾರ್ಗದರ್ಶನವನ್ನನುಮೋದಿಸುವ ಮಮ್ಮಟನು ಧ್ವನಿವಿವೇಚನೆಯಿಲ್ಲದ ದೋಷಾದಿವಿವರಣೆ ನಿಷ್ಪ್ರಯೋಜಕವೆಂಬುದನ್ನು ಸೂಚಿಸಿ ತನ್ನ ನೂತನಮಾರ್ಗವನ್ನು ಸಮರ್ಥಿಸಿಕೊಳ್ಳುತ್ತಿದ್ದಾನೆ. ಮಮ್ಮಟನ ಶಾಸ್ತ್ರದೃಷ್ಟಿಗೆ ದ್ಯೋತಕವಾಗಿದೆ ಈ ಸಮರ್ಥನೆ.

[2] ಸ್ಥೂಲವಾಗಿ ಕಾವ್ಯವಿಭಾಗವನ್ನು ಈ ಮೊದಲೇ ಸೂಚಿಸಿದ್ದರೂ, ಒಂದೊಂದೂ ಕಾವ್ಯಪ್ರಕಾರದ ಸ್ವರೂಪವನ್ನು ವಿವರವಾಗಿ ತಿಳಿಸಿದಲ್ಲದೆ ಅದರ ಗುಣದೋಷಾದಿವಿವೇಕ ಸಾಧ್ಯವಿಲ್ಲವೆಂಬ ಅಂಶವನ್ನು ಮಮ್ಮಟನು ಸ್ಪಷ್ಟವಾಗಿ ಬರೆಯುತ್ತಿದ್ದಾನೆ. ಸಂಸ್ಕೃತ ಅಲಂಕಾರಶಾಸ್ತ್ರದ ಇತಿಹಾಸದಲ್ಲಿ ಈ ಅಂಶದ ಮಹತ್ತ್ವ ಹೆಚ್ಚಿನದು. ದೋಷಗಳಾಗಲಿ, ಗುಣಗಳಾಗಲಿ ನಿತ್ಯವಲ್ಲ ಅಥವಾ ರಸನಿರಪೇಕ್ಷವಲ್ಲ ; ಅವು ರಸಕ್ಕೆ ತರುವ ಹಾನಿ ಅಥವಾ ಪುಷ್ಟಿಯೇ ಅವುಗಳ ಮರ್ಮ. ರಸವು 'ಉತ್ತಮಕಾವ್ಯ'ವಾದ ಧ್ವನಿಯ ಮುಖ್ಯ ಭೇದ. ಹೀಗೆ ದೋಷಾದಿ ವಿವೇಚನೆಗೆ ಮುಂಚೆ ಧ್ವನಿಭೇದನಿರೂಪಣೆ ಸಮುಚಿತವೂ ಸಾರ್ಥಕವೂ ಆಗುತ್ತದೆ. ಈ ತತ್ತ್ವವನ್ನು ಸಾಮಾನ್ಯವಾಗಿ ಮುಂದಿನ ಎಲ್ಲ ನವೀನಾಲಂಕಾರಿಕರೂ ಒಪ್ಪುತ್ತಾರೆ.

ಅವಿವಕ್ಷಿತವಾಚ್ಯವೆಂಬ 'ಧ್ವನಿ' ಯಾವುದುಂಟೋ ಅದರಲ್ಲಿ ವಾಚ್ಯಾರ್ಥವು (೧) ಅರ್ಥಾಂತರದಲ್ಲಿ ಸೇರಿಕೊಂಡಿರಬಹುದು ಅಥವಾ (೨) ಸಂಪೂರ್ಣವಾಗಿ ಮಾಯವಾಗಿಬಿಡಬಹುದು.[3]

ಲಕ್ಷಣಾಮೂಲವಾಗಿರುವುದಲ್ಲದೆ ಗೂಢವ್ಯಂಗ್ಯವೇ ಪ್ರಾಧಾನ್ಯವನ್ನು ಪಡೆದಿರುವಾಗ ಮಾತ್ರ[4] ಅವಿವಕ್ಷಿತವಾಚ್ಯವು 'ಧ್ವನಿ'ಯೆನಿಸುತ್ತದೆ. 'ಧ್ವನಿಯಲ್ಲಿ' ಎಂದು ಸಪ್ತಮೀ ವಿಭಕ್ತಿ ಕಾರಿಕೆಯಲ್ಲಿದ್ದರೂ ಅದು 'ಧ್ವನಿ'ಯೆಂಬ ಪ್ರಥಮಾರ್ಥ 'ಯಾವ', 'ಅದರಲ್ಲಿ' ಎಂಬ ಪದಗಳ ಬಲದಿಂದ ಸಿದ್ಧಿಸುತ್ತದೆ.[5] ವಾಚ್ಯವು ಅನುಪಯುಕ್ತವೆನಿಸಿ ಅರ್ಥಾಂತರದಲ್ಲಿ ಐಕ್ಯವಾಗುವುದಕ್ಕೆ ಉದಾಹರಣೆ[6] :—

ತ್ವಾಮಸ್ಮಿ ವಚ್ಮಿ ವಿದುಷಾಂ ಸಮವಾಯೋಽತ್ರ ತಿಷ್ಠತಿ।
ಆತ್ಮೀಯಾಂ ಮತಿಮಾಸ್ಥಾಯ ಸ್ಥಿತಿಮತ್ರ ವಿಧೇಹಿ ತತ್ ॥

ಒರೆವೆನಿದಂ ನಿನಗೀಗಳ್
ವರವಿಬುಧರ ನೆರವಿಯಿಲ್ಲಿ ನೆರೆದಿರ್ಪುದರಿಂ-।
ದರಿವುಳ್ಳೊಡೆ ನಿನಗಂ ಮೇ-
ಣಿರಲಪ್ಪುದು ನೀನುಮಿಲ್ಲಿ ಭಾವಿಸಿ ನೋಡಯ್ ॥[7]

ಇಲ್ಲಿ 'ಒರೆವೆಂ' ಎಂಬುದು 'ಹಿತೋಪದೇಶಮಾಡುತ್ತೇನೆ' ಎಂಬರ್ಥದಲ್ಲಿ ಪರ್ಯವಸಾನವಾಗುತ್ತದೆ.

[3] ಹೆಚ್ಚಿನ ವಿವರಗಳಿಗೆ ಇದೇ ಲೇಖಕರ ಕನ್ನಡ ಧ್ವನ್ಯಾಲೋಕ, ಉದ್ದ್ಯೋತ II ನ್ನು ನೋಡಿ.

[4] ಇದು 'ಅವಿವಕ್ಷಿತವಾಚ್ಯ'ವೆಂಬ ಮೂಲಪದದ ವಿವರಣೆ. ಎರಡನೆಯ ಉಲ್ಲಾಸದಲ್ಲಿ ಲಕ್ಷಣಾಪ್ರಪಂಚವನ್ನು ವಿವರಿಸಿಯಾಗಿರುವುದರಿಂದ ತನ್ಮೂಲಕವಾಗಿ ಧ್ವನಿಪ್ರಭೇದದ ವಿವರಣೆಗಿಲ್ಲಿ ಹೊರಟಿದ್ದಾನೆ. 'ಧ್ವನಿ'ಯೆನಿಸಬೇಕಾದರೆ ಸ್ಫುರಿಸುತ್ತಿರುವ ವ್ಯಂಗ್ಯಾಂಶವು ಸ್ಪಷ್ಟವೂ ಪ್ರಧಾನವೂ ಆಗಿರಬೇಕು. ಅದು ಅಸ್ಫುಟವೋ, ಸಂದಿಗ್ಧವೋ, ಸಮಪ್ರಧಾನವೋ, ಅಸುಂದರವೋ ಆಗಿದ್ದರೆ 'ಗುಣೀಭೂತವ್ಯಂಗ್ಯ'ವೆನಿಸುವುದೇ ಹೊರತು 'ಧ್ವನಿ'ಯೆಂಬ ಕಾವ್ಯಪ್ರಕಾರವಾಗುವುದಿಲ್ಲ.

[5] ಕಾರಿಕೆಯಲ್ಲಿ ಛಂದಸ್ಸಿನ ದೃಷ್ಟಿಯಿಂದ ವಿಭಕ್ತಿಗಳನ್ನು ಅಂತಿಂತು ಯೋಜಿಸಿದ್ದರೂ ಧ್ವನಿಯ ವಿಭಾಗನಿರೂಪಣೆಯೇ ಇಲ್ಲಿ ಪ್ರಸ್ತುತವೆಂದು ಮಮ್ಮಟನು ತಿಳಿಸುತ್ತಾನೆ.

[6] ಅರ್ಥಾತ್ ಇದು ವ್ಯಂಗ್ಯಸಹಿತವಾದ ಉಪಾದಾನಲಕ್ಷಣೆಗೆ ಉದಾಹರಣೆ.

[7] ವಿದ್ವತ್ಸಭೆಗೆ ಹೋಗುತ್ತಿರುವವನನ್ನು ಕುರಿತು ಆಪ್ತನೊಬ್ಬನು ಹೇಳುವ ಬುದ್ಧಿವಾದವಿದು.

ಕೆಲವೆಡೆಗಳಲ್ಲಿ ವಾಚ್ಯವು ಅನುಪಪನ್ನವಾಗುವ ಕಾರಣ ಸಂಪೂರ್ಣವಾಗಿಯೂ ಲುಪ್ತ ಅಥವಾ ಪರಿತ್ಯಕ್ತವಾಗುವುದಕ್ಕೆ[8] ಉದಾಹರಣೆ :—

ಉಪಕೃತಂ ಬಹು ತತ್ರ ಕಿಮುಚ್ಯತೇ
ಸುಜನತಾ ಪ್ರಥಿತಾ ಭವತಾ ಪರಮ್ ।
ವಿದಧದೀದೃಶಮೇವ ಸದಾ ಸಖೇ
ಸುಖಿತಮಾಸ್ಸ್ವ ತತಃ ಶರದಾಂ ಶತಮ್ ॥

ಪಿರಿದಯ್ ನಿನ್ನುಪಕಾರಂ
ಪರಮಂ ಸೌಜನ್ಯಮಾಯ್ತು ನುಡಿಯಲ್ಕಾರೆಂ ।
ಕರಮಿಂತೆಸಗುತಲನಿಶಂ
ವರಮಿತ್ರನೆ ಸುಖಮಿರಣ್ಣ ನೂರುಂ ಬರಿಸಂ ॥[9]

ಅಪಕಾರ ಮಾಡಿದವನನ್ನು ಕುರಿತು ವಿಪರೀತಲಕ್ಷಣೆ[10]ಯನ್ನಾಶ್ರಯಿಸಿ ಬಬ್ಬನು ಆಡುವ ಮಾತಿದು.

ವಿವಕ್ಷಿತಂ ಚಾನ್ಯಪರಂ ವಾಚ್ಯಂ ಯತ್ರಾಪರಸ್ತು ಸಃ । ೨ *ab* ।

ವಾಚ್ಯವು ವಿವಕ್ಷಿತವಾದರೂ ವ್ಯಂಗ್ಯಕ್ಕೆ ಪರತಂತ್ರವಾಗಿದ್ದಾಗ ಆ 'ಧ್ವನಿ' ಬೇರೆಯೆನಿಸುವುದು.[11]

'ಅನ್ಯಪರ'ವೆಂದರೆ ವ್ಯಂಗ್ಯನಿಷ್ಠ[12]ವೆಂದಭಿಪ್ರಾಯ. ಇದು [13]ಕೂಡ—

---

[8] ಇದು 'ಅತ್ಯಂತ ತಿರಸ್ಕೃತ ವಾಚ್ಯ'ವೆಂಬುದರ ವಿವರಣೆ. ಉಪಾದಾನಲಕ್ಷಣೆಯನ್ನು ಬಿಟ್ಟು ಮಿಕ್ಕ ಲಕ್ಷಣಾಪ್ರಯೋಗಗಳಲ್ಲಿ ಮಾತ್ರ ಈ ಧ್ವನಿ ಶಕ್ಯ.

[9] ಅನೇಕ ಅಪಕಾರಗಳಿಂದ ಪರಿತಪ್ತನಾದವನೊಬ್ಬನ ಮಾತೆಂದು ಮಮ್ಮಟನೇ 'ಶಬ್ದ ವ್ಯಾಪಾರ ವಿಚಾರ'ದಲ್ಲಿ ಇದರ ಸಂದರ್ಭವನ್ನು ಸೂಚಿಸಿದ್ದಾನೆ.

[10] ವಾಚ್ಯಾರ್ಥಕ್ಕೆ ತೀರ ವಿರುದ್ಧವಾದ ಅರ್ಥವನ್ನು ಕೊಡುವಂತಹ ಪದಪ್ರಯೋಗ, (ಇಂಗ್ಲಿಷಿನ *Irony* ಯನ್ನು ಹೋಲಿಸಿ) ಮೂರ್ಖನನ್ನು 'ಬೃಹಸ್ಪತಿ'ಯೆನ್ನುವಂತೆ.

[11] ಲಕ್ಷಣಾಮೂಲಧ್ವನಿಯನ್ನು ಹೇಳಿದನಂತರ ಈಗ ಅಭಿಧಾಮೂಲಧ್ವನಿಯನ್ನು ಹೇಳುತ್ತಿದ್ದಾನೆ.

[12] ಎಂದರೆ ವ್ಯಂಗ್ಯಾರ್ಥದಲ್ಲಿಯೇ ವಿಶ್ರಾಂತ ಅಥವಾ ಪರ್ಯವಸಾನಪಡೆಯುವ.

[13] ಎಂದರೆ ವಿವಕ್ಷಿತಾನ್ಯಪರವಾಚ್ಯಧ್ವನಿ.

ಕೋಽಪ್ಯಲಕ್ಷ್ಯಕ್ರಮವ್ಯಂಗ್ಯೋ ಲಕ್ಷ್ಯವ್ಯಂಗ್ಯಕ್ರಮಃ ಪರಃ ॥ ೨cd ॥

'ಅಲಕ್ಷ್ಯಕ್ರಮವ್ಯಂಗ್ಯ' ಮತ್ತು 'ಸಂಲಕ್ಷ್ಯಕ್ರಮವ್ಯಂಗ್ಯ' ಎಂಬುದಾಗಿ ಎರಡು ಬಗೆ.

'ಅಲಕ್ಷ್ಯ . . .'ವೆನ್ನಲು ಕಾರಣವಿಷ್ಟೆ[14]:—ವಿಭಾವ, ಅನುಭಾವ, ವ್ಯಭಿಚಾರಿ ಭಾವಗಳೇ ರಸವಲ್ಲ; ರಸವು ಅವುಗಳ ಮೂಲಕ ಉಂಟಾಗುತ್ತದೆ.[15] ಎಂದಮೇಲೆ ಕ್ರಮವುಂಟೆಂಬುದು ಸ್ಪಷ್ಟ. ಆದರೆ ಅತ್ಯಂತ ಶೀಘ್ರವಾಗಿ ನಡೆಯುವುದರಿಂದ ಆ ಕ್ರಮವು ಬುದ್ಧಿಗೆ ಗೋಚರವಾಗುವುದಿಲ್ಲ.[16] ಈ ಬಗೆಗಳಲ್ಲಿ—

ರಸಭಾವತದಾಭಾಸಭಾವಶಾನ್ತ್ಯಾದಿರಕ್ರಮಃ ।
ಭಿನ್ನೋ ರಸಾದ್ಯಲಂಕಾರಾದಲಂಕಾರ್ಯತಯಾ ಸ್ಥಿತಃ ॥ ೩ ॥

ರಸ, ಭಾವ, ರಸಾಭಾಸ, ಭಾವಾಭಾಸ, ಭಾವಶಾಂತಿ, ಮುಂತಾದುವು ಅಲಕ್ಷ್ಯಕ್ರಮಗಳು.[17] ಅಲಂಕಾರ್ಯವಾದ ರಸಾದಿಗಳೇ ಬೇರೆ; ಅಲಂಕಾರವೆನಿಸುವ ರಸಾದಿಗಳೇ ಬೇರೆ.[18]

---

[14] ಸುಲಭವಾಗಿ 'ಅಕ್ರಮ', 'ಸಕ್ರಮ'ವೆನ್ನಲು ಬರುವಾಗ 'ಅಲಕ್ಷ್ಯಕ್ರಮ', 'ಸಂಲಕ್ಷ್ಯಕ್ರಮ'ವೆಂದೇಕೆ ದೊಡ್ಡದಾಗಿ ಹೇಳಬೇಕು? ಈ ಪ್ರಶ್ನೆಗೆ ಮಮ್ಮಟನೇ ಸಮಾಧಾನ ಹೇಳಿದ್ದಾನೆ. ಈ ಎಲ್ಲ ವಿಭಾಗಗಳಲ್ಲೂ ಮಮ್ಮಟನು ಆನಂದವರ್ಧನನನ್ನು ಅನುಸರಿಸುತ್ತಿರುವುದು ಸ್ಪಷ್ಟ.

[15] ವಿಭಾವಾದಿಗಳು ಅಭಿವ್ಯಂಜಕಗಳಾದರೆ ಅಭಿವ್ಯಂಗ್ಯವಾದುದು ರಸ. ಹೀಗೆ ವ್ಯಂಜಕಗಳು ಮೊದಲು, ವ್ಯಂಗ್ಯವು ಅನಂತರವೆಂಬ ಕಾಲಕ್ರಮ ತಪ್ಪಿದ್ದಲ್ಲ. ವ್ಯಂಜಕವಾದ ವಿಭಾವಾದಿಯೂ ವ್ಯಂಗ್ಯವಾದ ರಸವೂ ಒಂದೇ ಎನ್ನಲವಕಾಶವಿಲ್ಲ.

[16] ಒಂದರಮೇಲೊಂದಿಟ್ಟ ನೂರಾರು ತಾವರೆ ಎಲೆಗಳನ್ನು ಒಂದೇ ಸೂಜಿ ಚುಚ್ಚುವಾಗ ಒಂದೇ ಸಲ ಅಷ್ಟು ಎಲೆಗಳನ್ನೂ ಚುಚ್ಚಿದಂತೆ ಕಂಡರೂ ಮೊದಲನೆಯ ಎಲೆಯನ್ನು ಚುಚ್ಚಿದ ಅನಂತರವೇ ಎರಡನೆಯದನ್ನು, ತದನಂತರವೇ ಮೂರನೆಯದನ್ನು, ಹೀಗೆ ಭಿನ್ನಕಾಲಗಳಲ್ಲಿಯೇ ಎಲ್ಲವನ್ನೂ ಚುಚ್ಚುವುದು ನಿರ್ವಿವಾದ. ಆದರೂ ಅತ್ಯಂತ ಸೂಕ್ಷ್ಮವಾದ ಆ ಕಾಲಭೇದಗಳನ್ನು ಸಾಮಾನ್ಯವಾಗಿ ಯಾರೂ ಪರಿಗಣಿಸುವುದಿಲ್ಲ. ಇದೇ ದೃಷ್ಟಾಂತವನ್ನು ವ್ಯಂಜಕವಿಭಾವಾದಿಗಳ ಮತ್ತು ವ್ಯಂಗ್ಯರಸದ ಪ್ರತೀತಿಗೂ ಅನ್ವಯಿಸಿಕೊಳ್ಳಬಹುದು. ಇದನ್ನು 'ಶತಪತ್ರಪತ್ರಶತಭೇದನನ್ಯಾಯ'ವೆನ್ನುತ್ತಾರೆ.

[17] ಇವೆಲ್ಲವನ್ನೂ ಇದೇ ಉಲ್ಲಾಸದಲ್ಲಿ ಮುಂದೆ ವಿವರಿಸಲಾಗಿದೆ.

[18] ಈ ತತ್ತ್ವವನ್ನೂ ಮೊದಲು ಸ್ಥಾಪಿಸಿದ ಕೀರ್ತಿ ಆನಂದವರ್ಧನನದೇ. ಹೋಲಿಸಿ—"ಕನ್ನಡ ಧ್ವನ್ಯಾಲೋಕ".

ಮುಂತಾದುವು ' ಎನ್ನುವುದರಿಂದ ಭಾವೋದಯ, ಭಾವಸಂಧಿ, ಭಾವಶಬಲತೆ ಗಳನ್ನೂ ಸೇರಿಸಿಕೊಳ್ಳಬೇಕು. ಎಲ್ಲೆಲ್ಲಿ ರಸಾದಿಗಳು ಪ್ರಧಾನವಾಗಿರುವುವೋ ಅಲ್ಲೆಲ್ಲ ಅವು ಅಲಂಕಾರ್ಯಗಳೇ (ಹೊರತು ಅಲಂಕಾರಗಳಲ್ಲ). ಉದಾಹರಣೆಗಳನ್ನು ಮುಂದೆ ಕೊಡಲಾಗಿದೆ. ಉಳಿದೆಡೆಗಳಲ್ಲಿ, ಎಂದರೆ, ಬೇರೊಂದು ವಾಕ್ಯಾರ್ಥಕ್ಕೆ ಅಂಗವಾಗಿ ರಸಾದಿಗಳು ಬರುತ್ತಿದ್ದರೆ, ಅಂತಹ ' ಗುಣೀಭೂತವ್ಯಂಗ್ಯ ' ಕಾವ್ಯದಲ್ಲಿ ' ರಸವತ್ ', ' ಪ್ರೇಯ', ' ಊರ್ಜಸ್ವಿ', ' ಸಮಾಹಿತ' ಮುಂತಾದುವು ಅಲಂಕಾರಗಳಾಗುತ್ತವೆ.[19] ಅವುಗಳನ್ನು ' ಗುಣೀಭೂತವ್ಯಂಗ್ಯ ' ನಿರೂಪಣೆಯನ್ನು ಮಾಡುವಾಗ ಉದಾಹರಿಸುತ್ತೇವೆ.

ಈಗ ರಸದ ಸ್ವರೂಪವನ್ನು ಹೇಳುತ್ತಾನೆ—

ಕಾರಣಾನ್ಯಥ ಕಾರ್ಯಾಣಿ ಸಹಕಾರೀಣಿ ಯಾನಿ ಚ |
ರತ್ಯಾದೇಃ ಸ್ಥಾಯಿನೋ ಲೋಕೇ ತಾನಿ ಚೇನ್ನಾಟ್ಯಕಾವ್ಯಯೋಃ ॥ ೪ ॥

ವಿಭಾವಾ ಅನುಭಾವಾಶ್ಚ ಕಥ್ಯಂತೇ ವ್ಯಭಿಚಾರಿಣಃ |
ವ್ಯಕ್ತಃ ಸ ತೈರ್ವಿಭಾವಾದ್ಯೈಃ ಸ್ಥಾಯೀ ಭಾವೋ ರಸಃ ಸ್ಮೃತಃ ॥ ೫ ॥

ಜೀವನದಲ್ಲಿ ' ರತಿ 'ಯೇ ಮುಂತಾದ ಸ್ಥಾಯಿಭಾವಗಳಿಗೆ ಯಾವವು ಕಾರಣ, ಕಾರ್ಯ, ಮತ್ತು ಸಹಕಾರಿಗಳೆನಿಸುವುವೋ, ಅವೇ, ದೃಶ್ಯ ಅಥವಾ ಶ್ರವ್ಯಕಾವ್ಯ

---

[19] ರಸವು ಅಂಗವಾದಾಗ ರಸವದಲಂಕಾರವೆಂದೂ, ಭಾವವು ಅಲಂಕಾರವಾದಾಗ ಪ್ರೇಯೋಲಂಕಾರವೆಂದೂ, ರಸಾಭಾಸ ಅಥವಾ ಭಾವಾಭಾಸಗಳು ಅಲಂಕಾರವಾದಾಗ ಊರ್ಜಸ್ವಿಯೆಂಬಲಂಕಾರವೆಂದೂ ಭಾವಶಾಂತಿ ಅಂಗವಾದಾಗ ಸಮಾಹಿತಾಲಂಕಾರವೆಂದೂ ಬಾಲಬೋಧಿನೀಕಾರರು ಬರೆಯುತ್ತಾರೆ. ಈ ರಸವದಾದ್ಯಲಂಕಾರಗಳನ್ನು ಐದನೆಯ ಉಲ್ಲಾಸದಲ್ಲಿ ಮಮ್ಮಟನೇ ' ಗುಣೀಭೂತವ್ಯಂಗ್ಯ ' ಪ್ರಕರಣದಲ್ಲಿ ಉದಾಹರಿಸಿದ್ದಾನೆ; ಆದರೆ ಶಬ್ದಾರ್ಥಾಲಂಕಾರಗಳನ್ನು ವಿವೇಚಿಸುವ ೯-೧೦ ನೆಯ ಉಲ್ಲಾಸಗಳಲ್ಲಿ ಇವನ್ನು ಸೇರಿಸುವುದಿಲ್ಲ. ಪ್ರಾಚೀನರು ' ಅಲಂಕಾರ' ವೆಂಬ ಸಂಜ್ಞೆಯ ವಿಶಾಲವ್ಯಾಪ್ತಿಯಲ್ಲಿ ಉಪಮಾದಿಗಳಂತೆ ರಸಾದಿಗಳನ್ನೂ ತರುತ್ತಿದ್ದರು. ಆನಂದವರ್ಧನನು ಇದಕ್ಕೆ ಮೊದಲು ಆಕ್ಷೇಪಿಸಿದನು. ಮಮ್ಮಟನೂ ಕೂಡ ಅವನಂತೆಯೇ ಅಲಂಕಾರವಾಗುವ ರಸಾದಿ ಮತ್ತು ಅಲಂಕಾರ್ಯವಾಗುವ ಪ್ರಧಾನರಸವೆಂಬ ವಿಭಾಗವನ್ನಿಲ್ಲಿ ಪ್ರಸ್ತಾಪಿಸುತ್ತಿದ್ದಾನೆ. ರಸವು ಉದ್ದಿಷ್ಟವಾದ ಅರ್ಥಾಂತರಕ್ಕೆ ಪೋಷಕವಾದಾಗ ಉಪಮಾದಿಗಳಂತೆಯೇ ಅಲಂಕಾರವೆನಿಸುತ್ತದೆ. ಆ ಕಾವ್ಯವನ್ನು ' ಮಧ್ಯಮಕಾವ್ಯ'ವೆನ್ನಬೇಕೇ ಹೊರತು ರಸವಿವಕ್ಷೆಯೇ ಪ್ರಧಾನವಾದ ' ಧ್ವನಿ 'ಕಾವ್ಯವೆಂದಲ್ಲ. ಇದರ ವಿಸ್ತೃತ ವಿವೇಚನೆಗೆ ಇದೇ ಲೇಖಕರ ಆನಂದವರ್ಧನನ ಕಾವ್ಯಮೀಮಾಂಸೆ, ಪುಟ ೮೫-೮೭ ನ್ನು ನೋಡಿ.

ಗಳಲ್ಲಿ ಬಂದಾಗ 'ವಿಭಾವ', 'ಅನುಭಾವ', ಮತ್ತು 'ವ್ಯಭಿಚಾರಿ' ಗಳೆನಿಸುತ್ತವೆ. ಆ ವಿಭಾವಾದಿಗಳಿಂದ ಅಭಿವ್ಯಕ್ತವಾಗುವ ಸ್ಥಾಯಿಭಾವಕ್ಕೆ ರಸವೆಂದು ಹೆಸರು.[20]

---

[20] ವ್ಯಾವಹಾರಿಕ ಜಗತ್ತಿಗೂ ಕಾವ್ಯಜಗತ್ತಿಗೂ ಇರುವ ವ್ಯತ್ಯಾಸವನ್ನು ಈ ಲಕ್ಷಣವು ಎತ್ತಿ ತೋರಿಸುತ್ತದೆ. ನಿತ್ಯಜೀವನದಲ್ಲಿ ಪ್ರತಿಕ್ಷಣವೂ ಮನುಷ್ಯರ ಚಿತ್ತವೃತ್ತಿಗಳು ಪ್ರಕಾಶಕ್ಕೆ ಬರುತ್ತವೆ. ಚಿತ್ತವೃತ್ತಿಗಳೇ ಮನುಷ್ಯರ ವ್ಯವಹಾರಕ್ಕೆ ಪ್ರಚೋದಕಗಳು. ಇವನ್ನೇ 'ಭಾವ' ಅಥವಾ 'ಮನೋಭಾವ'ವೆನ್ನುತ್ತೇವೆ. ಇವುಗಳಲ್ಲಿ ಕಾರ್ಯದ ಆರಂಭದಿಂದ ಕಡೆಯ ವರೆಗೂ ಅನುಸ್ಯೂತವಾಗಿ ಉಳಿಯುವ ಭಾವಗಳನ್ನು 'ಸ್ಥಾಯಿ'ಗಳೆಂದೂ ಕ್ಷಣಕ್ಷಣವೂ ಬೇರೆಬೇರೆಯಾಗುವ ವೃತ್ತಿಗಳನ್ನು 'ಸಂಚಾರಿ'ಗಳೆಂದೂ ತಿಳಿಯಬಹುದು. ಜೀವನದಲ್ಲಿ ನಡೆಯುವ ಘಟನೆಗಳು ಅನಿಯತವಾದ ಪ್ರಯುಕ್ತ ಯಾವ ಒಬ್ಬ ವ್ಯಕ್ತಿಯಲ್ಲಿಯೂ ಅನುಗತವಾದ ರತ್ಯಾದಿ ಚಿತ್ತವೃತ್ತಿಗಳನ್ನು ಕಾಣುವುದು ಕಷ್ಟ. ಕಾರಣಗಳು ಬದಲಾದಂತೆ ಚಿತ್ತವೃತ್ತಿಗಳೂ ಬೇರೆಯಾಗುತ್ತವೆ; ಅವುಗಳ ಪ್ರಕಾಶದ ಪರಿಯೂ ಬೇರೆಯಾಗುತ್ತದೆ. ಆದರೆ ಸಾಹಿತ್ಯದಲ್ಲಿ ಜೀವನದ ಅನಿಯತತ್ವವು ತಪ್ಪಿ ಕವಿಯ ಪ್ರತಿಭೆಯ ಪ್ರಭಾವದಿಂದ ಹೊಸದೊಂದು ಸಮನ್ವಯವು ಚಿತ್ತವೃತ್ತಿಗಳ ಕಾರಣ, ಕಾರ್ಯ, ಸಹಕಾರಿಗಳಲ್ಲಿ ಸೇರಿಕೊಳ್ಳುತ್ತದೆ. ಹೀಗೆ ಸೇರಿಕೊಂಡಾಗ ಮಾತ್ರ ಕಾವ್ಯವು ಆಸ್ವಾದ್ಯವಾಗುತ್ತದೆ; ಚಮತ್ಕಾರ ಪೂರ್ಣವಾಗುತ್ತದೆ; ಸುಂದರವೆನಿಸುತ್ತದೆ. ಎಂದಮೇಲೆ ನಾಟಕವೇ ಆಗಲಿ, ಪದ್ಯಕೃತಿಯೇ ಆಗಲಿ, ಕಾವ್ಯದ ಜೀವಾಳವೆಂದರೆ ಅದರ ಸೌಂದರ್ಯ ಅಥವಾ ಚಮತ್ಕಾರ. ಇದನ್ನೇ ರಸವೆನ್ನುವುದು ಭಾರತೀಯ ಕಾವ್ಯಮೀಮಾಂಸೆಯ ಪರಿಭಾಷೆ. ಆದ್ದರಿಂದ ಪಾರಿಭಾಷಿಕವಾಗಿ 'ರಸ'ದ ಲಕ್ಷಣವನ್ನು ಹೇಳುವಾಗ ಅದು ಸಾಹಿತ್ಯಕ್ಕೆಲ್ಲ ಅನ್ವಯಿಸುವ ಕಲಾನಿಯತ ರಹಸ್ಯವನ್ನು ಗರ್ಭೀಕರಿಸುವಂತೆ ಶಾಸ್ತ್ರಕಾರನು ಎಚ್ಚರಿಕೆ ವಹಿಸಬೇಕಾಗುತ್ತದೆ. ಈ ಎಚ್ಚರಿಕೆಯಿರುವುದರಿಂದಲೇ ಮಮ್ಮಟನು ಲೋಕದಲ್ಲಿರುವುದೆಲ್ಲದರ ಪ್ರತಿಬಿಂಬದಿಂದಲೇ ಸಾಹಿತ್ಯದಲ್ಲಿ ರಸವುಂಟಾಗುವುದೆನ್ನದೆ ಲೋಕದಲ್ಲಿ ದೃಶ್ಯವಾದ ಸ್ಥಾಯಿಭಾವಗಳ ಕಾರಣ, ಕಾರ್ಯ, ಸಹಕಾರಿಗಳು ಮಾತ್ರ ಲೋಕಾತೀತ ಹಾಗು ನಿಯತವಾದ ಕಾರ್ಯ-ಕಾರಣ-ಸಹಕಾರಿ ಸಂಬಂಧವನ್ನುಳಿಸಿಕೊಂಡು ಸಾಹಿತ್ಯದಲ್ಲಿ ಪ್ರತಿಬಿಂಬಿತವಾದಾಗ ಅವುಗಳ ಈ ನೂತನ ಸಂಯೋಜನೆಯ ಫಲವಾಗಿ ಸ್ಥಾಯಿಭಾವಕ್ಕೆ ರಸತ್ವವೂ, ಕಾರಣಗಳಿಗೆ ವಿಭಾವತ್ವವೂ, ಕಾರ್ಯಗಳಿಗೆ ಅನುಭಾವತ್ವವೂ, ಸಹಕಾರಿಗಳಿಗೆ ವ್ಯಭಿಚಾರಿಭಾವತ್ವವೂ ಸಿದ್ಧಿಸುವುದೆಂದಿರುವುದು. ವಿಶಿಷ್ಟರೀತಿಯಿಂದ, ಕಲಾಮಯವಾಗಿ ಪ್ರಕಾಶಿತವಾದ ಚಿತ್ತವೃತ್ತಿಗಳೇ ರಸಗಳೆಂದಂತಾಯಿತು. ರತಿಯೆಂಬ ಸ್ಥಾಯಿಭಾವ ಶೃಂಗಾರರಸವಾಗಬೇಕಾದರೆ ಅದಕ್ಕೆ ಆಲಂಬನರಾದ ಸ್ತ್ರೀಪುರುಷರೂ, ಉದ್ದೀಪಕವಾದ ಚಂದ್ರೋದಯ, ಮಂದಾನಿಲ, ಪುಷ್ಪೋದ್ಯಾನಾದಿ ಪ್ರಕೃತಿಪ್ರಪಂಚವೂ ವಿಭಾವಗಳು; ಸ್ತ್ರೀಪುರುಷರ ಪ್ರೇಮಾಲಾಪ, ಹಾವ, ಭಾವ, ಕೃತಿವಿನ್ಯಾಸಗಳೆಲ್ಲವೂ ಶೃಂಗಾರರಸದ ಕಾರ್ಯಗಳಾದ ಅನುಭಾವಗಳು; ರತಿಯ ಗಾಢತ್ವವನ್ನೇ ತೋರಿಸುವ ಕುತೂಹಲ, ಶಂಕೆ, ಮುಂತಾದ ಸಣ್ಣ ಪುಟ್ಟ ಚಿತ್ತವೃತ್ತಿಗಳೆಲ್ಲ ವ್ಯಭಿಚಾರಿ ಭಾವಗಳು. ಈ ವಿಭಾವಾನುಭಾವ ವ್ಯಭಿಚಾರಿಗಳ ಪರಿಪುಷ್ಟಿಯಿದ್ದಲ್ಲಿ ಮಾತ್ರ ಸ್ಥಾಯಿಭಾವವು ರಸಮಯವಾಗುತ್ತದೆ. ರಸವೆಂದರೆ ಸಾಮಾಜಿಕನ ಅನುಭವವೆಂದು ಮಮ್ಮಟನು ಇಲ್ಲಿ ಹೇಳದಿರುವುದು ಗಮನಾರ್ಹ. ಇದರ ಚರ್ಚೆ ಮುಂದೆ ಬರುತ್ತದೆ.

ಇದಕ್ಕೆ ಪೋಷಕವಾದ ಭರತನ[21] ಸೂತ್ರ ಹೀಗಿದೆ—"ವಿಭಾವ ಅನುಭಾವ, ವ್ಯಭಿಚಾರಿಗಳ ಸಂಯೋಗದಿಂದ ರಸನಿಷ್ಪತ್ತಿಯುಂಟಾಗುತ್ತದೆ."[22] ಇದನ್ನು ಟೀಕಾಕಾರರು ವಿಧವಿಧವಾಗಿ ವಿವರಿಸಿದ್ದಾರೆ[23] :—

ಭಟ್ಟಲೊಲ್ಲಟನೇ ಮುಂತಾದವರು ಹೀಗೆ ಹೇಳುತ್ತಾರೆ—'ರತಿಯೇ ಮುಂತಾದ ಭಾವ (=ಸ್ಥಾಯಿಭಾವ)ವು 'ವಿಭಾವ'ಗಳಿಂದ ಎಂದರೆ ಲಲನೆಯೇ ಮೊದಲಾದ ಆಲಂಬನಕಾರಣಗಳಿಂದಲೂ ಉದ್ಯಾನವೇ ಮೊದಲಾದ ಉದ್ದೀಪಕ ಸಾಮಗ್ರಿಗಳಿಂದಲೂ ಜನಿಸುತ್ತದೆ. ಆಮೇಲೆ 'ಅನುಭಾವ'ಗಳಿಂದ ಎಂದರೆ ಕಟಾಕ್ಷ, ಭುಜಾ

---

ಕಾವ್ಯಕ್ಕೂ ನಾಟ್ಯಕ್ಕೂ ಇರುವ ಭೇದ ಅಲ್ಪ. ಅನುಭಾವಾದಿಗಳ ವರ್ಣನೆ ಕಾವ್ಯವಾದರೆ ಅವುಗಳ ಪ್ರಯೋಗ ನಾಟ್ಯವೆನಿಸುತ್ತದೆ. ಹೋಲಿಸಿ—

'ಅನುಭಾವವಿಭಾವಾನಾಂ ವರ್ಣನಾ ಕಾವ್ಯಮುಚ್ಯತೇ |
ತೇಷಾಮೇವ ಪ್ರಯೋಗಸ್ತು ನಾಟ್ಯಂ ಗೀತಾದಿರಂಜಿತಃ ||'
(ಸಾಹಿತ್ಯಚೂಡಾಮಣಿಯಲ್ಲಿ ಉದಾಹೃತ)

ಲೋಕದ ಕಾರಣಾದಿಗಳಿಗೂ ಸಾಹಿತ್ಯದ ವಿಭಾವಾದಿಗಳಿಗೂ ಸ್ವರೂಪಭೇದವುಂಟಾಗಲು ಕವಿಪ್ರತಿಭೆಯೇ ಕಾರಣ. ಹೋಲಿಸಿ—

'ಕವಿಶಕ್ತ್ಯರ್ಪಿತಾ ಭಾವಾಸ್ತನ್ಮಯೀಭಾವಯುಕ್ತಿತಃ |
ಯಥಾ ಸ್ಫುರಂತ್ಯಮೀ ಭಾವಾ ನ ತಥಾಧ್ಯಕ್ಷತಃ ಕಿಲ ||'
(ಸಾಹಿತ್ಯಚೂಡಾಮಣಿಯಲ್ಲಿ ಉದಾಹೃತ)

[21] ರಸಪ್ರಕ್ರಿಯೆಗೆ ಸಂಬಂಧಿಸಿದ ಪ್ರಥಮಗ್ರಂಥ **ನಾಟ್ಯಶಾಸ್ತ್ರ.** ಇದರ ಕರ್ತೃ ಭರತ. ಆತನ ಪ್ರಾಚೀನತೆ ಮತ್ತು ಗ್ರಂಥಮಹತ್ವಗಳ ಪ್ರಯುಕ್ತ ಮುಂದಿನವರು 'ಮುನಿ'ಯೆಂದು ಆತನನ್ನು ಗೌರವಿಸಿದ್ದಾರೆ. ಆತನ ರಸಸೂತ್ರವೇ ಮುಂದಿನ ತತ್ವಚಿಂತಕರಿಗೆಲ್ಲ ತಳಹದಿ.

[22] ಈ ಸೂತ್ರದ ಮಾತುಗಳನ್ನೆಲ್ಲ ಮಮ್ಮಟನು ಮೂಲಕಾರಿಕೆಯಲ್ಲಿ ಬಳಸಿಕೊಂಡಿದ್ದಾನೆ—ವಿವಾದಕ್ಕೆಡೆಯಾಗಬಾರದೆಂದು.

[23] ಭರತನ ನಾಟ್ಯಶಾಸ್ತ್ರಕ್ಕೆ ಮೇಲಿಂದ ಮೇಲೆ ಅನೇಕರು ವ್ಯಾಖ್ಯಾನಗಳನ್ನು ಬರೆದರೂ ಇಂದು ನಮಗೆ ಉಪಲಬ್ಧವಿರುವುದು ಕಡೆಗೆ ಬರೆದ ಅಭಿನವಗುಪ್ತನದು ಮಾತ್ರ. ಅಭಿನವಗುಪ್ತನೇ ತನಗಿಂತ ಹಿಂದಿನವರ ಅಭಿಪ್ರಾಯಗಳನ್ನು ಉಲ್ಲೇಖಿಸಿರುವುದರಿಂದ ರಸತತ್ವದ ಚರ್ಚೆಗೆ ಎಷ್ಟೋ ಸಹಾಯವಾಗಿದೆ. ಈ ಪ್ರಾಚೀನ ಟೀಕಾಕಾರರಲ್ಲಿ ಮುಖ್ಯರಾದವರು ಲೊಲ್ಲಟ, ಶಂಕುಕ ಮತ್ತು ಭಟ್ಟನಾಯಕ. ಎಲ್ಲರೂ ಕಾಶ್ಮೀರದವರು. ಸುಮಾರು ಕ್ರಿ.ಶ. ೯ ಮತ್ತು ೧೦ ನೆಯ ಶತಮಾನಗಳಲ್ಲಿದ್ದವರು. ಮಮ್ಮಟನು ಅಭಿನವಗುಪ್ತನ ಅಭಿನವ ಭಾರತಿಯನ್ನೇ ಅನುಸರಿಸಿ ಇವರೆಲ್ಲರ ಮತಭೇದವನ್ನೂ ಸಂಗ್ರಹಿಸುತ್ತಿದ್ದಾನೆ. ಇದು ಸರಿ, ಇದು ತಪ್ಪು, ಎಂಬ ನಿರ್ಣಯವನ್ನು ಹೇಳಲು ಹೊರಟಂತಿಲ್ಲ. ಭರತನ ಸೂತ್ರದಷ್ಟೇ ಮಮ್ಮಟನ ಕಾರಿಕೆಗಳೂ ಅನೇಕ ವಿವರಣೆಗಳಿಗೆಲ್ಲ ಆಸ್ಪದವೀಯುವಂತಿವೆ.

ಕ್ಷೇಪ, ಮೊದಲಾದ ಕಾರ್ಯಗಳಿಂದ ಪ್ರತೀತಿಯೋಗ್ಯವಾಗಿ ಪರಿಣಮಿಸುತ್ತದೆ. ಹಾಗೆಯೇ 'ವ್ಯಭಿಚಾರಿ'ಗಳಿಂದ ಎಂದರೆ ನಿರ್ವೇದ ಮೊದಲಾದ ಸಹಕಾರಿ ಭಾವಗಳಿಂದ ಪುಷ್ಟಿಯನ್ನು ಪಡೆದು ರಸವೆನಿಸುತ್ತದೆ. ಹೀಗೆ ರಸವು ಮೂಲತಃ 'ಅನುಕಾರ್ಯ'ನಾದ ರಾಮಾದಿಗಳಲ್ಲಿಯೂ, ಆ ರೂಪವನ್ನು ತಳೆದು ಅಭಿನಯಿಸುವುದರಿಂದ ನಟರಲ್ಲಿಯೂ ಕಾಣಬರುತ್ತದೆ.[24]

---

[24] ವಿಭಾವಾನುಭಾವ ವ್ಯಭಿಚಾರಿಗಳ ಸಂಯೋಗದಿಂದ ಪರಿಪುಷ್ಟವಾದ ಸ್ಥಾಯಿಭಾವವೇ ರಸತ್ವವನ್ನು ಪಡೆಯುತ್ತದೆಂಬುದು ಲೊಲ್ಲಟನ ತಾತ್ಪರ್ಯ (ಮಾಣಿಕ್ಯಚಂದ್ರ). 'ಸ್ಥಾಯಿಭಾವಗಳು ವಿಭಾವಗಳಿಂದ ಮೊಟ್ಟಮೊದಲು ಉತ್ಪನ್ನವಾಗುತ್ತವೆ; ಆಮೇಲೆ ಅನುಭಾವಗಳಿಂದ ಪ್ರತೀತಿಯೋಗ್ಯವಾಗಿ ಕಡೆಗೆ ವ್ಯಭಿಚಾರಿಭಾವಗಳಿಂದ ಪರಿಪುಷ್ಟವಾಗಿ ರಸತ್ವವನ್ನು ಪಡೆಯುತ್ತವೆ' ಎಂಬ ಈ ವಾದದಲ್ಲಿ, ಲೋಕದಲ್ಲಿ ವಾಸನಾತ್ಮಕವಾಗಿ ಸಿದ್ಧವಾದ ಸ್ಥಾಯಿಭಾವಗಳೇ ಬೇರೆ, ಕಾವ್ಯಲೋಕದಲ್ಲಿ ವಿಭಾವಾದಿಗಳಿಂದ ಹುಟ್ಟುವ ಸ್ಥಾಯಿಭಾವಗಳೇ ಬೇರೆ ಎಂಬ ಮುಖ್ಯ ತತ್ತ್ವವು ಅಡಕವಾಗಿದೆ. ಕವಿಸೃಷ್ಟಿಯಲ್ಲಿ ಮಾತ್ರ ರಸವು ಸಾಧ್ಯವೆಂಬುದನ್ನು ಇದು ಒತ್ತಿ ತೋರಿಸುತ್ತದೆ. ಆದ್ದರಿಂದಲೇ ಲೊಲ್ಲಟನ ವಾದಕ್ಕೆ **ಉತ್ಪತ್ತಿ**ವಾದವೆಂದೂ ಹೆಸರು. (ಹೋಲಿಸಿ—ಮಲ್ಲಿನಾಥನ ಏಕಾವಲೀ ವ್ಯಾಖ್ಯಾನ, ಪುಟ ೮೫) ಲೊಲ್ಲಟನ ಈ ಮತವೇ ಕಾಳಿದಾಸ, ಭವಭೂತಿ, ದಂಡಿ, ಮುಂತಾದ ಪ್ರಾಚೀನರಿಗೆಲ್ಲರಿಗೂ ಅಭಿಮತವಾದುದೆಂಬುದನ್ನು ಈ ಸಂದರ್ಭದಲ್ಲಿ ನೆನೆಯಬಹುದು. ಸಹೃದಯರ ಚಿತ್ತಭಿತ್ತಿಯಿಂದ ಹೊರಗೆ ಅನೇಕ ರಸಗಳ ಸ್ವತಂತ್ರ ಅಸ್ತಿತ್ವವನ್ನೂ, ಕವಿಕಲ್ಪಿತ ರಾಮಾದಿಗಳಲ್ಲಿ, ಇಲ್ಲವೆ ಅಭಿನೇತೃಗಳಲ್ಲಿ ಸ್ಥಾಯಿಭಾವವು ಪರಿಪುಷ್ಟವಾಗಿ ರಸತ್ವವನ್ನು ಪಡೆಯುವುದೆಂಬುದನ್ನೂ ಹೇಳುವವರೆಲ್ಲ ಲೊಲ್ಲಟನ ಪಕ್ಷದ ಸಮರ್ಥಕರೇ. (ಹೋಲಿಸಿ—'ತನ್ಮಯತ್ವಂ ರಸೇಷು'—ಕಾಳಿದಾಸ; 'ಪುಟಪಾಕಪ್ರತೀಕಾಶೋ ರಾಮಸ್ಯ ಕರುಣೋ ರಸಃ'—ಭವಭೂತಿ; 'ರತಿಃ ಶೃಂಗಾರತಾಂ ಯಾತಾ'—ದಂಡಿ; 'ಶೋಕಃ ಶ್ಲೋಕತ್ವಮಾಗತಃ' ಎಂಬ ವಾಕ್ಯವೂ ಶ್ಲೋಕವೆಂದರೆ ರಸವದ್ರಚನೆಯೆಂಬ ಅನುಗತಾರ್ಥವನ್ನಿಟ್ಟುಕೊಂಡರೆ ಈ ವಾದಕ್ಕೇ ಪುಷ್ಟಿಯೀಯುತ್ತದೆ. ಈ ವಾಕ್ಯವನ್ನು ಕಾಳಿದಾಸ ಮತ್ತು ಆನಂದವರ್ಧನರೂ ಉಚ್ಚರಿಸಿದ್ದಾರೆ.) ಲೊಲ್ಲಟನ ಈ ವಿವರಣೆ ತತ್ತ್ವದೃಷ್ಟಿಯಿಂದ ಹೇಗೇ ಇರಲಿ, ಭರತನ ಸೂತ್ರದ ತಾತ್ಪರ್ಯನಿರೂಪಣೆಯ ದೃಷ್ಟಿಯಿಂದ ಅತ್ಯಂತ ಸಮೀಚೀನವಾಗಿದೆ. ಏಕೆಂದರೆ ಭರತಸೂತ್ರದಲ್ಲಿಲ್ಲದ ಆದರೆ ಲೊಲ್ಲಟನು ಅಧ್ಯಾಹಾರಮಾಡುವ ಒಂದೇ ಪದವೆಂದರೆ—'ಸ್ಥಾಯಿಭಾವ'. ವಿಭಾವವೆಂದರೆ ಸ್ಥಾಯಿಭಾವದ ಆಲಂಬನ ಅಥವಾ ಉದ್ದೀಪನ ಕಾರಣಗಳೇ ಹೊರತು ಬೇರೆಯಲ್ಲ. ಅನುಭಾವವೆಂದರೂ ಸ್ಥಾಯಿಭಾವವನ್ನು ಅನುವರ್ತಿಸಿ ಬರುವ ಕಾರ್ಯಗಳೆಂದೇ ತಾತ್ಪರ್ಯ. ವ್ಯಭಿಚಾರಿಭಾವಗಳೂ ಸ್ಥಾಯಿಭಾವಗಳಿಗೆ ಪ್ರತಿಯಾಗಿ ಬಂದು ಹೋಗತಕ್ಕ ಭಾವಗಳೇ. ಈ ಮೂರು ಶಬ್ದಗಳಲ್ಲಿಯೂ **ಭಾವ** ಎಂಬ ಸಮಾನಸಂಜ್ಞೆಯಿದೆ; ಉಪಸರ್ಗಗಳು ಮಾತ್ರ ಬೇರೆಯಾಗಿವೆ—**ವಿ, ಅನು** ಮತ್ತು **ವ್ಯಭಿ**. ಈ ಸಮಾನಾಂಶವಾದ **ಭಾವ** ಎಂಬುದಕ್ಕೆ ಪ್ರಸಿದ್ಧವಾದ ಸ್ಥಾಯಿಭಾವವೆಂಬ ಒಂದೇ ಅರ್ಥ ಸಮೀಚೀನವಾದ್ದರಿಂದ ರಸಸೂತ್ರದಲ್ಲಿ ಸ್ಥಾಯಿಭಾವವು ಶಬ್ದತಃ ಉಕ್ತವಾಗದಿದ್ದರೂ ಅರ್ಥಾತ್ ಸಿದ್ಧವೆಂದು ಲೊಲ್ಲಟನು ಭಾವಿಸಿದ್ದರಲ್ಲಿ ಯಾವ ಕ್ಲಿಷ್ಟಕಲ್ಪನೆಯೂ

ಶಂಕುಕನ ವಿವರಣೆ ಹೀಗಿದೆ—"'ರಾಮನೇ ಇವನು', 'ಇವನೇ ರಾಮ', ಎಂಬ ಪ್ರತೀತಿಗಳು ಉತ್ತರ ಕ್ಷಣದಲ್ಲಿಯೇ ಬರುವ 'ಇವನು ರಾಮನಲ್ಲ' ಎಂಬ ಪೂರ್ವಗ್ರಹವೂ ತೋರುವುದಿಲ್ಲ. ಉಳಿದ ವಿವರಣೆಗಳಲ್ಲಿಯೇ ಈ ಬಗೆಯ ದೋಷಗಳಿಗೆ ಹೆಚ್ಚಿನ ಆಸ್ಪದವಿದೆ.

ಮಮ್ಮಟನ ಮೂಲಕಾರಿಕೆಗಳನ್ನೂ ಲೊಲ್ಲಟನ ಮತಕ್ಕನುಸಾರವಾಗಿ ನಯನಮಾಡಿಕೊಳ್ಳುವುದು ಸುಲಭ. ಆದರೆ ಅಲ್ಲಿ 'ವ್ಯಕ್ತ' ಎಂದಿರುವುದು ಭಟ್ಟಗೋಪಾಲನೇ ಮುಂತಾದವರ ಅಭಿಪ್ರಾಯದಲ್ಲಿ ಲೊಲ್ಲಟನ ಉತ್ಪತ್ತಿವಾದಕ್ಕೆ ವಿಸಂಗತ. ವಸ್ತುತಃ ಲೊಲ್ಲಟನೇ ಉಪಯೋಗಿಸಿರುವ 'ಪ್ರತೀಯಮಾನ ಎಂಬ ಪದದಂತೆ 'ವ್ಯಕ್ತ' ಎಂಬುದಕ್ಕೂ ಸ್ಥೂಲವಾಗಿ 'ಅರಿವಿಗೆ ಬರುವ' ಎಂದರ್ಥ ಮಾಡಲವಕಾಶವಿದೆ. ಧ್ವನಿವಾದಿಗಳು ಹೇಳುವ ವಿಶಿಷ್ಟಾರ್ಥವೇ ಅಭಿಪ್ರೇತವೆಂದು ಪ್ರತಿಜ್ಞೆ ಮಾಡುವಂತಿಲ್ಲ.

ಅಲ್ಲದೆ ಧ್ವನಿಸಿದ್ಧಾಂತ ಧುರಂಧರನಾದ ಆನಂದವರ್ಧನನೇ ತನ್ನ ಗ್ರಂಥದುದ್ದಕ್ಕೂ ರಸ, ರಸಾದಿ, ರಸಭಾವಾದಿ ಎಂಬ ಶಬ್ದಗಳನ್ನು ಲೆಕ್ಕವಿಲ್ಲದಷ್ಟು ಕಡೆ ಪ್ರಯೋಗಮಾಡಿದ್ದರೂ ಎಲ್ಲಿಯೂ ಸಹ 'ಸಾಮಾಜಿಕನ ಸೌಂದರ್ಯಾನುಭವ' ಎಂಬರ್ಥದಲ್ಲಿ ಪ್ರಯೋಗಿಸಿದಂತಿಲ್ಲ. ಈ ಅರ್ಥವನ್ನು ಹೇಳುವುದು ಅಭಿನವಗುಪ್ತ ಮಾತ್ರ. ಈ ಅರ್ಥವು ಸರಿಯಾದರೆ ಸಹೃದಯನ ಕಾವ್ಯಚರ್ವಣಾ ಸಮಯದಲ್ಲಿ ಮಾತ್ರ ಇರತಕ್ಕ ರಸಾನುಭವಕ್ಕೆ ಮಾಧುರ್ಯಾದಿಗಳು ಗುಣವೆನಿಸುವುದೂ (ಅದೂ ಆತ್ಮಕ್ಕೆ ಶೌರ್ಯಾದಿಗಳಂತೆ!), ಉಪಮಾದಿಗಳು ಆ ಅನುಭವದ ಅಂಗದ್ವಾರಾ ಅಲಂಕಾರಗಳೆನಿಸುವುದೂ (ಅಂಗಕ್ಕೆ ಹಾರಾದಿಗಳಂತೆ!) ಅನನ್ವಿತವಾಗಿ ತೋರುತ್ತದೆ. ಆದರೆ ಮಮ್ಮಟನೇ ಈ ಮಾತುಗಳನ್ನು ಎಂಟನೆಯ ಉಲ್ಲಾಸದಲ್ಲಿ ಹೇಳಿದ್ದಾನೆ. ಅಷ್ಟೇ ಅಲ್ಲ; ಏಳನೆಯ ಉಲ್ಲಾಸದ ಆದಿಯಲ್ಲಿ ರಸವನ್ನು ಕಾವ್ಯದ 'ಮುಖ್ಯಾರ್ಥ'ವೆಂದಿದ್ದಾನೆ; ಅದೇ ಉಲ್ಲಾಸದ ಕಡೆಯಲ್ಲಿ 'ರಸ'ವೆಂಬ ಶಬ್ದಕ್ಕೆ ಅದರ ಸ್ಥಾಯಿಭಾವವೆಂದು ತಾತ್ಪರ್ಯವನ್ನೂ ಹೇಳುತ್ತಾನೆ. ಈ ಎಲ್ಲ ಪ್ರಯೋಗಗಳ ಆಧಾರದ ಮೇಲಿಂದ ಮಮ್ಮಟನು ಮೇಲ್ನೋಟಕ್ಕೆ ಚರ್ಚಾಗ್ರಸ್ತವಾಗದಂತೆ ಬರೆದಿದ್ದರೂ, ಅವನ ಅಂತರಂಗವು ಲೊಲ್ಲಟನ ವಿವರಣೆಗೇ ಹೆಚ್ಚು ಓಲುತ್ತದೆಯೆನ್ನಬಹುದು. ಇದನ್ನರಿತ ಅಭಿನವಗುಪ್ತರು ರಸವೊಂದು ಬಾಹ್ಯವಸ್ತುವೆನ್ನುವಂತಹ ಪ್ರಯೋಗಗಳನ್ನೆಲ್ಲ 'ಅನ್ನವನ್ನು ಬೇಯಿಸುತ್ತಾನೆ' ಎಂಬ ಪ್ರಯೋಗದಂತೆ ಗೌಣಾರ್ಥದಲ್ಲಿ ತೆಗೆದುಕೊಳ್ಳಬೇಕೆಂದು ಹೇಳುತ್ತಾರೆ. ಆದರೆ ಆನಂದವರ್ಧನಾದಿಗಳಿಗೆ ಮುಖ್ಯಾರ್ಥವೇ ವಿವಕ್ಷಿತವೋ ಗೌಣಾರ್ಥವು ವಿವಕ್ಷಿತವೋ ವಿಮರ್ಶಕರು ನಿರ್ಧರಿಸಬೇಕು.

[೨೬] ಲೊಲ್ಲಟನ ಮತವನ್ನು ಶಂಕುಕನು ತನ್ನ ನಾಟ್ಯಶಾಸ್ತ್ರವ್ಯಾಖ್ಯಾನದಲ್ಲಿ ಖಂಡಿಸಿ ಹೊಸ ಸಿದ್ಧಾಂತವನ್ನು ಪ್ರತಿಪಾದಿಸಿದನು. ಇವನು 'ಭುವನಾಭ್ಯುದಯ'ವೆಂಬ ಕಾವ್ಯವನ್ನೂ ರಚಿಸಿದ್ದಿರಬಹುದು.

ದಾರ್ಶನಿಕದೃಷ್ಟಿಯಿಂದ ರಸಪ್ರತೀತಿಯ ವಿಮರ್ಶೆಯನ್ನು ಪ್ರಾರಂಭಿಸಿದವರಲ್ಲಿ ಶಂಕುಕನು ಅಗ್ರಗಣ್ಯ. ನ್ಯಾಯದರ್ಶನದಲ್ಲಿ ಪ್ರಮಾಣ, ಪ್ರಮೇಯ, ಪ್ರಮಾತೃಗಳ ಸ್ವರೂಪವನ್ನು ಸಿದ್ಧಾಂತಿಸಲಾಗಿದ್ದಿತು. ಆ ಸಿದ್ಧಾಂತದ ದೃಷ್ಟಿಯಿಂದ ರಸಪ್ರತೀತಿಗೆ ಅನ್ವಯಿಸುವ ಪ್ರಮಾಣನಿರ್ಣಯ

ಪ್ರತೀತಿಯಿಂದ ಬಾಧಿತವಾದಮೇಲೆ, 'ಇವನು ರಾಮ', 'ಇವನು ರಾಮನೋ

---

ಮಾಡಿ ಪರಿಷ್ಕರಿಸಲು ಶಂಕುಕನು ಪ್ರಥಮತಃ ಪ್ರಯತ್ನಿಸಿದನು. ಶಂಕುಕನ ತರ್ಕನಿಶಿತದೃಷ್ಟಿಗೆ ಲೊಲ್ಲಟನ ವಿವರಣೆಯಲ್ಲಿ ಕಾಣಬರುವ ದೋಷಗಳಿವು :—

೧. ವಿಭಾವಾದಿಗಳ ಸ್ವರೂಪಪರಿಜ್ಞಾನದ ಅನಂತರ ಸ್ಥಾಯಿಭಾವದ ಪ್ರತೀತಿ ಬರುವುದು ಸಾಧ್ಯವೇ ಹೊರತು ಸ್ವಂತವಾಗಿ ಬರುವುದೇ ಅಸಂಭವ. ಏಕೆಂದರೆ ನಾಟ್ಯರಂಗದಲ್ಲಿ ವಿಭಾವಾದಿಗಳು ಪ್ರತ್ಯಕ್ಷಗೋಚರವೇ ಹೊರತು ಸ್ಥಾಯಿಭಾವವಲ್ಲ. ಅದೃಷ್ಟವಾದರೂ ಪರ್ವತದಲ್ಲಿರುವ ಬೆಂಕಿಯನ್ನು ದೃಷ್ಟವಾದ ಹೊಗೆಯ ಮೇಲಿಂದ ಊಹಿಸುವಂತೆ, ವಿಭಾವಾದಿಗಳ ಮೇಲಿಂದ ಸ್ಥಾಯಿಭಾವವನ್ನು ಊಹಿಸುವುದು ಮಾತ್ರ ಸಾಧ್ಯ. ಲೊಲ್ಲಟನ ವಿವರಣೆಯಲ್ಲಿ ಸ್ಥಾಯಿಭಾವವು ವಿಭಾವಗಳಿಂದ ನೇರವಾಗಿ ಉತ್ಪನ್ನವಾಗುವುದೆಂಬಂಶವು ತರ್ಕವಿರುದ್ಧ.

೨. ಸ್ಥಾಯಿಭಾವಗಳೇ ವಿಭಾವಾದಿಗಳ ಸಂಯೋಗದಿಂದ ರಸತ್ವವನ್ನು ಪಡೆಯುತ್ತವೆ ಎಂಬುದು ಭರತನ ಅಭಿಪ್ರಾಯವಾಗಿದ್ದಿದ್ದರೆ ಗ್ರಂಥದ ಪ್ರಾರಂಭದಲ್ಲಿ ಎಲ್ಲಕ್ಕೂ ಮುಂಚೆ ಸ್ಥಾಯಿಭಾವಗಳನ್ನು ಹೆಸರಿಸಿ ವಿವರಿಸುತ್ತಿದ್ದನು. ವಸ್ತುತಃ ಹಾಗೆ ಮಾಡಿಲ್ಲದಿರುವುದರಿಂದ ಅದು ಭರತನ ಅಭಿಪ್ರಾಯವಾಗಿದ್ದಿರಲಾರದು ; ಭರತನು ಮೊದಲು ಹೆಸರಿಸಿ ವಿವರಿಸಿರುವುದು ರಸಗಳನ್ನೇ ಹೊರತು, ಸ್ಥಾಯಿಭಾವಗಳನ್ನಲ್ಲ. ರಸಗಳ ವಿವೇಚನೆಯಾದ ಮೇಲೆ ರಸಗಳ ವಿಭಾವಾನುಭಾವಗಳನ್ನು ವಿಸ್ತಾರವಾಗಿ ಮೊದಲು ಹೇಳಿ ಆಮೇಲೆ ಸ್ಥಾಯಿಭಾವಗಳ ವಿವೇಚನೆಯನ್ನು ಮತ್ತೇಕೆ ಮಾಡುತ್ತಿದ್ದನು ? ವಸ್ತುಗಳ ಉತ್ಪತ್ತಿಗೆ ಕಾರಣ ಹೇಳಿಯಾದಮೇಲೆ ಅವು ಪರಿಪುಷ್ಟವಾಗುತ್ತಿರುವಾಗ ತಿರುಗಿ ಅವಕ್ಕೆ ಕಾರಣವನ್ನು ಹೇಳುವ ಕೆಲಸ ವ್ಯರ್ಥ. ಹೀಗೆ ಭರತನ ನಾಟ್ಯಶಾಸ್ತ್ರದಲ್ಲಿನ ವಿಷಯನಿರೂಪಣೆಯ ಕ್ರಮವನ್ನು ಪರ್ಯಾಲೋಚಿಸುವುದರಿಂದ ಸ್ಥಾಯಿಭಾವದ ಪರಿಪುಷ್ಟಿಯೇ ರಸವೆಂಬ ಮತ ಅಸಾಧುವೆಂಬುದು ಸಿದ್ಧವಾಗುತ್ತದೆ.

೩. ಅಪುಷ್ಟವಾದುದು 'ಸ್ಥಾಯಿಭಾವ'ವೆಂದೂ ಪರಿಪುಷ್ಟವಾದುದು 'ರಸ'ವೆಂದೂ ಹೇಳುವುದಾದರೆ ಅಪುಷ್ಟಿಯಲ್ಲಿ ಮಂದ, ಮಂದತರ, ಮಂದತಮ ಮುಂತಾದ ಅಪರಿಮಿತ ವಿಶೇಷಗಳು ಸಾಧ್ಯವಿರುವುದರಿಂದ ಒಂದೊಂದು ಸ್ಥಾಯಿಭಾವದಲ್ಲಿಯೂ ಗಣನಾತೀತವಾದ ಅವಾಂತರ ಭೇದಗಳನ್ನೊಪ್ಪಬೇಕಾಗುತ್ತದೆ ; ಹಾಗೆಯೇ ಪರಿಪುಷ್ಟಿಯಲ್ಲಿಯೂ ತೀವ್ರ, ತೀವ್ರತರ, ತೀವ್ರತಮ ಮುಂತಾದ ಅಸಂಖ್ಯ ಭೇದಗಳಿರಬಹುದಾಗಿ ಒಂದೊಂದು ರಸದಲ್ಲೂ ಅಸಂಖ್ಯ ಪ್ರಭೇದಗಳುಂಟೆನ್ನಬೇಕಾಗುತ್ತದೆ.

೪. ಪರಿಪೋಷವನ್ನು ಪಡೆದುದು ಮಾತ್ರ ರಸವಾದರೆ ಹಾಸ್ಯರಸದಲ್ಲಿ ಸ್ಮಿತ, ಅವಹಸಿತ, ವಿಹಸಿತ, ಉಪಹಸಿತ, ಅಪಹಸಿತ, ಅತಿಹಸಿತ ಎಂಬ ಆರು ಭೇದಗಳಿಲ್ಲದೆ ಹೋಗಬೇಕಾಗುತ್ತದೆ.

೫. ಪೂರ್ವಾವಸ್ಥೆಯಲ್ಲಿ ಸ್ಥಾಯಿಭಾವವಾಗಿದ್ದುದು ಕ್ರಮೇಣ ಪರಿಪೋಷವನ್ನು ಪಡೆಯುತ್ತ ರಸತ್ವವನ್ನು ಪಡೆಯುತ್ತದೆಂದರೂ ವಿರುದ್ಧಪ್ರಸಂಗವು ತಪ್ಪುವುದಿಲ್ಲ. ಉದಾಹರಣೆಗೆ—ಇಷ್ಟವಿಯೋಗದಿಂದುಂಟಾಗುವ ಮಹಾಶೋಕವು ಬರಬರುತ್ತಾ ಕಡಿಮೆಯಾಗುವುದೇ ಹೊರತು ಹೆಚ್ಚುವುದಿಲ್ಲ. ಭಿನ್ನಕಾರಣಗಳಿಂದ ಹುಟ್ಟುವ ಕ್ರೋಧ, ಉತ್ಸಾಹ, ರತಿಗಳಾದರೂ ಕಾಲವು ಕಳೆದಂತೆಲ್ಲ ಕಡಿಮೆಯೇ ಆಗುತ್ತ ಅಮರ್ಷಶೂನ್ಯತ್ವ, ಸ್ಥೈರ್ಯಲೋಪ, ಸೇವಾಭಾವಗಳಾಗಿ ಪರಿಣಮಿಸಿ

ಅಲ್ಲವೋ', 'ಇವನು ರಾಮನಿಗೆ ಸದೃಶ', ಹೀಗೆ ನಿರ್ಣಯ, ಮಿಥ್ಯಾ, ಸಂಶಯ,

---

ಬಿಡುತ್ತವೆ. ಆದ್ದರಿಂದ ರಸವು ಭಾವಪೂರ್ವಕವಲ್ಲ ; ಭಾವವೇ ರಸಪೂರ್ವಕ. ಇದಕ್ಕೆ ಆಧಾರವಾಗಿ ಭರತನ ವಾಕ್ಯವೇ ಉಂಟು—'ರಸಪೂರ್ವಕತ್ವಂ ಭಾವಾನಾಂ'.

೬. ನಾಟಕದಲ್ಲಿ ಅಭಿನಯಿಸುತ್ತಿರುವ ಅನುಕರ್ತನಲ್ಲೂ ರಾಮಾದಿ ಅನುಕಾರ್ಯನಲ್ಲೂ ಭಾವವುಂಟೆಂಬ ಪ್ರತೀತಿ ನೋಡುವ ಸಾಮಾಜಿಕರಿಗೆ ಬರುವುದರಿಂದ, ಸಾಮಾಜಿಕನ ದೃಷ್ಟಿಯಿಂದ ರಸವು ಭಾವಪೂರ್ವಕವೆಂದು ತಿಳಿಯಲವಕಾಶವುಂಟೇ ಉಂಟೆಂದೂ, ಲೋಕದಲ್ಲಿ ಭಾವಪ್ರತೀತಿಯು ದೃಷ್ಟವಾದ್ದರಿಂದ ಸಾಹಿತ್ಯದಲ್ಲಿ ತತ್ಸರೂಪವಾದ ಪ್ರತೀತಿಯನ್ನು ರಸನಿಷ್ಪತ್ತಿಯೆನ್ನಬೇಕೆಂದೂ ಲೊಲ್ಲಟಾದಿಗಳು ವಾದಿಸಬಹುದು. ಆದರೆ ಈ ವಾದದಲ್ಲಿ ಹುರುಳಿಲ್ಲ. ಏಕೆಂದರೆ ಲೋಕದಲ್ಲಿ ಜೀವಿಸಿದ ರಾಮಾದಿಗಳು ಸಾಕ್ಷಾತ್ಕರಿಸಿದ ರಸಕ್ಕೂ ಸಾಹಿತ್ಯದಲ್ಲಿ ಸಾಮಾಜಿಕರು ಮಾತ್ರ ಆಸ್ವಾದಿಸುವ ಲೋಕೋತ್ತರರಸಕ್ಕೂ ಯಾವ ವ್ಯತ್ಯಾಸವೂ ಇಲ್ಲದೆಯೇ ಹೋಗುತ್ತದೆ ಆ ವಾದದಲ್ಲಿ.

೭. ನಟನಲ್ಲಿ ರಸವಿರುವುದಾದರೆ ಅವನು ತಾಳ, ಲಯಗಳನ್ನು ಅನುಸರಿಸುವ ಬುದ್ಧಿಯನ್ನು ಕಳೆದುಕೊಳ್ಳಬೇಕಾಗುತ್ತದೆ.

೮ ಕಲಾಕುಶಲನಾದ ನಟನು ತನ್ನ ವಿಭಾವಾದಿಗಳಿಂದ ಅನುಕಾರ್ಯನ ವಿಭಾವಾದಿಗಳನ್ನು ಅನುಕರಣಮಾಡುವನೇ ಹೊರತು, ಅನುಕಾರ್ಯನ ರಸವನ್ನು ಅನುಕರಣ ಮಾಡಲಾರ ; ಏಕೆಂದರೆ ಪರಚಿತ್ತವೃತ್ತಿಗಳನ್ನು ತಿಳಿಯುವುದೇ ಸಾಧ್ಯವಿಲ್ಲ ; ತಿಳಿಯದೆ ಅನುಕರಣಮಾಡುವುದು ಅಸಂಭವ (ಈ ದೋಷಗಳನ್ನು ಮಾಣಿಕ್ಯಚಂದ್ರನ ಮಾತುಗಳನ್ನಾಶ್ರಯಿಸಿ ಬರೆದಿದೆ).

ಆಪಾತತಃ ಈ ದೋಷಗಳೆಲ್ಲವೂ ಸಮುಚಿತವೆಂದು ಭಾಸವಾದರೂ ಲೊಲ್ಲಟನ ದೃಷ್ಟಿಗೂ ಶಂಕುಕನ ದೃಷ್ಟಿಗೂ ಇರುವ ಸ್ಪಷ್ಟಭೇದವನ್ನು ಗಮನಿಸಿದರೆ ಇಬ್ಬರೂ ಒಂದೊಂದು ರೀತಿಯಲ್ಲಿ ಯುಕ್ತವಾದಿಗಳೆಂದೇ ತೋರೀತು.

೧. ಕವಿಯ ದೃಷ್ಟಿಯಿಂದ ರಸವನ್ನು ಸಾಹಿತ್ಯದಲ್ಲಿ ಯೋಜಿಸುವುದೆಂತು ಎಂಬ ಪ್ರಶ್ನೆಗೆ ಲೊಲ್ಲಟನು ಉತ್ತರ ಹೇಳುತ್ತಿದ್ದರೆ, ಸಾಮಾಜಿಕನ ದೃಷ್ಟಿಯಿಂದ ರಸದ ಪ್ರತೀತಿ ಹೇಗೆ ಎಂಬ ಪ್ರಶ್ನೆಯನ್ನು ಶಂಕುಕನು ಎತ್ತುತ್ತಿದ್ದಾನೆ. ಭರತನು ಕಾವ್ಯಗತವಾದ ಆಸ್ವಾದಸಾಮಗ್ರಿಗೆ ರಸವೆಂದಂತೆ ರಸಿಕಗತವಾದ ಆಸ್ವಾದಾನುಭವಕ್ಕೂ ರಸವೆಂದೇ ಹೇಳಿದ್ದಾನೆ. ರಸಸೂತ್ರವನ್ನು ಕವಿಯ ದೃಷ್ಟಿಯಿಂದ ಹೇಳಿದ್ದಾನೆಂದರೆ ಲೊಲ್ಲಟನ ವಿವರಣೆಯೂ ಸಹೃದಯನ ಅನುಭವದ ದೃಷ್ಟಿಯಿಂದ ಹೇಳಿದ್ದಾನೆಂದರೆ ಶಂಕುಕಾದಿಗಳ ವಿವರಣೆಯೂ ಸಮರ್ಪಕವಾಗುತ್ತದೆ. ಭರತನ ನಾಟ್ಯಶಾಸ್ತ್ರವನ್ನು ಆಮೂಲಾಗ್ರವಾಗಿ ಓದಿದವರಿಗೆ ರಸಸೂತ್ರವು ಕವಿಶಿಕ್ಷೆಗಾಗಿಯೇ ರಚಿತವಾಗಿದೆಯೆಂದು ಭಾಸವಾಗಬಹುದು. ವಿಭಾವ, ಅನುಭಾವ, ವ್ಯಭಿಚಾರಿಭಾವಗಳು ಯಾರಿಗೆ ನೇರವಾಗಿ ಸಂಬಂಧಿಸಿರುವುವೋ ಸ್ಥಾಯಿಭಾವವು ಅವರಿಗೇ ನೇರವಾಗಿ ಸಂಬಂಧಿಸುವಂತೆ ವಿವರಿಸುವುದು ಸೂಕ್ತ. ಇವೆಲ್ಲವೂ ನೇರವಾಗಿ ಕವಿಕಲ್ಪಿತವಾದ ಪಾತ್ರಗಳಿಗೆ ಸಂಬಂಧಪಡುವುದು ನಿರ್ವಿವಾದ. ಎಂದಮೇಲೆ ಲೊಲ್ಲಟನು ಹೇಳುವಂತೆ ಸ್ಥಾಯಿಭಾವ ಮತ್ತು ರಸಗಳು ಕೂಡ ಮುಖ್ಯವಾಗಿ ಕವಿಕಲ್ಪಿತ ಪಾತ್ರಗಳಿಗೇ ಅನ್ವಯಿಸುವುದೆನ್ನುವುದು ಯುಕ್ತವಲ್ಲವೆ?

೨. ಇದಕ್ಕೂ ಹೆಚ್ಚಿನ ಮತ್ತೊಂದು ದೃಷ್ಟಿಭೇದವಿದೆ—ರಸವು ಲೋಕದಲ್ಲಿ ಉಂಟೆ ಅಥವಾ ಕಾವ್ಯದಲ್ಲಿ ಮಾತ್ರ ಉಂಟೆ? ಎಂಬ ಪ್ರಶ್ನೆಗೆ ಲೊಲ್ಲಟನ ಉತ್ತರವನ್ನು ಶಂಕುಕನು ಅಪಾರ್ಥ

ಸಾದೃಶ್ಯಗಳ ಪ್ರತೀತಿಗಳೊಂದೂ ಅನ್ವಯಿಸದ,[26] ಇವೆಲ್ಲಕ್ಕಿಂತಲೂ ವಿಲಕ್ಷಣವಾದ,

---

ಮಾಡಿದ್ದಾನೆ. ವಿಭಾವಗಳಿಂದ ಸ್ಥಾಯಿಭಾವವು ಅನುಕಾರ್ಯನಲ್ಲಿ ಹುಟ್ಟಿ, ಅನುಭಾವಗಳಿಂದ ಪ್ರತೀತಿಯೋಗ್ಯವಾಗಿ, ವ್ಯಭಿಚಾರಿಭಾವಗಳಿಂದ ಉಪಚಿತ ಅಥವಾ ಪರಿಪುಷ್ಟವಾದಾಗ ರಸವೆನಿಸುವುದೆಂದು ಲೊಲ್ಲಟನು ಹೇಳುವುದರ ತಾತ್ಪರ್ಯವೇನು? (೧) ಕವಿಪ್ರತಿಭೆಯ ಪ್ರಪಂಚದಲ್ಲಿ ಮಾತ್ರ ಕಾಣಬಲ್ಲ ರಾಮಾದಿಗಳಲ್ಲಿ ರಸವುಂಟೆಂದೋ ಅಥವಾ (೨) ಕವಿನಿರಪೇಕ್ಷವಾಗಿ ಲೋಕದಲ್ಲಿ ಜೀವಿಸಿದ ರಾಮಾದಿಗಳಲ್ಲಿ ರಸವುಂಟೆಂದೋ? ಶಂಕುಕನು ಈ ವಿವೇಕವನ್ನು ಮಾಡುವುದಿಲ್ಲ. ಸುಮ್ಮನೆ ಎರಡನೆಯ ಮತವನ್ನು ಲೊಲ್ಲಟನ ಮತವೆಂದು ಸ್ವೀಕರಿಸುತ್ತಾನೆ ನಮಗೆ ಇದು ಅಸಾಧುವೆಂದು ತೋರುತ್ತದೆ. ಯಾವನೊಬ್ಬನ ನಿತ್ಯಜೀವನದಲ್ಲಿ ಸಂಭವಿಸುವ ಸಕಲ ಘಟನೆಗಳೂ ಯಾವುದೋ ಒಂದೇ ಸ್ಥಾಯಿಭಾವದ ವಿಭಾವ, ಅನುಭಾವ, ವ್ಯಭಿಚಾರಿಗಳ ಚೌಕಟ್ಟಿನಲ್ಲಿ ಮಾತ್ರ ಅಳವಟ್ಟು ರಸಾವಹವಾಗುವುದು ಅಸಂಭವ; ಚೌಕಟ್ಟಿನಿಂದ ಹೊರಗೆ ನಿಲ್ಲುವ ಅಂಶಗಳೇ ಅಪಾರವಾಗಿರುತ್ತವೆ. ಎಂದಮೇಲೆ ಕಾವ್ಯದ ಇತಿವೃತ್ತದಲ್ಲಿ ಮಾತ್ರ ಇಂತಹ ಬಾಹ್ಯಾಂಶಗಳನ್ನು ಬಿಡುವುದಕ್ಕೆ ಆಸ್ಪದವುಂಟೆಂದೊಪ್ಪಬೇಕು. ಅರ್ಥಾತ್ ಪಾತ್ರಗತವಾದ ರಸವು ಕವಿಕಲ್ಪಿತ ಪಾತ್ರಗತವೆಂದಾಗುವುದೇ ಹೊರತು ಕವಿಕಲ್ಪನಾನಿರಪೇಕ್ಷವಾದ ಪಾತ್ರದಲ್ಲಿಯೂ ಉಂಟೆಂದು ಸಿದ್ಧಿಸುವುದಿಲ್ಲ. ಹೀಗೆ ಸರಿಯಾಗಿ ಅಭಿಪ್ರಾಯಮಾಡಿಕೊಂಡರೆ, ರಾಮಾದಿಗಳಲ್ಲಿದ್ದ ಲೌಕಿಕ ರಸಕ್ಕೂ ಕಾವ್ಯದಲ್ಲಿರಬೇಕಾದ ಅಲೌಕಿಕರಸಕ್ಕೂ ವ್ಯತ್ಯಾಸವೇ ಹೋದೀತೆಂಬ ಶಂಕುಕನ ಆಕ್ಷೇಪಣೆಗೆ ಬುಡವೇ ಸಡಿಲಿದಂತಾಗುತ್ತದೆ. ಲೊಲ್ಲಟನಿಗೆ ಇದೇ ಅಭಿಪ್ರಾಯವಿದ್ದಿತೆನ್ನಲು ಪಂಡಿತ ರಾಜ ಜಗನ್ನಾಥನ ಆಧಾರವೂ ಸಿಕ್ಕುತ್ತದೆ. "ಮತೇSಸ್ಮಿನ್ ಸಾಕ್ಷಾತ್ಕಾರೋ ದುಷ್ಯನ್ತೋSಯಂ ಶಕುಂತಲಾದಿವಿಷಯಕರತಿಮಾನ್ ಇತ್ಯಾದಿಃ; ಪ್ರಾಗ್ವದ್ ಧರ್ಮ್ಯಂಶೇ ಲೌಕಿಕ ಆರೋಪ್ಯಾಂಶೇ ತ್ವಲೌಕಿಕಃ". ನಾಟಕದಲ್ಲಿ ದುಷ್ಯಂತನನ್ನು ಪ್ರತ್ಯಕ್ಷವಾಗಿ ಸಾಕ್ಷಾತ್ಕಾರ ಮಾಡುವುದರಿಂದ, ಸಾಕ್ಷಾತ್ಕಾರಾಂಶದಲ್ಲಿ ಲೌಕಿಕವಾದರೂ, ಅವನಲ್ಲಿ ಆರೋಪಿಸುವ ಸತ್ಯಾದಿಗಳು ಮಾತ್ರ ಅಲೌಕಿಕ.—ರಸಗಂಗಾಧರ, ಪುಟ ೨೪ (ನಿರ್ಣಯಸಾಗರ ಗ್ರಂಥಮಾಲೆ, ೧೯೪೭ ನೆಯ ಸಂಸ್ಕರಣ).

[26] ರಾಮನ ಕಥೆಯನ್ನು ಕುರಿತ ನಾಟಕವೊಂದನ್ನು ನೋಡುತ್ತಾ ಕುಳಿತಿರುವ ಸಾಮಾಜಿಕನಿಗೆ ಬರುವ ಅನುಭವ ಯಾವ ಜಾತಿಯದು? ಇದನ್ನು ಸೂಕ್ಷ್ಮವಾಗಿ ತರ್ಕದೃಷ್ಟಿಯಿಂದ ಶಂಕುಕನು ಪರೀಕ್ಷಿಸುತ್ತಿದ್ದಾನೆ. ರಾಮನ ವೇಷಭೂಷಣಗಳನ್ನು ಧರಿಸಿದ ನಟನು ರಂಗಸ್ಥಲದ ಮೇಲೆ ಬಂದೊಡನೆ ಸಾಮಾಜಿಕನಿಗೆ ಏನೆನ್ನಿಸುತ್ತದೆ? ಮೊಟ್ಟಮೊದಲು ರಾಮನೇ ಬಂದನು ಎನ್ನಿಸಬಹುದು, ಅಥವಾ ಬಂದವನೇ ರಾಮ ಎನ್ನಿಸಬಹುದು. ಬಾಹ್ಯವಸ್ತುವನ್ನು ಇಂದ್ರಿಯಗಳ ಮೂಲಕ ಯಥಾವತ್ತಾಗಿ ಗ್ರಹಿಸುವುದರಿಂದ ಬರುವ ಪ್ರತೀತಿಗೆ ನ್ಯಾಯಶಾಸ್ತ್ರದಲ್ಲಿ ಸಮ್ಯಕ್ ಜ್ಞಾನವೆನ್ನುತ್ತಾರೆ. ಮೇಲಿನ ಪ್ರತೀತಿಗಳನ್ನು ಸಮ್ಯಕ್‌ಪ್ರತೀತಿಗಳೆನ್ನಬೇಕಾದರೆ ಅವಕ್ಕೆ ವಿರುದ್ಧವಾದ ಪ್ರತೀತಿಯು ಬರಕೂಡದು. ಆದರೆ ವಸ್ತುತಃ ಮರುಕ್ಷಣದಲ್ಲಿಯೇ ಸಾಮಾಜಿಕನಿಗೆ ಅಂದಿನ ದಶರಥಪುತ್ರನಾದ ರಾಮನು ಇವನಾಗಲಾರನೆಂಬ ಪ್ರತೀತಿಯೂ ಉಂಟಾಗುವುದರಿಂದ ಮೊದಲಿನ ಪ್ರತೀತಿಗೆ ಬಾಧೆಯೊದಗುತ್ತದೆ. ಎಂದರೆ ಇದು ಹೀಗೆಯೇ ಎಂಬ ನಿಶ್ಚಯ ತಪ್ಪುತ್ತದೆ. ಸಮ್ಯ

'ಇವನು ರಾಮ' ಎಂಬ ಪ್ರತೀತಿಯು ಚಿತ್ರದ ಕುದುರೆಯ ಪ್ರತೀತಿಯಂತೆ ನಟನ ವಿಷಯದಲ್ಲಿ ಅಂಕುರಿಸಿದೊಡನೆ[27]—

ಸೇಯಂ ಮಮಾಂಗೇಷು ಸುಧಾರಸಚ್ಛಟಾ
ಸುಪೂರಕರ್ಪೂರಶಲಾಕಿಕಾ ದೃಶೋಃ।

ಕ್ಪ್ರತೀತಿಗೆ ವಿರುದ್ಧವಾದ ಪ್ರತೀತಿಗೆ ನ್ಯಾಯಶಾಸ್ತ್ರದಲ್ಲಿ ಮಿಥ್ಯಾಪ್ರತೀತಿಯೆನ್ನುತ್ತಾರೆ. ಎರಡೂ ವಿರುದ್ಧಪ್ರತೀತಿಗಳೂ ಏಕಕಾಲದಲ್ಲಿ ಬರುವಂತಿದ್ದರೆ ಎರಡೂ ಅನನ್ವಿತಗಳಾಗುತ್ತವೆ. ಸಾಮಾಜಿಕನ ಪ್ರತೀತಿ ಸಮ್ಯಕ್‌ಜ್ಞಾನವೂ ಅಲ್ಲ, ಮಿಥ್ಯಾಜ್ಞಾನವೂ ಅಲ್ಲವೆಂದಂತಾಯಿತು. ನ್ಯಾಯಶಾಸ್ತ್ರದ ಪ್ರಕಾರ ಇವೆರಡೂ ಅಲ್ಲದ ಪ್ರತೀತಿಗಳು 'ಸಂಶಯ' ಇಲ್ಲವೆ 'ಸಾದೃಶ್ಯ'ವೆನಿಸುತ್ತವೆ. ಇವನು ರಾಮನಾಗಿಯೂ ಇರಬಹುದು ; ರಾಮನಲ್ಲದೆಯೂ ಇರಬಹುದು ಎಂದು ಎರಡು ವಿಧವಾಗಿಯೂ ಅನಿಶ್ಚಯವೂ ತೂಗಾಡುತ್ತಿದ್ದರೆ ಸಂಶಯವುಂಟೆನ್ನಬಹುದು. ಆದರೆ ಸಾಮಾಜಿಕನಿಗೆ ಇಂತಹ ಅನಿಶ್ಚಯವೂ ಉಂಟಾಗುವುದಿಲ್ಲ. ಅವನ ಪ್ರತೀತಿ ಸಂಶಯವಲ್ಲ. ಕಡೆಗೆ ಉಳಿದ ಒಂದೇ ಪಕ್ಷವೆಂದರೆ 'ಸಾದೃಶ್ಯ'ಜ್ಞಾನ. ಒಂದನ್ನು ನೋಡಿದ್ದವನಿಗೆ ಅದನ್ನು ಹೋಲುವ ಮತ್ತೊಂದನ್ನು ಕಂಡಾಗ ಸಾದೃಶ್ಯಜ್ಞಾನವುಂಟಾಗುತ್ತದೆ. ಜೀವಂತ ರಾಮನನ್ನು ಎಂದೂ ಕಾಣದ ಸಾಮಾಜಿಕನಿಗೆ ನಟನು ರಾಮಸದೃಶನೆಂಬ ಪ್ರತೀತಿ ಬರುವುದೂ ಅಸಂಭವ. ಹೀಗೆ ನಾಟಕಶಾಲೆಯಲ್ಲಿ ಸಾಮಾಜಿಕನಿಗೆ ಬರುವ ಅನುಭವವು ಲೋಕಪ್ರಸಿದ್ಧವೂ ಶಾಸ್ತ್ರನಿರ್ಣೀತವೂ ಆದ ಯಾವ ಪ್ರಕಾರಗಳಲ್ಲಿಯೂ ಅಂತರ್ಗತವಾಗುವುದಿಲ್ಲ. ಅಂತೆಯೇ ಅದು ಲೋಕವಿಲಕ್ಷಣವಾದುದೆಂದು ಪರಿಗಣಿಸದೆ ಗತ್ಯಂತರವಿಲ್ಲ. ಈ ವಿಲಕ್ಷಣಪ್ರತೀತಿಯನ್ನು ವಿವರಿಸುವುದೇ ಭರತಸೂತ್ರದ ಗುರಿಯೆಂದು ಶಂಕುಕನ ಅಭಿಪ್ರಾಯ. ಇದನ್ನು ಕೆಳಗಿನ ಶ್ಲೋಕಗಳು ಸಂಗ್ರಹಿಸುತ್ತವೆ—

ಪ್ರತಿಭಾತಿ ನ ಸಂದೇಹೋ ನ ತತ್ತ್ವಂ ನ ವಿಪರ್ಯಯಃ।
ಧೀರಸಾವಯಮಿತ್ಯಸ್ತಿ ನಾಸಾವೇವಾಯಮಿತ್ಯಪಿ ||
ವಿರುದ್ಧಬುದ್ಧ್ಯಸಂಭೇದಾದವಿವೇಚಿತವಿಕ್ರಿಯಃ।
ಯುಕ್ತ್ಯಾ ಪರ್ಯನುಯುಜ್ಯೇತ ಸ್ಫುರನ್ನನುಭವಃ ಕಯಾ ||

[27] ಲೋಕವಿಲಕ್ಷಣವಾದ ರಸಪ್ರತೀತಿಯನ್ನು ವಿವರಿಸುವುದಕ್ಕೆ ಶಂಕುಕನು ಚಿತ್ರಕಲೆಯ ಸಮಂಜಸ ನಿದರ್ಶನವನ್ನು ಕೊಡುತ್ತಿದ್ದಾನೆ. ಚಿತ್ರಕಲಾಪ್ರೇಮಿಗಳಿಗೆ ಕುದುರೆಯೇ ಮುಂತಾದ ಸುಂದರ ಚಿತ್ರಗಳ ದರ್ಶನದಿಂದ ಅಲೌಕಿಕ ಸೌಂದರ್ಯಾನುಭೂತಿ ಬರುವುದೇ ಹೊರತು ಲೋಕಗತವಾದ ಸಮ್ಯಕ್, ಮಿಥ್ಯಾ, ಸಂಶಯ ಸಾದೃಶ್ಯಪ್ರತೀತಿಗಳುಂಟಾಗುವುದಿಲ್ಲ. ಯಾವ ಜ್ಞಾನ ಬರಬೇಕಾದರೂ ಅದಕ್ಕೆ ಸಾಧಕವಾದ ಪ್ರಮಾಣವೊಂದಿರಲೇಬೇಕೆಂಬುದು ನ್ಯಾಯಶಾಸ್ತ್ರದ ಸಿದ್ಧಾಂತ. ಪ್ರತ್ಯಕ್ಷಪ್ರಮಾಣದಿಂದ ಸೌಂದರ್ಯಾನುಭವವನ್ನು ವಿವರಿಸಲು ಸಾಧ್ಯವಿಲ್ಲವೆಂದಾದ ಮೇಲೆ, ಸೌಂದರ್ಯಪ್ರತೀತಿಯು ಅನುಭವಸಿದ್ಧವಾಗಿರುವುದರಿಂದ ಅದರ ವಿವರಣೆಗೆ ನ್ಯಾಯಶಾಸ್ತ್ರದಲ್ಲಿ ಎರಡನೆಯ ಪ್ರಮಾಣವಾದ 'ಅನುಮಾನ'' (=*Inference*) ವನ್ನು ಶಂಕುಕನು ಆಶ್ರಯಿಸುತ್ತಾನೆ.

ಮನೋರಥಶ್ರೀರ್ಮನಸಃ ಶರೀರಿಣೀ
ಪ್ರಾಣೇಶ್ವರೀ ಲೋಚನಗೋಚರಂ ಗತಾ ॥

ಎನ್ನಂಗಗಳಿಗಮೃತರಸಧಾರೆಯೀಕೆ
ಕಣ್ಗಳಿಗೆ ಕರ್ಪೂರಶಕಲಸಮುಳೀಕೆ|
ಮಾನಸಕೆ ಕಾಮಿತದ ಮೂರ್ತಸಿರಿಯೀಕೆ
ಎನಿಪ ಪ್ರಾಣೇಶ್ವರಿಯು ಕಾಣಿಸಿದಳಿಂದು ॥[28]

ದೈವಾದಹಮದ್ಯ ತಯಾ
ಚಪಲಾಯತನೇತ್ರಯಾ ವಿಯುಕ್ತಶ್ಚ ।
ಅವಿರಲವಿಲೋಲಜಲದಃ
ಕಾಲಃ ಸಮುಪಾಗತಶ್ಚಾಯಮ್ ॥[29]

ದೈವದಿನಾನಿಂದಗಲ್ದೆಂ
ಭಾವಿಸೆ ಚಪಲಾಯತಾಕ್ಷಿಯಂ ಕಾಮಿನಿಯಂ |
ಪೀವರಜಲದವಿಲೋಲಮಿ-
ದೇವೇಳ್ವುದು ಬಂದುದಿಂದೆ ವರ್ಷಾಕಾಲಂ ॥

ಇತ್ಯಾದಿ ಕಾವ್ಯಗಳ ಅನುಸಂಧಾನದ ಬಲದಿಂದಲೂ ಕಲಾನಿಪುಣನಾದ ನಟನ ಅಭಿನಯ ಕೌಶಲದಿಂದಲೂ ಪ್ರಕಾಶಕ್ಕೆ ಬರುವ ಕಾರಣ, ಕಾರ್ಯ, ಸಹಕಾರಿಗಳು ವಸ್ತುತಃ ಕೃತ್ರಿಮವಾದರೂ ಹಾಗೆನಿಸದೆ ಹೋಗುವುದರಿಂದ ವಿಭಾವ, ಅನುಭಾವ, ವ್ಯಭಿಚಾರಿಗಳೆಂಬ ಹೆಸರಿಗೆ ಯೋಗ್ಯವಾಗುತ್ತವೆ.[30] ಇವುಗಳ ಸಂಯೋಗದಿಂದ

---

[28] ಈ ಪದ್ಯವು ಸಂಭೋಗಶೃಂಗಾರಕ್ಕೂ ಮುಂದಿನದು ವಿಪ್ರಲಂಭಶೃಂಗಾರಕ್ಕೂ ಲಕ್ಷ್ಯಗಳೆಂದು ವಿದ್ಯಾಚಕ್ರವರ್ತಿಯೇ ಮೊದಲಾದವರು ಬರೆದಿದ್ದಾರೆ.

ಈ ಪದ್ಯದಲ್ಲಿ ಆಲಂಬನವಿಭಾವವೂ ಮುಂದಿನದರಲ್ಲಿ ಉದ್ದೀಪನವಿಭಾವವೂ ಪ್ರಕಟವಾಗುವುದೆಂದು ಮಾಣಿಕ್ಯಚಂದ್ರನ ಮತ.

[29] ಇದು ರುದ್ರಟನ ಕಾವ್ಯಾಲಂಕಾರದಲ್ಲಿ ಬಂದಿದೆ.

[30] ಲೋಕದಲ್ಲಿ ಸಹಜವಾಗಿ ಸಿದ್ಧವಾದ ರತ್ಯಾದಿಗಳ ಕಾರಣ, ಕಾರ್ಯ, ಸಹಕಾರಿಗಳು ನಾಟಕದಲ್ಲಿ ಕೃತ್ರಿಮವಾಗಿಯಾದರೂ ಕೃತ್ರಿಮವೆನಿಸದಂತೆ ಪ್ರದರ್ಶಿತವಾದಾಗ ಅವಕ್ಕೆ ವಿಭಾವ, ಅನುಭಾವ, ವ್ಯಭಿಚಾರಿಭಾವಗಳೆಂಬ ಹೊಸ ಸಂಜ್ಞೆ ಸಾರ್ಥಕವಾಗುತ್ತದೆ. ಪಾಶ್ಚಾತ್ಯರಲ್ಲಿ ಕಲೆಯ ವಿಷಯದಲ್ಲಿ ಪ್ರಸಿದ್ಧವಾಗಿರುವ ಅನುಕರಣ ತತ್ತ್ವದ ಪ್ರತಿಬಿಂಬವನ್ನಿಲ್ಲಿ ಕಾಣಬಹುದು. ಚಿತ್ರಕಾರನು ಲೋಕಸಿದ್ಧ ವಸ್ತುವಿನ ಪ್ರತಿರೂಪವನ್ನಷ್ಟೇ ಕೊಡುವುದಿಲ್ಲ ; ಅದನ್ನು ಸೌಂದರ್ಯ

ಎಂದರೆ ಗಮ್ಯಗಮಕಭಾವದ ಆಧಾರದಿಂದ ಅನುಮಿತವಾಗುವ ರತ್ಯಾದಿ ಭಾವವು ವಾಸನಾವಶದಿಂದ ಸಾಮಾಜಿಕರಿಗೆ ಆಸ್ವಾದ್ಯವಾಗಿ ರಸವೆನಿಸುತ್ತದೆ.[31] ವಸ್ತುತಃ

---

ಪೂರ್ಣವನ್ನಾಗಿಯೂ ಮಾಡುತ್ತಾನೆ. ಇದೇ ಕಲೆಯ ಮರ್ಮ. ಹೋಲಿಸಿ—*They (=painters), while reproducing the distinctive form of the original, make a likeness which is true to life and yet more beautiful* (ARISTOTLE). ಲೋಕದ ಕಾರ್ಯಕಾರಣ ಸಹಕಾರಿಗಳಿಗೆ ಕಾಲದೇಶಪ್ರಸ್ತಾವಗಳ ಸಂಬಂಧವಷ್ಟೇ ಸಾಧ್ಯ; ಅಲೌಕಿಕವಾದ ವಿಭಾವಾದಿಗಳಿಗೆ ಮಾತ್ರ ಮನುಷ್ಯಸ್ವಭಾವದ ಅವಿನಶ್ವರ ಪ್ರಕಾರಗಳನ್ನು ನಿರ್ಮಿಸುವುದು ಶಕ್ಯ. ಹೋಲಿಸಿ—*There is a difference between a story and a poem, in that a story is a catalogue of detached facts which have no other connection than time, space, circumstances, cause and effect; the other is a creation of actions according to the unchangeable forms of human nature* (SHELLEY—*A Defence of Poetry*).

ಇದನ್ನೆಲ್ಲ ಭರತನು—"ತ್ರೈಲೋಕ್ಯಸ್ಯಾಸ್ಯ ಸರ್ವಸ್ಯ ನಾಟ್ಯಂ ಭಾವಾನುಕೀರ್ತನಮ್' ಎಂಬ ಮಾತುಗಳಲ್ಲಿ ಘೋಷಿಸಿದ್ದಾನೆ. ಕವಿಯು ಮತ್ತು ನಟರ ಕೆಲಸ ಭಾವಾನುಕರಣವೇ ಹೊರತು ವಸ್ತುವಿನ ಅನುಕರಣವಲ್ಲ (*cf. Art is the idealisation or idealising imitation of nature.*—CROCE). ಅಭಿನವಗುಪ್ತನೂ ಕೂಡ ಈ ವ್ಯತ್ಯಾಸವನ್ನು ಬಿಡಿಸಿ ಬರೆದಿದ್ದಾನೆ—ನಟನೇನೂ ರಾಮನಲ್ಲಿದ್ದ ಶೋಕಕ್ಕೆ ಸದೃಶವಾದ ಶೋಕವನ್ನೇ ಮಾಡುವುದಿಲ್ಲ. ಏಕೆಂದರೆ ನಟನಲ್ಲಿ ವಾಸ್ತವವಾದ ಶೋಕವಿರುವುದೇ ಇಲ್ಲ. ಮತ್ತೊಬ್ಬನ ಭಾವವನ್ನು ಅಂತೆಯೇ ಅನುಕರಣ ಮಾಡುವುದೂ ಅಸಾಧ್ಯ. ಶೋಕವಲ್ಲದೆ ಶೋಕಕ್ಕೆ ಸದೃಶವಾದ ಮತ್ತೊಂದು ವಸ್ತುವೂ ಇಲ್ಲ. ಆದ್ದರಿಂದ ನಟನು ತೋರಿಸುವುದು ಶೋಕದ ಅನುಭಾವಗಳನ್ನು ಮಾತ್ರ; ಅದೂ ಶೋಕಸಾದೃಶ್ಯದಿಂದಲ್ಲ, ಶೋಕಸಜಾತೀಯವಾಗಿ ಮಾತ್ರ' (ಅಭಿನವಭಾರತೀ, ಪುಟ ೩೭).

[31] ಬೌದ್ಧಿಕವಾಗಿ ರಸಪ್ರತೀತಿಯ ವಿಶ್ಲೇಷಣೆಗೆ ಹೊರಟವರಾರೂ ಇಲ್ಲಿಯ ವರೆಗೆ ಶಂಕುಕನ ಮಾತುಗಳಲ್ಲಿ ತಪ್ಪು ತೋರಿಸುವಂತಿಲ್ಲ. ಆದರೆ ಲೋಕವಿಲಕ್ಷಣವೆಂದೊಪ್ಪಿಯಾದ ರಸಪ್ರತೀತಿಗೆ ಶಾಸ್ತ್ರಸಮ್ಮತವಾದ ಪ್ರಮಾಣಕಲ್ಪನೆ ಅಗತ್ಯವೆ? ಎನ್ನುವಂತಾಗುತ್ತದೆ, ಈ ಸಿದ್ಧಾಂತವನ್ನೋದುವಾಗ. ಕಾವ್ಯನಾಟಕಾದಿಗಳಲ್ಲಿ ವಿಭಾವಾನುಭಾವ ವ್ಯಭಿಚಾರಿಗಳನ್ನು ಸಾಮಾಜಿಕರು ಕಾಣುತ್ತಾರೆ. ಅವುಗಳ ಮೇಲಿಂದ ರತ್ಯಾದಿಭಾವಗಳ ಇರುವಿಕೆಯನ್ನು ಊಹಿಸುತ್ತಾರೆ, ತರ್ಕದಲ್ಲಿ ಹೊಗೆಯಿಂದ ಬೆಂಕಿಯನ್ನೂಹಿಸುವಂತೆ. ಹೀಗೆ ಅನುಮಿತವಾದ ರತ್ಯಾದಿಯೇ ಆಸ್ವಾದ್ಯವಾಗಿ ರಸವೆನಿಸುತ್ತದೆ ಸಾಮಾಜಿಕರಿಗೆ. ತರ್ಕಶಾಸ್ತ್ರದ ನಿಯಮಾವಲಿಗಳನ್ನೆಲ್ಲ ಯಥಾವತ್ತಾಗಿ ಶಂಕುಕನು ರಸಾಸ್ವಾದಕ್ಕೆ ಅನ್ವಯಿಸುತ್ತಿರುವುದು ಸ್ಪಷ್ಟ. ತಾರ್ಕಿಕನಾದವನು ರಸಪ್ರತೀತಿಗೆ ಶಾಸ್ತ್ರಸಮ್ಮತವಾಗಿ ಉಪಪತ್ತಿ ಹೇಳಲು ಬೇರೆ ಗತ್ಯಂತರವಿಲ್ಲ. ತರ್ಕಶಾಸ್ತ್ರದ ನಿರ್ದುಷ್ಟಸ್ಥಿತಿಗೆ ಇದರಿಂದ ಉಪಯೋಗವಾಗಬಹುದೇ ಹೊರತು ಕಾವ್ಯಮೀಮಾಂಸೆಗೆ ಆಗುವ ಉಪಕಾರ ಕಡಿಮೆ. 'ನಿಮ್ಮ ತರ್ಕಶಾಸ್ತ್ರವು ರಸಪ್ರತೀತಿಯನ್ನು ಕೈಬಿಟ್ಟು ಪ್ರತೀತಿಗಳ ಸ್ವರೂಪವನ್ನು ವಿವರಿಸಿರುವುದರಿಂದ ಅಗ್ರಾಹ್ಯ'ವೆಂದು ಯಾರಾದರೂ ಆಕ್ಷೇಪಿಸಿದರೆ ಅವರ ಸಮಾಧಾನಕ್ಕೆ ಹೀಗೆ ಹೇಳಬಹುದು 'ನಮ್ಮ ಅನುಮಾನ

ಸ್ಥಾಯಿಯಾಗಿ ಅಲ್ಲಿ ಇರದಿದ್ದರೂ ಇದ್ದಂತೆ ಸಾಮಾಜಿಕರು ಅದನ್ನೂಹಿಸಿಕೊಳ್ಳುತ್ತಾರೆ. ಅನುಮಿತಿಯೇ ಆದರೂ ವಸ್ತುವಿನಲ್ಲಿ ಸೌಂದರ್ಯಾಂಶವಿರುವುದರಿಂದ ಆಸ್ವಾದ್ಯವಾಗಿ ಪರಿಣಮಿಸುತ್ತದೆಯಾಗಿ ಇದು ಇತರ ಅನುಮಿತಿಗಳಿಗಿಂತ ವಿಲಕ್ಷಣವಾದುದು.[32]

ಭಟ್ಟನಾಯಕನ ವಿವರಣೆಯಿಂತಿದೆ[33]—ರತ್ಯಾದಿ ಸ್ಥಾಯಿಭಾವವು ಪರಗತವೆಂದಾಗಲಿ ಆತ್ಮಗತವೆಂದಾಗಲಿ ಪ್ರತೀತವಾಗುವುದಿಲ್ಲ; ಅದು ಉತ್ಪನ್ನವೂ ಅಲ್ಲ, ಅಭಿವ್ಯಕ್ತವೂ

---

ಪ್ರಮಾಣವೇ ರಸಪ್ರತೀತಿಗೂ ಧಾರಾಳವಾಗಿ ಅನ್ವಯಿಸುತ್ತದೆ' ಎಂದು. ಆದರೆ ಕಾವ್ಯದ ವೈಶಿಷ್ಟ್ಯವನ್ನು ವಿಭಜಿಸಿ ತೋರಿಸಬೇಕಾದ ವಿಮರ್ಶಕರು ಈ ಮಾತನ್ನು ಹೇಳಿದರೆ ಏನನ್ನೂ ಸಾಧಿಸಿದಂತಾಗುವುದಿಲ್ಲ. ಲೋಕದಲ್ಲಿಲ್ಲದ, ಕಾವ್ಯದಲ್ಲಿ ಮಾತ್ರ ಇರುವ, ಅನುಭವದ ವೈಲಕ್ಷಣ್ಯವನ್ನು ಹೇಳಬೇಕಾದುದು ಅವರ ಕರ್ತವ್ಯ. ಎರಡಕ್ಕೂ ಒಂದೇ ಉತ್ತರವನ್ನು ಅವರು ತಾರ್ಕಿಕ ರೀತಿಯಿಂದ ಹೇಳಿದರೆ (ಇಂಗ್ಲಿಷಿನಲ್ಲಿ *Begging the question* ಎನ್ನುವಂತೆ) ಪರ್ಯಾಯವಾಗಿ ಉತ್ತರದ ಆಕಾರದಲ್ಲಿ ಪ್ರಶ್ನೆಯನ್ನೇ ತಿರುಗಿ ಉಚ್ಚರಿಸಿದಂತಾಗುತ್ತದೆ. ಈ ಅಭಿಪ್ರಾಯವು ಸೂತ್ರಕಾರನಾದ ಭರತನಿಗಿದ್ದಿತೆಂದು ನಂಬುವುದು ಕಷ್ಟ.

[32] ಮೇಲೆ ಸೂಚಿಸಿದ ದೋಷವು ಇಲ್ಲಿ ಮತ್ತಷ್ಟು ಸ್ಫುಟವಾಗಿದೆ. ಕಾವ್ಯದಲ್ಲಿ ರಸಾಸ್ವಾದ ಹೇಗೆ? ಎಂಬ ಪ್ರಶ್ನೆಗೆ ಅನುಮಿತಿಯಾದ್ದರಿಂದ ಎಂದುತ್ತರ. ಅನುಮಿತಿಗಳಲ್ಲಿ ಆಸ್ವಾದ ಹೇಗೆ? ಎಂದರೆ ಕಾವ್ಯವಾದ್ದರಿಂದ ಎಂದುತ್ತರ. ಈ ಅನ್ಯೋನ್ಯಾಶ್ರಯದಲ್ಲಿ ಬುದ್ಧಿಯು ಮುಂದಕ್ಕೆ ಹೆಜ್ಜೆಯಿಟ್ಟಂತೇನೂ ಆಗುವುದಿಲ್ಲ. ರಸಪ್ರತೀತಿ ಎಂಬ ಶಬ್ದದ ಬದಲು ರಸಾನುಮಿತಿಯೆಂಬ ಶಬ್ದಾಂತರವು ಮಾತ್ರ ಸಿಕ್ಕಿದಂತಾಗುತ್ತದೆ. ಸಾಮಾಜಿಕನ ದೃಷ್ಟಿಯಿಂದ ರಸದ ಸ್ವರೂಪವನ್ನು ನಿರ್ಣಯಿಸಲು ಹೊರಟ ಶಂಕುಕನು ರಸಾನುಮಿತಿಯನ್ನು ಮತ್ತಷ್ಟು ವಿವರವಾಗಿ ವಿಶದಪಡಿಸಬೇಕಾಗಿತ್ತು.

ಈ ದೋಷವನ್ನು ಮನಗಂಡೇ ಆನಂದವರ್ಧನನು ಅದನ್ನು ನಿವಾರಿಸಲು ಹೊಸದಾದ ಧ್ವನಿತತ್ತ್ವವನ್ನು ಸಾರಿ ಧ್ವನ್ಯಾಲೋಕವೆಂಬ ಗ್ರಂಥವನ್ನು ರಚಿಸಿದನು. ಕಾವ್ಯನಾಟಕಗಳಲ್ಲಿ ರಸದ ಪ್ರತೀತಿಗೆ ವಿಭಾವಾದಿಗಳೇ ಗಮಕಗಳೆಂದಾದಮೇಲೆ ವಿಭಾವಾದಿಗಳಿಗೂ ರಸಕ್ಕೂ ಇರುವ ಸಂಬಂಧವನ್ನು ಮತ್ತಷ್ಟು ಆಳವಾಗಿ ಸಾಹಿತ್ಯದೃಷ್ಟಿಯಿಂದ ಆತನು ವಿಚಾರಮಾಡಿದನು. ಕಾವ್ಯದಲ್ಲಿ ಶಬ್ದ, ಅರ್ಥಗಳನ್ನು ಬಿಟ್ಟರೆ ಬೇರೆ ಉಪಾದಾನ ಸಾಮಗ್ರಿಯೇ ಇಲ್ಲದ ಕಾರಣ ಈ ಶಬ್ದ, ಅರ್ಥಗಳ ಅಲೌಕಿಕ ವ್ಯಾಪಾರವೇ ರಸಪ್ರಯೋಜಕವೆಂದು ಸ್ಥಾಪಿಸಿದನು. ಶಬ್ದಗಳಿಗೆ ಲೋಕ ಮತ್ತು ಶಾಸ್ತ್ರಪ್ರಸಿದ್ಧವಾದ ವ್ಯಾಪಾರಗಳೆಂದರೆ ಎರಡೇ—ಅಭಿಧೆ ಮತ್ತು ಲಕ್ಷಣೆ. ಕಾವ್ಯದಲ್ಲಿ ಶಬ್ದಗಳಿಗೆ ಮೂರನೆಯ ವ್ಯಂಜಕತ್ವ ವ್ಯಾಪಾರವಿರುವಂತೆ ಅರ್ಥಗಳಿಗೂ, ಅಭಿನಯಾದಿಗಳಿಗೂ ವ್ಯಂಜಕತ್ವ ವ್ಯಾಪಾರವಿರುವುದನ್ನು ವಿವರಿಸಿ ತೋರಿಸಿದನು. ಮಮ್ಮಟನೂ ಕೂಡ ತನ್ನ ಎರಡು ಮೂರನೆಯ ಉಲ್ಲಾಸಗಳನ್ನು ಈ ಪ್ರಕ್ರಿಯೆಯ ಪ್ರತಿಪಾದನೆಗೇ ವಿನಿಯೋಗಿಸಿದ್ದಾನೆ.

[33] ಆದರೆ ಈ ಹೊಸ ವಿಚಾರಧಾರೆಯಾಗಲಿ ಶಂಕುಕನ ವಾದಸರಣಿಯಾಗಲಿ ಒಂದೂ ಮನಸ್ಸಿಗೆ ಬರಲಿಲ್ಲ, ನಾಟ್ಯಶಾಸ್ತ್ರದ ಮೂರನೆಯ ವ್ಯಾಖ್ಯಾಕಾರನಾದ ಭಟ್ಟನಾಯಕನಿಗೆ. ಧ್ವನ್ಯಾಲೋಕದ ಖಂಡನೆಗಾಗಿ ಈತನು 'ಹೃದಯದರ್ಪಣ'ವೆಂಬ ಸ್ವತಂತ್ರ ಗ್ರಂಥವನ್ನೇ ಬರೆದನಲ್ಲದೆ ಶಂಕುಕನ

ಅಲ್ಲ. ಆದರೆ ಕಾವ್ಯನಾಟಕಗಳಲ್ಲಿ ಅಭಿಧೆಗಿಂತ ಬೇರೆಯಾದ ಮತ್ತು ವಿಭಾವಾದಿಗಳ ಸಾಧಾರಣೀಕರಣ ಪ್ರಯೋಜಕವಾದ **ಭಾವಕತ್ವ**ವೆಂಬ ವ್ಯಾಪಾರದಿಂದ ಭಾವ್ಯಮಾನ ವಾದ ಸ್ಥಾಯಿಯೇ ಸತ್ವಗುಣದ ಉದ್ರೇಕದಿಂದುಕ್ಕುವ ಆನಂದಮಯವಾದ ಅನುಭೂತಿಯಲ್ಲಿ ವಿಶ್ರಾಂತವಾಗುವ **ಭೋಗ**ವೆಂಬ ವ್ಯಾಪಾರದಿಂದ ಆಸ್ವಾದ್ಯ ವಾಗುತ್ತದೆ.'[34]

---

ಮತವನ್ನೂ ತನ್ನ ನಾಟ್ಯಶಾಸ್ತ್ರವ್ಯಾಖ್ಯೆಯಲ್ಲಿ ತುಂಡುತುಂಡಾಗಿ ಖಂಡಿಸಿದನು. ಶಂಕುಕನ ಮತ ತರ್ಕದೃಷ್ಟಿಯಿಂದ ಹೊರಟದ್ದು; ಆನಂದವರ್ಧನನ ಮತ ಶಬ್ದವ್ಯಾಪಾರಗಳ ವಿಮರ್ಶೆಯನ್ನು ಕುರಿತದ್ದು ಆಯಿತೇ ಹೊರತು ಸಾಮಾಜಿಕರ ಅನುಭವದ ರಹಸ್ಯವನ್ನು ಹೊರಗೆಡಹಲು ಎರಡೂ ಮುಂದಾಗಲಿಲ್ಲವೆಂದು ಅವನಿಗೆ ತೋರಿದ್ದು ಸಹಜವೇ ಆಗಿದೆ. ಶಂಕುಕನು ತಾರ್ಕಿಕನಿಯಮ ಗಳನ್ನು ಮೆಚ್ಚಿದಂತೆ ಆನಂದವರ್ಧನನು ವೈಯಾಕರಣಿಗಳ ತತ್ತ್ವಗಳಿಗೆ ಮಾರುಹೋದನು. ಯಾರೂ ಸಹೃದಯರ ರಸಾನುಭವವನ್ನು ತತ್ತ್ವದೃಷ್ಟಿಯಿಂದ ಆಳವಾಗಿ ವಿಚಾರಮಾಡಿರಲಿಲ್ಲ. ರಸವೆಂದರೆ ಸಾಮಾಜಿಕರ ಆನಂದವೇ ಎಂದೊಪ್ಪಿದೊಡನೆ ಆನಂದಮೀಮಾಂಸೆಯೇ ರಸತತ್ತ್ವವಿಮರ್ಶಕನ ಪ್ರಥಮ ಕರ್ತವ್ಯವಾಗುತ್ತದೆ. ಆನಂದದ ಮೀಮಾಂಸೆ ಬರುವ ವೇದಾಂತ, ಸಾಂಖ್ಯ, ಯೋಗಶಾಸ್ತ್ರಗಳ ಪ್ರಕ್ರಿಯೆ ಗಳ ಪೂರ್ಣಪರಿಚಯವೂ ಆತನಿಗೆ ಅಗತ್ಯವಾಗುತ್ತದೆ. ಮುಂದಿನ ಅಭಿನವಗುಪ್ತನು ಭಟ್ಟನಾಯಕನನ್ನು ಮೀಮಾಂಸಕನೆಂದು ಜರೆದರೂ (ಹೋಲಿಸಿ—ಜೈಮಿನಿಸೂತ್ರೇ ಹ್ಯೇವಂ ಯೋಜ್ಯತೇ ನ ಕಾವ್ಯೇಽಪಿ, ಲೋಚನ. ಪು. ೬೩; ಮತ್ತು ಭಟ್ಟನಾಯಕೇನ . . . ಇತಿ ಕೇವಲಂ ಜೈಮಿನಿರನುಸೃತಃ— ಅಭಿನವಭಾರತೀ), ಅವನ ರಸಿಕತೆಯನ್ನು ಅಲ್ಲಗಳೆದರೂ, ತಾತ್ವಿಕದೃಷ್ಟಿಯಿಂದ ಭಟ್ಟನಾಯಕನ ರಸನಿರೂಪಣೆಯು ಶ್ಲಾಘ್ಯವೂ, ಇಂದಿಗೂ ಅಭಿನಂದನೀಯವೂ ಆಗಿದೆ. ಆತನು ಪೂರ್ವಮೀಮಾಂಸಾ ಶಾಸ್ತ್ರದಲ್ಲಿ ಪಾರಂಗತನಾಗಿದ್ದಂತೆ ಸಾಂಖ್ಯವೇದಾಂತಾದಿ ದರ್ಶನಪ್ರವೀಣನೂ ಆಗಿದ್ದನು. ಮುಖ್ಯ ಸಮಸ್ಯೆಯನ್ನು ಸದಾ ಕಣ್ಣಮುಂದಿಟ್ಟುಕೊಂಡು ಆತನು ಹೊಸ ವಿಚಾರಗಳನ್ನು ಮುಂದಿಟ್ಟಿದ್ದಾನೆ. ಈತನ ವಿಚಾರಧಾರೆಯನ್ನು ಅಭಿನವಗುಪ್ತನು ಬಾಯಿಂದ ತಪ್ಪೆಂದರೂ ಕೈಯಿಂದ ತಾನೇ ಎಷ್ಟೋ ಮಟ್ಟಿಗೆ ಎತ್ತಿಕೊಂಡಿದ್ದಾನೆ; ಮುಂದೆ ಬಂದ ಮಹಿಮಭಟ್ಟನ ಮೇಲಲ್ಲದಿದ್ದರೆ ಧನಂಜಯನ ಮೇಲೆ ಮತ್ತು ವಕ್ರೋಕ್ತಿಜೀವಿತವನ್ನು ಬರೆದ ಕುಂತಕನ ಮೇಲೆ ಭಟ್ಟನಾಯಕನ ಪರಿಣಾಮವಾದುದನ್ನು ಅಲಂಕಾರಶಾಸ್ತ್ರದ ಇತಿಹಾಸವು ತೋರಿಸುತ್ತದೆ.

[34] ಭಟ್ಟನಾಯಕನ ಪ್ರಕ್ರಿಯೆಯನ್ನು ಸಂಗ್ರಹವಾಗಿ ಹೀಗೆ ಹೇಳಬಹುದು:—ಕಾವ್ಯದಲ್ಲಿ ಶಬ್ದಗಳು ಕೋಶದಲ್ಲಿನ ಶಬ್ದಗಳೇ ಆದರೂ ತಮ್ಮದೊಂದು ವೈಲಕ್ಷಣ್ಯವನ್ನು ಪಡೆದಿರುವವಲ್ಲವೆ? ಇದನ್ನೇನೆಂದು ಕರೆಯಬೇಕೆನ್ನುವುದು ಪ್ರಶ್ನೆ. ಈ ಪ್ರಶ್ನೆಗೆ 'ಧ್ವನಿ'ಯೆಂದು ಆನಂದವರ್ಧನ ಉತ್ತರ ಹೇಳಿದ್ದಾನೆ, ಇರಲಿ. ಅವನು ಯಾವ ಶಬ್ದ ಉಪಯೋಗಿಸಿದನೆಂದು ಚರ್ಚೆಯಿಲ್ಲ. ಗಮನಿಸಬೇಕಾದ ಅಂಶಗಳನ್ನೆಲ್ಲ ಗಮನಿಸಿದ ಮೇಲೆ ಉತ್ತರ ಹೇಳಿದ್ದಾನೆಯೋ ಇಲ್ಲವೋ ಎಂಬು ದನ್ನು ಮಾತ್ರ ನೋಡಬೇಕು. ಕಾವ್ಯವನ್ನು ಶಬ್ದಸಂಗ್ರಹ ಮಾಡುವ ದೃಷ್ಟಿಯಿಂದ ಕೋಶಕಾರನು ಓದಬಹುದು; ಶಬ್ದಪ್ರಯೋಗಗಳ ಸಾಧುತ್ವವನ್ನು ಪಟ್ಟಿಮಾಡಲು ವೈಯಾಕರಣಿಯೂ ಓದ ಬಹುದು, ರಸಾನುಭವಕ್ಕಾಗಿ ಸಹೃದಯನು ಓದಬಹುದು; ಪ್ರಮಾಣ-ಪ್ರಮೇಯ ವಿವೇಚನೆಗಾಗಿ

ತಾರ್ಕಿಕನೂ ಓದಬಹುದು, ನೀತಿ-ಅನೀತಿಗಳ ನಿರ್ಣಯಕ್ಕಾಗಿ ಧರ್ಮಶಾಸ್ತ್ರಕಾರನೂ ಪರೀಕ್ಷಿಸಬಹುದು. ಕಾವ್ಯದಲ್ಲಿರುವ ಶಬ್ದಗಳು ಒಂದೇ ಆದರೂ ಅವು ಭಿನ್ನ ಭಿನ್ನ ವಾಚಕರಿಗೆ ವಿಭಿನ್ನ ಪ್ರಯೋಜನವನ್ನು ಕೊಡಬಲ್ಲವೆಂದಂತಾಯಿತು. ಆದ್ದರಿಂದ ಕಾವ್ಯಶಬ್ದದ ವ್ಯಾಪಾರವು ಅನೇಕಾಂಶಗಳಿಂದ ಕೂಡಿದ್ದೆನ್ನಬೇಕು. ಅವರವರ ದೃಷ್ಟಿಗೆ ತಕ್ಕಂತೆ ಶಬ್ದದ ಬೇರೆ ಬೇರೆ ವ್ಯಾಪಾರಾಂಶವು ವ್ಯಕ್ತವಾಗುತ್ತದೆ. ವಾಚ್ಯಾರ್ಥದ ದೃಷ್ಟಿಯಿಂದೋದುವವರಿಗೆಲ್ಲ ಕಾವ್ಯವ್ಯಾಪಾರದ ಅಭಿಧಾಯಕತ್ವವೆಂಬಂಶವಷ್ಟೇ ಪ್ರಕಟವಾಗುತ್ತದೆ. ಆದರೆ ಅಲೌಕಿಕವಾದ ರಸದ ನಿಷ್ಪತ್ತಿಯ ದೃಷ್ಟಿಯಿಂದ ನೋಡುವಾಗ ಅದೇ ಶಬ್ದಗಳಿಗೆ (ಭರತನ ಮಾತುಗಳನ್ನೇ ಬಳಸಿಕೊಂಡು ಹೇಳಿದರೆ) 'ಭಾವಕತ್ವ'ವೆಂಬ ವ್ಯಾಪಾರವಿರುವುದು ಕಾಣುತ್ತದೆ. ಸಹೃದಯನ ಆನಂದದ ದೃಷ್ಟಿಯಿಂದ ಹೇಳುವುದಾದರೆ ಅದೇ ಶಬ್ದಗಳಿಗೆ 'ಭೋಜಕತ್ವ' ಅಥವಾ ಭೋಗಕೃತ್ತ್ವವೆಂಬ ವ್ಯಾಪಾರವಿರುತ್ತದೆ. ಹೀಗೆ ಕಾವ್ಯಶಬ್ದದ ವ್ಯಾಪಾರಕ್ಕೆ ಮೂರು ಅಂಶಗಳಿವೆ. (ಹೋಲಿಸಿ—"ಅನ್ಯಶಬ್ದವೈಲಕ್ಷಣ್ಯಂ ಕಾವ್ಯಾತ್ಮನಃ ಶಬ್ದಸ್ಯ, ತ್ರ್ಯಂಶತಾಪ್ರಸಾದಾತ್. ತತ್ರಾಭಿಧಾಯಕತ್ವಂ ವಾಚ್ಯವಿಷಯಮ್, ಭಾವಕತ್ವಂ ರಸಾದಿವಿಷಯಮ್, ಭೋಕ್ತೃತ್ವಂ ಸಹೃದಯವಿಷಯಮಿತಿ ತ್ರಯೋಽಪ್ಯಂಶಭೂತಾ ವ್ಯಾಪಾರಾಃ"—ಲೋಚನದಲ್ಲಿ ಉದಾಹೃತ, ಪು. ೬೮) ಭಾವಕತ್ವ ವ್ಯಾಪಾರದ ಕೆಲಸವೇನೆಂದರೆ ಕಾವ್ಯದಲ್ಲಿರುವ ವಿಭಾವಾದಿಗಳಲ್ಲಿ ಒಂದು ಬಗೆಯ ಸಾಧಾರಣ್ಯವನ್ನು ತಂದುಕೊಡುವುದು. ಈ ಸಾಧಾರಣೀಕರಣ (*Universalisation*)ವಿಲ್ಲದೆ ರಸಪ್ರತೀತಿಯುಂಟಾಗಲಾರದು. ಆದ್ದರಿಂದ ಶಬ್ದವ್ಯಾಪಾರದಲ್ಲಿ ಇದನ್ನು ಒಂದು ಮುಖ್ಯಾಂಶವೆಂದು ಪರಿಗಣಿಸಲೇಬೇಕು. (ಹೋಲಿಸಿ—"ತೇನ ರಸಭಾವನಾಖ್ಯೋ ದ್ವಿತೀಯೋ ವ್ಯಾಪಾರಃ| ಯದ್ವಶಾದ್ ಅಭಿಧಾ ವಿಲಕ್ಷಣೈವ. ತಚ್ಚೈತದ್ ಭಾವಕತ್ವಂ ನಾಮ, ಯತ್ ಕಾವ್ಯಸ್ಯ ತದ್ವಿಭಾವಾದೀನಾಂ ಸಾಧಾರಣತ್ವಾಪಾದನಂ ನಾಮ, ಭಾವಿತೇ ಚ ರಸೇ ತಸ್ಯ ಭೋಗಃ—ಲೋಚನ, ಪು. ೬೮). ರಸಾನುಭೂತಿಯಲ್ಲಿ ಎರಡು ಅಂಶಗಳಿವೆ. ಒಂದು ರಸದ ಭಾವನೆ; ಅನಂತರ ಅದರ ಭೋಗ. ಎರಡಕ್ಕೂ ಶಬ್ದವೇ ಕಾರಣವಾದ್ದರಿಂದ ಶಬ್ದಕ್ಕೇ ಆ ಎರಡು ವ್ಯಾಪಾರಗಳನ್ನೂ ಒಪ್ಪಬೇಕು. ಎಂದರೆ ಸಹೃದಯನು ಶಾಕುಂತಲ ನಾಟಕವನ್ನು ನೋಡುವಾಗ ದುಷ್ಯಂತನನ್ನು ಧೀರೋದಾತ್ತ ಪುರುಷರ ಪ್ರತಿನಿಧಿಯಾಗಿಯೂ ಶಕುಂತಲೆಯನ್ನು ಮುಗ್ಧಸ್ತ್ರೀಯೊಬ್ಬಳನ್ನಾಗಿಯೂ ಸಾಧಾರಣವಾಗಿ ಗ್ರಹಿಸುವನೇ ಹೊರತು ವಿಶಿಷ್ಟ ಐತಿಹಾಸಿಕ ವ್ಯಕ್ತಿಗಳೆಂದಲ್ಲ. ಇಲ್ಲದಿದ್ದರೆ ಎಂದೋ ಸತ್ತು ಸ್ವರ್ಗಕ್ಕೆ ಹೋದವರ ಸಮಾಚಾರವು ಇಂದು ಅಷ್ಟು ಆಸ್ವಾದ್ಯವಾಗುವುದು ಹೇಗೆ?

ಭಟ್ಟನಾಯಕನ ಅಭಿಪ್ರಾಯದಲ್ಲಿ ರಸದ ಆನಂದವು ಸಾಮಾಜಿಕನದು; ಆದರೆ ರತ್ಯಾದಿಯು ಸಾಮಾಜಿಕನದೆಂದಾಗಲಿ, ನಾಯಕಾದಿಗತವೆಂದಾಗಲಿ ಹೇಳಲಿಕ್ಕೆ ಬಾರದು. ಅದರ ವ್ಯಕ್ತಿವಿಶೇಷತಾಂಶವೆಲ್ಲ ಗಲಿತವಾಗಿ ಕೇವಲ ಸಾಧಾರಣರೂಪದಲ್ಲಿ ಅದು ಭಾವಿತವಾಗುವುದೆಂದು ಅವನ ಸಿದ್ಧಾಂತ. ಇದಕ್ಕೆ ಕಾರಣ ಕಾವ್ಯಶಬ್ದಗಳ ಭಾವಕತ್ವವ್ಯಾಪಾರ. ರತ್ಯಾದಿಯು ಸಾಮಾಜಿಕನಲ್ಲಿಯೇ ಹುಟ್ಟುವುದೆನ್ನಲು ಅನೇಕ ತೊಂದರೆಗಳಿವೆ. (೧) ನಾಟಕದಲ್ಲಿ ಸೀತೆಯನ್ನು ನೋಡುತ್ತಿರುವ ಸಾಮಾಜಿಕನಿಗೆ ಅವಳ ವಿಷಯದಲ್ಲಿ ಪ್ರೇಮ ಅಸಂಭವ, ಏಕೆಂದರೆ ಸೀತೆಯು ಆತನ ಪತ್ನಿಯಲ್ಲ. ಸೀತೆಯು ರಾಮನ ರತಿಗೆ ವಿಭಾವವೇ ಹೊರತು ಸಾಮಾಜಿಕನ ರತಿಗಲ್ಲ. (೨) ಪತ್ನೀಸಾಮಾನ್ಯರೂಪದಲ್ಲಿ ರತಿವಾಸನೆಯು ಉಕ್ಕುವುದೆನ್ನುವುದೂ ಸರಿಯಲ್ಲ, ದೇವತಾವರ್ಣನೆಗಳಲ್ಲಿ ಆ

ಸಾಮಾನ್ಯಾಂಶಕ್ಕೂ ಆಸ್ಪದವಿರುವುದಿಲ್ಲವಾದ್ದರಿಂದ. ಅಲ್ಲದೆ ಸ್ವಪತ್ನೀಸ್ಮರಣೆ ಕೂಡ ನಾಟಕದಲ್ಲಿ ತಲೆದೋರುವುದಿಲ್ಲ. ರಾಮಾದಿಗಳ ಸೇತುಬಂಧಾದಿ ಲೋಕೋತ್ತರಕಾರ್ಯಗಳು ಸಾಮಾಜಿಕನಿಗೆ ಸಾಧಾರಣವೆನಿಸುವುದಾದರೂ ಹೇಗೆ? ರಾಮಾದಿಗಳ ಉತ್ಸಾಹಾದಿ ಮಾತ್ರದ ಪ್ರತೀತಿಯಿಂದಲೂ ಸಾಮಾಜಿಕನಿಗೆ ರಸಕ್ಕಿಂತ ಹೆಚ್ಚಾಗಿ ಅಸೂಯೆ ಮುಂತಾದ ಭಾವಗಳೇ ಹುಟ್ಟಬಹುದು. ಈ ಉತ್ಪತ್ತಿವಾದವನ್ನೊಪ್ಪಿದರೆ ಸೀತಾದಿಗಳಲ್ಲಿ ಕಾಮಿತ್ವವೂ ಕರುಣಾದಿಪ್ರಸಂಗಗಳಲ್ಲಿ ದುಃಖಿತ್ವವೂ ಸಹೃದಯನಿಗೆ ಇರಬೇಕಾಗುತ್ತದೆ. ವಿಭಾವಾದಿಕಾರಣಗಳು ನಷ್ಟವಾದ ಮೇಲೂ ಕಾರ್ಯವಾದ ರಸವು ಉಳಿಯಬೇಕಾಗುತ್ತದೆ ಇವು ಅನುಭವವಿರುದ್ಧ. ಆದ್ದರಿಂದ ರಸ ಉತ್ಪನ್ನವಲ್ಲ. ಇಲ್ಲದ್ದು ಜನಿಸುವುದು ಉತ್ಪತ್ತಿಯಾದರೆ ಇದ್ದುದೇ ಪ್ರಕಾಶಕ್ಕೆ ಬರುವುದು ಅಭಿವ್ಯಕ್ತಿಯೆನಿಸುತ್ತದೆ. ರಸವು ಪೂರ್ವಸಿದ್ಧವಲ್ಲದ ಕಾರಣ ಅದು ಅಭಿವ್ಯಕ್ತವಾಗುವುದೆನ್ನುವಂತೆಯೂ ಇಲ್ಲ. ಶಕ್ತಿ (=ಸಂಸ್ಕಾರ = *Potentiality*) ರೂಪವಾಗಿ ಪೂರ್ವಸಿದ್ಧವೆಂದರೂ ಅದರ ಅಭಿವ್ಯಕ್ತಿಯಲ್ಲಿ ವಿಷಯಕೃತವಾದ ಮತ್ತು ಇಚ್ಛಾಕೃತವಾದ ತಾರತಮ್ಯಗಳು ಇರಬೇಕಾಗುತ್ತದೆ. ಇವೆಲ್ಲ ತೊಂದರೆಗಳನ್ನೂ ನಿವಾರಿಸಲು ಕಾವ್ಯಮಾತ್ರವಿದ್ಯಮಾನವಾದ ಭಾವಕತ್ವವ್ಯಾಪಾರವೊಂದೇ ಔಷಧ. ಈ ವ್ಯಾಪಾರವೇ ಶಾಸ್ತ್ರಗಳಿಂದ ಕಾವ್ಯಗಳನ್ನು ಪೃಥಕ್ಕರಿಸುವ ವೈಲಕ್ಷಣ್ಯ. ಇದು ಮನಸ್ಸಿನ ಘನನಿಬಿಡ ಸಂಮೋಹಸಂಕಟವನ್ನೆಲ್ಲ ಎಂದರೆ ವೈಯಕ್ತಿಕ ಸಂಬಂಧಗಳನ್ನೆಲ್ಲ ನಿವಾರಿಸಿ, ವಿಭಾವಾದಿಗಳು ತನಗೂ ನಟನಿಗೂ ಸಾಧಾರಣವಾಗುವಂತೆ ಮಾಡುತ್ತದೆ. ಹೀಗೆ ರಸವು ಪ್ರತೀತವೂ ಅಲ್ಲ, ಉತ್ಪನ್ನವೂ ಅಲ್ಲ, ಅಭಿವ್ಯಕ್ತವೂ ಅಲ್ಲ, ಅದು ಕೇವಲ ಭಾವಿತ ಭಾವಿತವಾದ ಮೇಲೆ ಭೋಗ್ಯವಾಗುತ್ತದೆ. ಭೋಗವೆಂದರೆ ತಾನೂ ಉಂಡು ಇತರರಿಗೂ ಕೊಡುವಂತಹುದು; ಅನುಭವ, ಸ್ಮೃತಿಗಳಿಗಿಂತ ವಿಲಕ್ಷಣವಾದುದು. ಸತ್ತ್ವ, ರಜಸ್, ತಮಸ್ ಎಂಬ ತ್ರಿಗುಣಗಳಿಂದ ಕೂಡಿದ ಚಿತ್ತವು ಸತ್ತ್ವದ ಉದ್ರೇಕದಿಂದ ಸುಖವನ್ನೂ ರಜಸ್ಸಿನ ವಿಕಾಸದಿಂದ ದುಃಖವನ್ನೂ ತಮೋಗುಣದ ಪ್ರಸಾರದಿಂದ ಮೋಹವನ್ನೂ ತರುತ್ತದೆಂಬುದು ಪ್ರಸಿದ್ಧ. ಭೋಗಕಾಲದಲ್ಲಿ ರಜಸ್ಸು ಕರಗಿಹೋದೊಡನೆ ತಮೋಗುಣವು ಪ್ರಸರಿಸಿದರೂ ಶಕ್ತಿಹೀನವಾಗುತ್ತದೆ; ಸತ್ತ್ವವೊಂದೇ ಪ್ರಫುಲ್ಲವಾಗುತ್ತದೆ. ಅದರ ಫಲವೇ ಆನಂದ. ಆ ಆನಂದವು ಬ್ರಹ್ಮಾನಂದಕ್ಕೆ ಸಮಾನ.

ಈ ಮೇಲಿನ ಪ್ರಕ್ರಿಯೆಯನ್ನು ಈಚಿನ ಕಾವ್ಯಪ್ರಕಾಶ ಟೀಕೆಯಾದ 'ಪ್ರದೀಪ'ದ ಆಧಾರದ ಮೇಲೆ ಪ್ರೊ|| ಎಂ. ಹಿರಿಯಣ್ಣನವರು ಸಾಂಖ್ಯದರ್ಶನದ ರೀತ್ಯಾ ನಯನಮಾಡಲೆತ್ನಿಸಿದ್ದಾರೆ (*Art Experience*, ಪುಟ ೧೨). ಭೋಗವೆಂಬ ಶಬ್ದವು ಆ ದರ್ಶನದಲ್ಲಿ ಬರುತ್ತದೆ ನಿಜ, ಆದರೆ ಆನಂದವೆಂಬರ್ಥದಲ್ಲಲ್ಲ. ಸುಖದುಃಖ ಮೋಹಾತ್ಮಕವಾದ ಸಂಸಾರವೆಂಬರ್ಥದಲ್ಲಿ ಮಾತ್ರ ಅಲ್ಲಿ ಉಪಯುಕ್ತವಾಗಿದೆ. ಇಲ್ಲಿ ಪ್ರಸಕ್ತವಾದುದು ದುಃಖಮೋಹಗಳ ಲೇಪವಿಲ್ಲದ, ಸುಖರೂಪವಾದ ಭೋಗ ಮಾತ್ರ. ಸಾಂಖ್ಯಕ್ಕೆ ಸಮಾನತಂತ್ರವಾದ ಯೋಗದರ್ಶನದಲ್ಲಿಯೂ ಭೋಗವೆಂದರೆ ಅಪವರ್ಗಕ್ಕೆ ವಿರುದ್ಧವಾದ ಸಂಸಾರಭೋಗವೆಂದಷ್ಟೇ ಅರ್ಥವಾಗುತ್ತದೆ. ಆದ್ದರಿಂದ ಭಟ್ಟನಾಯಕನಿಗೆ ರಸಾನಂದದ ಕ್ಷಣಿಕತ್ವವನ್ನೂ ಲೌಕಿಕತ್ವವನ್ನೂ ಉಪಪಾದಿಸುವ ಉದ್ದೇಶ ಪ್ರಬಲವಾಗಿದ್ದಿತೆನ್ನುವುದಾದರೆ ಮಾತ್ರ ಸಾಂಖ್ಯಪ್ರಕ್ರಿಯೆಯ ನಯನ ಸರಿಯಾಗುತ್ತದೆ. ಅವನಿಗೆ ರಸಾನಂದಕ್ಕೂ ಬ್ರಹ್ಮಾನಂದಕ್ಕೂ ಇರುವ ಸಾಮ್ಯದ ಮತ್ತು ಅವುಗಳ ಲೋಕೋತ್ತರತ್ವದ ನಿರೂಪಣೆಯು ಹೆಚ್ಚು ವಿವಕ್ಷಿತವೆನ್ನುವುದಾದರೆ ಸಮಂಜಸವಾಗುವುದಿಲ್ಲ. ವೇದಾಂತದರ್ಶನದಲ್ಲಿ ಬ್ರಹ್ಮಾನಂದಕ್ಕೆ ಇರುವ

ಶ್ರೀಮದಭಿನವಗುಪ್ತಪಾದರ ವಿವರಣೆಯಿದು[೩೬]:—ಜೀವನದಲ್ಲಿ ಸುಂದರಿಯರೇ ಮೊದಲಾದ ಕಾರಣಾದಿಗಳ ಪರಾಮರ್ಶದಿಂದ (ರತಿಯೇ ಮುಂತಾದ) ಸ್ಥಾಯಿ ಭಾವದ ಸದ್ಭಾವವನ್ನು ಊಹಿಸುವ ಸಾಮರ್ಥ್ಯವುಳ್ಳ ಸಾಮಾಜಿಕರು ಕಾವ್ಯ ಮತ್ತು ನಾಟಕಗಳಲ್ಲಿ ಅವೇ ಬಂದಾಗ ವಿಭಾವಕತ್ವವೇ ಮುಂತಾದ ಹೊಸ ವ್ಯಾಪಾರವನ್ನು

---

ತಡೆಯೆಂದರೆ ಅವಿದ್ಯೆ. ಅವಿದ್ಯೆಯೆಂಬುದು ಸತ್ವ, ರಜಸ್ಸು, ತಮಸ್ಸುಗಳಿಂದಾದುದು. ಇವುಗಳಲ್ಲಿ ರಜಸ್ಸು ತಮಸ್ಸುಗಳು ಪುರುಷನನ್ನು ಬದ್ಧನನ್ನಾಗಿ ಮಾಡಲು ಮುಖ್ಯ ಸಹಕಾರಿಗಳು; ಸತ್ವವು ಮೋಕ್ಷವನ್ನುಂಟುಮಾಡಿಕೊಡಲು ಸಹಕಾರಿ. ಕೇವಲ ಸತ್ತ್ವವೇ ಇದ್ದಾಗ ಅದರ ಪ್ರಕಾಶವು ಸುಜ್ಞಾನ ಮತ್ತು ಬ್ರಹ್ಮಾನಂದಗಳನ್ನು ತೋರಿಸಲು ಅನುಕೂಲಿಸುತ್ತದೆ. ಈ ಜಗತ್ತಿನ ಸೃಷ್ಟಿಗೆ ಕಾರಣ ವಾದ ಈಶ್ವರನ ಮಾಯೆ ಅಥವಾ ಅವಿದ್ಯೆಯಲ್ಲಿಯೂ ಸೃಷ್ಟಿಗೆ ಮುನ್ನ ರಜಸ್ಸಿರುವುದಿಲ್ಲ; ಸತ್ವವೊಂದೇ ಸಕ್ರಿಯವಾಗಿರುತ್ತದೆ; ಬೆಳಕಿನ ಮುಂದಿನ ಕತ್ತಲೆಯಂತೆ ತಮಸ್ಸು ನಿಷ್ಕ್ರಿಯವಾಗಿರುತ್ತದೆ ಮತ್ತು ಅದಕ್ಕೆ ಆಗ ಆನಂದಮಯಕೋಶವೆಂದು ಹೆಸರು. ಬ್ರಹ್ಮಾನಂದವನ್ನು ಸ್ವಚ್ಛವಾಗಿ ಪ್ರತಿಫಲಿಸು ತ್ತಿದ್ದರೂ ಆಚ್ಛಾದಕತ್ವವುಳಿದಿರುವುದರಿಂದ ಅದಕ್ಕೆ 'ಕೋಶ ವೆನ್ನುತ್ತಾರೆ. ಬ್ರಹ್ಮಾನಂದವನ್ನು ಸಾಕ್ಷಾತ್ಕರಿಸುವ ಸಾಧಕನಿಗೆ ಅದಕ್ಕೆ ಹಿಂದಿನ ಕಡೆಯ ಮೆಟ್ಟಲೇ ಆನಂದಮಯಕೋಶ. ಈ ಸತ್ವವನ್ನು ಅವನು ಉತ್ತೀರ್ಣನಾದರೆ ಅವಿದ್ಯೆ ಪೂರ್ಣವಾಗಿ ತೊಲಗಿ ಬ್ರಹ್ಮಾನುಭವ ಬರುತ್ತದೆ. ಈ ದೃಷ್ಟಿಯಿಂದ ಭಟ್ಟನಾಯಕನ ರಸತತ್ತ್ವವು ಅಕ್ಷರಶಃ ವೇದಾಂತತತ್ತ್ವದ ಪ್ರತಿರೂಪವೆಂದು ನಮಗೆ ತೋರುತ್ತದೆ. ರಜಸ್ತಮೋಗುಣಗಳ ಪ್ರಸರಣವನ್ನು ನಿಲ್ಲಿಸಿ ಸತ್ವಪ್ರಕಾಶಕ್ಕೆ ಮಾತ್ರ ಆಸ್ಪದವೀಯುತ್ತ ದುಃಖಮೋಹಗಳಿಂದ ಅಲಿಪ್ತವಾದ ಸುಖವನ್ನು ಮಾತ್ರ ಕಾವ್ಯವು ಕರುಣಿಸುತ್ತದೆ. ಈ ಸುಖವು ಬ್ರಹ್ಮಾನಂದದ ಛಾಯೆಯೇ ಹೊರತು ಅನ್ಯಥಾ ಅಲ್ಲ; ಅಂತೆಯೇ ಲೋಕೋತ್ತರ. ಭಟ್ಟನಾಯಕನು ನಾಟ್ಯಶಾಸ್ತ್ರದ ಆದಿಶ್ಲೋಕಗಳ ವ್ಯಾಖ್ಯಾನದಲ್ಲಿಯೇ ಹೀಗೆ ವೇದಾಂತಪರವಾಗಿ ವಿವರಿಸಿದ್ದುದಕ್ಕೆ ಅಭಿನವಗುಪ್ತನ ಪ್ರಮಾಣವೇ ಸಿಕ್ಕುತ್ತದೆ: ಹೋಲಿಸಿ: "ಅಸತ್ಯವಾದ ನಾಮ ರೂಪಪ್ರಪಂಚಾತ್ಮಕವಾದ ವಿಶ್ವವು ಹೇಗೆ ನಿಃಶ್ರೇಯಸಸಾಧನವೋ ಹಾಗೆಯೇ ಸ್ವಪ್ನಾದಿ ವಿಲಕ್ಷಣವೂ ಕಲ್ಪನಾಮಾತ್ರಸಾರವೂ ಆದ ನಾಟ್ಯಪ್ರಪಂಚವೂ ಕೂಡ ಪುರುಷಾರ್ಥಪ್ರಯೋ ಜಕವೇ"—(ಅಭಿನವಭಾರತೀ, 1, 5). ಈ ಸಂದರ್ಭದಲ್ಲಿ ಹೆಚ್ಚು ಜಿಜ್ಞಾಸೆಯುಳ್ಳವರು ಡಾ|| ಕೆ. ಸಿ. ಪಾಂಡೆಯವರ *Indian Aesthetics* ಎಂಬ ಗ್ರಂಥವನ್ನೋದಬಹುದು. ಹೀಗೆ ವೇದಾಂತ ಪ್ರಕ್ರಿಯೆಯನ್ನಳವಡಿಸಿಕೊಳ್ಳುವುದರಿಂದ ರಸಾನುಭವವು ಬ್ರಹ್ಮಾನಂದಕ್ಕೆ 'ಕಿಂಚಿದೂನ' ವೆಂಬಂಶದಲ್ಲೂ ಅದು ಲೋಕೋತ್ತರವೆಂಬಂಶದಲ್ಲೂ ಹೆಚ್ಚಿನ ಪುಷ್ಟಿಯುಂಟಾಗುತ್ತದೆ.

[೩೬] ಧ್ವನ್ಯಾಲೋಕ, ನಾಟ್ಯಶಾಸ್ತ್ರ ಮತ್ತು ಕಾಶ್ಮೀರಶೈವ ದರ್ಶನದ ಮೂಲಗ್ರಂಥಗಳಿಗೆ ಪ್ರೌಢವೂ, ಪಾಂಡಿತ್ಯಪೂರ್ಣವೂ ತಲಸ್ಪರ್ಶಿಯೂ ಆದ ವ್ಯಾಖ್ಯಾನಗಳನ್ನು ಬರೆದ ಅಭಿನವಗುಪ್ತ ಪಾದರು ಸಂಸ್ಕೃತ ಸಾಹಿತ್ಯದಲ್ಲಿ ಅಮರಸ್ಥಾನವನ್ನು ಗಳಿಸಿದ್ದಾರೆ. ಇವರ ಕಾಲ ಸುಮಾರು ಕ್ರಿ.ಶ. ೧೦೦೦. ಇವರು ಭಟ್ಟನಾಯಕನ ನಂತರ ಗ್ರಂಥರಚನೆ ಮಾಡಿದವರಲ್ಲಿ ಅತ್ಯಂತ ಪ್ರಮುಖರು. ಅವರ ಕೃತಿಗಳು ವ್ಯಾಖ್ಯಾರೂಪದಲ್ಲಿದ್ದರೂ ಸ್ವತಂತ್ರ ಗ್ರಂಥಗಳಲ್ಲಿರುವಂತೆ ನೂತನ ಸಿದ್ಧಾಂತಗಳ ಪ್ರತಿಪಾದನೆಯನ್ನು ಅಲ್ಲಿ ನೋಡಬಹುದು.

ತಳೆಯುವುದನ್ನು ಅನುಲಕ್ಷಿಸಿ ಅವನ್ನು 'ವಿಭಾವ' ಇತ್ಯಾದಿ ನೂತನ ಹೆಸರುಗಳಿಂದ ಕರೆಯುತ್ತಾರೆ.[36] ಜೀವನದಲ್ಲಿ ಕಾರಣಾದಿಗಳು 'ನನ್ನವೇ ಇವು', 'ಹಗೆಯದೇ ಇವು', 'ತಟಸ್ಥನದೇ ಇವು' 'ಇವು ನನ್ನದಲ್ಲ', 'ಇವು ಹಗೆಯದಲ್ಲ', 'ಇವು ತಟಸ್ಥನವಲ್ಲ' ಎಂದು ಮುಂತಾಗಿ ವೈಯಕ್ತಿಕ ಸಂಬಂಧವಿಶೇಷಗಳ ಸ್ವೀಕಾರ ಅಥವಾ ಪರಿಹಾರವನ್ನು ತಳೆದೇ ತಳೆಯುತ್ತವೆ; ಆದರೆ ಸಾಹಿತ್ಯದಲ್ಲಿ ವಿಭಾವಾದಿಗಳು ಈ ನಿಯಮಗಳಿಗೆ ನಿಶ್ಚಿತರೂಪದಿಂದ ಒಳಗಾಗುವುದೇ ಇಲ್ಲವಾದುದರಿಂದ ಸಾಧಾರಣ ಸ್ವರೂಪದಿಂದ ಮಾತ್ರ ಪ್ರತೀತವಾಗುತ್ತವೆ.[37] ಇಂತಹ ವಿಭಾವಾದಿಗಳಿಂದ **ಅಭಿ**

---

[36] ಸಾಮಾಜಿಕರೆಲ್ಲರಿಗೂ ರಸಾಸ್ವಾದವು ಬಂದೇತೀರುವುದೆಂಬ ನಿಯಮಗಳು ಸಹೃದಯ ರಾದವರಿಗೆ ಮಾತ್ರ ಅದು ಸಿದ್ಧಿಸುವುದೆಂಬುದನ್ನು ಮೊದಲು ಆನಂದವರ್ಧನನು ಹೇಳಿದನು. (ಹೋಲಿಸಿ—**ಕನ್ನಡ ಧ್ವನ್ಯಾಲೋಕ,** ಪು. ೯) ಅದನ್ನು ಭಟ್ಟನಾಯಕನೂ ವಿಸ್ತರಿಸಲಿಲ್ಲ. ಆದರೆ ಅಭಿನವಗುಪ್ತರು ತಮ್ಮ ರಸಪ್ರಕ್ರಿಯೆಯಲ್ಲಿ ಅದಕ್ಕೆ ಮೊದಲ ಸ್ಥಾನವನ್ನಿತ್ತಿದ್ದಾರೆ. 'ಸಹೃದಯ' ಎಂದರೆ ವರ್ಣನೀಯವಾದ ವಿಷಯದಲ್ಲಿ ಅರ್ಥಾತ್ ವಿಭಾವಾದಿಗಳಲ್ಲಿ ಹೃದಯ ಸಂವಾದವನ್ನು ಅರ್ಥಾತ್ ತನ್ಮಯೀಭಾವವನ್ನು ಪಡೆಯುವ ವಿಶೇಷ ಸಂಸ್ಕಾರವುಳ್ಳವನು. ಈ ಸಂಸ್ಕಾರ ಅಥವಾ ಯೋಗ್ಯತೆಯು ಮತ್ತೆ ಮತ್ತೆ ಲೋಕಜೀವನ ಮತ್ತು ಉತ್ತಮ ಕಾವ್ಯಾದಿ ಗಳನ್ನು ಅನುಶೀಲನಮಾಡಿದ್ದರ ಪರಿಣಾಮವಾಗಿ ಮನಸ್ಸು ಕನ್ನಡಿಯಂತೆ ಸ್ವಚ್ಛವಾದಾಗ ಮಾತ್ರ ಬರುತ್ತದೆ. ಲೋಕದಲ್ಲಿ ಕಾರಣಾದಿಗಳಿಂದ ರತ್ಯಾದಿಗಳನ್ನು 'ಅನುಮಾನ'ಮಾಡುವುದು ಅನುಭವ ಸಿದ್ಧವೇ ಹೊರತು ಕಾವ್ಯಲೋಕದಲ್ಲಿ ವಿಭಾವಾದಿಗಳ ಮೂಲಕ ರಸವನ್ನೇನೂ ಅನುಮಾನಮಾಡುವು ದಿಲ್ಲವೆಂದು ಶಂಕುಕನ ಮತವನ್ನು ಪರ್ಯಾಯವಾಗಿ ನಿರಾಕರಿಸುತ್ತಿದ್ದಾರೆ. ಅನುಮಿತಿಯಿದ್ದಲ್ಲಿ ರಸವಿಲ್ಲ; ರಸವಿದ್ದಲ್ಲಿ ಅನುಮಿತಿಯಿಲ್ಲವೆಂಬುದೇ ಅವರ ಸಿದ್ಧಾಂತ.

[37] ಪ್ರತಿಯೊಬ್ಬನ ಜೀವನದಲ್ಲಿಯೂ ಮನುಷ್ಯಪ್ರಪಂಚವು 'ನಾನು', 'ನನಗಾಗದವರು', 'ತಟಸ್ಥರು' ಎಂಬ ತ್ರಿವರ್ಗದ ಸಂಬಂಧದಿಂದಲೇ ಅನುಭವಕ್ಕೆ ಬರುತ್ತದೆ. ಯಾವ ಘಟನೆ ನಡೆದರೂ ಈ ಸಂಬಂಧಗಳ ಮೂಲಕವೇ ಅವುಗಳ ಅನುಭವವು ಮನಸ್ಸಿನಮೇಲಾಗುತ್ತದೆ. ಏಕೆಂದರೆ ಪ್ರತಿಯೊಬ್ಬ ವ್ಯಕ್ತಿಯೂ ತನ್ನ ವ್ಯಕ್ತಿತ್ವವನ್ನೇ ಕೇಂದ್ರವಾಗಿಟ್ಟುಕೊಂಡು ವ್ಯವಹಾರದಲ್ಲಿ ಮಗ್ನನಾಗುತ್ತಿರುತ್ತಾನೆ. ಬಾಳಿನಲ್ಲಿ ಯುವತಿಯನ್ನು ನೋಡಿದರೆ 'ಇವಳು ನನ್ನವಳು ಅಥವಾ ಶತ್ರುವಿಗೇ ಸೇರಿದವಳು ಅಥವಾ ಮೂರನೆಯವರ ಹೆಂಡತಿ ಇತ್ಯಾದಿ ವೈಯಕ್ತಿಕ ಮನೋಭಾವಗಳು ತಲೆದೋರುತ್ತವೆ. ಈ ಮನೋಭಾವಗಳು ಹೀಗೆ ವಿಧಿರೂಪವಾಗಿರಬಹುದು; ಅಥವಾ ನನ್ನವಳೇನೂ ಅಲ್ಲ' ಇತ್ಯಾದಿ ನಿಷೇಧರೂಪವಾಗಿರಬಹುದು. ಆದರೆ ಸಾಹಿತ್ಯದಲ್ಲಿ ಮಾತ್ರ ಈ ವೈಯಕ್ತಿಕ ಸಂಬಂಧ ಗಳೆರಡೂ ಮಾಯವಾಗಿ ನನ್ನ, ಇನ್ನೊಬ್ಬನ, ಎಂಬ ಭಾವನೆಗಳೂ ಹೋಗಿ, ವಿಭಾವಾದಿಗಳ ಸಾಧಾರಣ ಸ್ವರೂಪ ಮಾತ್ರ ವೇದ್ಯವಾಗುತ್ತದೆ. ಇದನ್ನು ಭಟ್ಟನಾಯಕನ 'ಭಾವಕತ್ವ'ವ್ಯಾಪಾರ ಮತ್ತು ಸಾಧಾರಣೀಕರಣಗಳೊಂದಿಗೆ ಹೋಲಿಸಬಹುದು.

**ಪ್ರೊ||** ತೀ. ನಂ. ಶ್ರೀಕಂಠಯ್ಯನವರು ತಮ್ಮ **ಭಾರತೀಯ ಕಾವ್ಯಮೀಮಾಂಸೆ** (ಮೈಸೂರು ವಿಶ್ವವಿದ್ಯಾನಿಲಯ, ೧೯೫೩) ಪುಟ ೩೪೨ ರಲ್ಲಿ "ಸ್ಥಾಯಿಭಾವವು ಸಾಧಾರಣೀಕೃತವಾಗಿ

ಸಹೃದಯನಿಗೆ ಭೋಗವಿಷಯವಾಗುವುದಷ್ಟೆ! ಹೀಗೆ ಸಾಧಾರಣೀಕೃತವಾಗತಕ್ಕದ್ದು ಯಾರ ಸ್ಥಾಯಿಭಾವ ಎಂಬುದನ್ನು ಭಟ್ಟನಾಯಕನು ಸ್ಪಷ್ಟಪಡಿಸಿದ್ದಂತೆ ತೋರುವುದಿಲ್ಲ . . .'' ಎಂದು ಬರೆದಿದ್ದಾರೆ.

ಈ ವಿಷಯದಲ್ಲಿ ಸಂದೇಹಕ್ಕೆಡೆಯೇನೂ ನಮಗೆ ಕಾಣುವುದಿಲ್ಲ. ಲೋಕದಲ್ಲಿ ಕಾರ್ಯ, ಕಾರಣ, ಸಹಕಾರಿಗಳನ್ನು ನೋಡಿ ಒಬ್ಬನ ಸ್ಥಾಯಿಭಾವವನ್ನು ಇನ್ನೊಬ್ಬನು ಊಹಿಸುತ್ತಾನೆ (ಇದೇ ಮಾತನ್ನು ಮುಂದೆ ಅಭಿನವಗುಪ್ತರೂ ಹೇಳಿದ್ದಾರೆ). ಹಾಗೆಯೇ ಕಾವ್ಯಲೋಕದಲ್ಲಿ ವಿಭಾವ, ಅನುಭಾವ, ವ್ಯಭಿಚಾರಿಗಳನ್ನು ನೋಡಿ ನಟಾಭಿನ್ನ ರಾಮಾದಿಗಳ ಸ್ಥಾಯಿಭಾವವನ್ನು ಸಾಮಾಜಿಕನು ಊಹಿಸುತ್ತಾನೆಂಬುದು ಶಂಕುಕನ ಮತ. ಈ ಅನುಮಿತಿವಾದವನ್ನು ಖಂಡಿಸುತ್ತಿದ್ದಾನೆ ಭಟ್ಟನಾಯಕ. ಪರಗತವಾದ ರತ್ಯಾದಿಯ ಪ್ರತೀತಿಯಿಂದ ಸಾಮಾಜಿಕನಲ್ಲಿ ರಸವುಂಟಾಗುವುದು ಅಸಂಭವವೆಂಬ ಕಾರಣದಿಂದ. ಹಾಗಾದರೆ ಸ್ವಗತವಾದ ರತ್ಯಾದಿಯ ಪ್ರತೀತಿಯಿಂದ ರಸವುಕ್ಕುವುದೆನ್ನೋಣವೇ ಎಂದರೆ ಅದೂ ಅಸಂಭವವೆಂದಿದ್ದಾನೆ—ಸ್ವಗತವಾದ ರತ್ಯಾದಿಗೆ ಸೀತಾದಿಗಳು ವಿಭಾವಾದಿಗಳೆನಿಸುವುದೇ ಅಸಾಧ್ಯವಾದ್ದರಿಂದ. ಎಂದಮೇಲೆ, 'ಇದು ನಾಯಕಗತವಾದ ರತ್ಯಾದಿ ಸ್ಥಾಯಿಭಾವ', ಅಥವಾ 'ಇದು ಆತ್ಮಗತವಾದ ರತ್ಯಾದಿ ಸ್ಥಾಯಿಭಾವ' ಎಂಬ ಕಲ್ಪನೆಗಳೇ ಬಾರದೆ ಕೇವಲ ಸಾಧಾರಣರೂಪದಲ್ಲಿ ರತ್ಯಾದಿ ಸ್ಥಾಯಿಭಾವಗಳು ಕಾವ್ಯದ ಭಾವಕತ್ವವ್ಯಾಪಾರದಿಂದ ಭಾವಿತವಾದೊಡನೆ ರಸವನಿಸುತ್ತವೆ. ಸಾಮಾಜಿಕನಲ್ಲಿ ವಾಸನಾತ್ಮಕವಾಗಿ ರತ್ಯಾದಿಗಳಿರುವುದು ಸಕಲವಾದಿಗಳಿಗೂ ಸಮ್ಮತವೇ. ಅದೇ ರಸಾನುಭವವಾಗಿ ಪರಿಣಮಿಸುವ ಸಾಮಗ್ರಿಯೆನ್ನುವುದೂ ಹಾಗೆಯೇ. ವಾಸನಾಶೂನ್ಯರಿಗೆ ರಸಾನುಭವವನ್ನು ಲೊಲ್ಲಟಾದಿಗಳಾದರೂ ಒಪ್ಪುತ್ತಿದ್ದರೆನ್ನಲವಕಾಶವಿಲ್ಲ. ರಸತತ್ತ್ವನಿರೂಪಣೆಯಲ್ಲಿ ಸಾಮಾಜಿಕರ ರತ್ಯಾದಿನಿರ್ದೇಶದಿಂದ ಸೌಂದರ್ಯಶಾಸ್ತ್ರದ ರಹಸ್ಯಪ್ರತಿಪಾದನೆಯಾಯಿತೆಂದು ನಮಗೆ ತೋರುವುದಿಲ್ಲ. ಆ ರಹಸ್ಯಪ್ರತಿಪಾದನೆಯ ದೃಷ್ಟಿಯಿಂದ ಸಾಧಾರಣೀಕರಣವನ್ನು ಮೊದಲು ಹೇಳುವ ಭಟ್ಟನಾಯಕನು ನಿಜವಾಗಿಯೂ ಮುಂದಿನ ಹೆಜ್ಜೆಯನ್ನಿಟ್ಟನೆನ್ನಬಹುದು. ಲೋಕದಲ್ಲಿ ಸ್ವಗತ ಅಥವಾ ಪರಗತವೆಂದು ಅನುಭವ ಹಾಗು ಸ್ಮೃತಿವಿಷಯವಾದ ರತ್ಯಾದಿ ಸ್ಥಾಯಿಭಾವವು ಕಾವ್ಯದಲ್ಲಿ ಬಂದಾಗ ಆ ಅನುಭವಲೇಶವೂ ಉಂಟಾಗದಂತೆ ಬರುವುದೇ ಕಾವ್ಯದ ಮರ್ಮ. ಆ ಅನುಭವಲೇಶವಿರುವ ವರೆಗೂ ಕಾವ್ಯದಲ್ಲಿ ರಸವಿಲ್ಲ; ರತ್ಯಾದಿ ಸ್ಥಾಯಿಭಾವವು ಸ್ಥಾಯಿಭಾವವಾಗಿ ಕಾಣುವುದು ತಪ್ಪಿದೊಡನೆ ಅದಕ್ಕೆ ರಸವೆಂಬ ಹೆಸರು ಬರುತ್ತದೆ, ರಸವೊಂದೇ ಕಾಣುತ್ತದೆ. ಎಂದರೆ ಕಾವ್ಯದಲ್ಲಿ ರಸತ್ವವನ್ನು ಪಡೆದಾಗ ಸಾಧಾರಣೀಕೃತ ಸ್ಥಾಯಿಭಾವವುಂಟೇ ಹೊರತು, ಯಾರ ಸ್ಥಾಯಿಭಾವವೂ ಗೋಚರಕ್ಕೆ ಬರಲವಕಾಶವಿಲ್ಲ. ಸಾಧಾರಣೀಕರಣಕ್ಕೆ ಕಡೆಯಪಕ್ಷ ಎರಡು ವಸ್ತುಗಳಿರಬೇಕಾದ್ದರಿಂದ ನಾಯಕಗತ ಸ್ಥಾಯಿಭಾವ ಮತ್ತು ಸಾಮಾಜಿಕಗತ ಸ್ಥಾಯಿಭಾವ ಇವೆರಡರ ಸಾಧಾರಣೀಕೃತ ಸ್ಥಿತಿಯೇ ರಸವೆಂಬ ಸಿದ್ಧಾಂತದಲ್ಲಿ ಸಂದೇಹಕ್ಕೇನು ಎಡೆಯಿದೆ? ಈ ವಿಷಯದಲ್ಲಿ ಭಟ್ಟನಾಯಕನಿಗೂ ಅಭಿನವಗುಪ್ತನಿಗೂ ಅಭಿಪ್ರಾಯಭೇದವಿದ್ದಂತೇನೂ ಕಲ್ಪಿಸುವ ಕಾರಣವಿಲ್ಲ.

ಸಾಧಾರಣೀಕರಣವು ಮುಖ್ಯವಾಗಿ ಕಾವ್ಯವ್ಯಾಪಾರ; ಲೋಕವಿಲಕ್ಷಣವಾದ ವ್ಯಾಪಾರ. ವಿಭಾವಾದಿಗಳಂತೆ ಸ್ಥಾಯಿಭಾವಗಳಿಗೂ ಅದು ಅನ್ವಯಿಸತಕ್ಕುದು. ಅಂತೆಯೇ ಭಟ್ಟನಾಯಕನು ಆ ಸಾಧಾರಣೀಕರಣವನ್ನೇ 'ಭಾವಕತ್ವ'ವೆಂದು ಕರೆದಿದ್ದಾನೆ. ಇವುಗಳಲ್ಲಿ ಸಾಧಾರಣೀಕೃತ

ವ್ಯಕ್ತಿಯನ್ನು ಪಡೆದೊಡನೆ[38] ಸಾಮಾಜಿಕರಲ್ಲಿ ಯಾವಾಗಲೂ ವಾಸನಾರೂಪ ವಾಗಿರುವ ರತ್ಯಾದಿ ಸ್ಥಾಯಿಭಾವವು ವಸ್ತುತಃ ಪ್ರತ್ಯೇಕ ರಸಿಕನಲ್ಲಿ ಮಾತ್ರ

---

ವಿಭಾವಾದಿಗಳನ್ನು ಭಾವಕಗಳೆಂದೂ ಸಾಧಾರಣೀಕೃತ ಸ್ಥಾಯಿಭಾವವನ್ನು ಎಂದರೆ ರಸವನ್ನು ಭಾವ್ಯವೆಂದೂ ತಿಳಿಯಬಹುದು. ಕಾವ್ಯದ ವ್ಯಾಪಾರಗಳನ್ನು ಕವಿಯ ದೃಷ್ಟಿಯಿಂದ ನೋಡ ಬಹುದು, ಸಹೃದಯನ ದೃಷ್ಟಿಯಿಂದಲೂ ನೋಡಬಹುದು. ಕವಿಯ ದೃಷ್ಟಿಯಿಂದ ನೋಡಿದರೆ ಮೊದಲನೆಯದಾದ ಅಭಿಧಾವ್ಯಾಪಾರಕ್ಕೆ ಶಬ್ದಾರ್ಥಾಲಂಕಾರಗಳೇ ಲಕ್ಷ್ಯ. ಎರಡನೆಯದಾದ ಭಾವಕತ್ವವ್ಯಾಪಾರಕ್ಕೆ ಶೃಂಗಾರಾದಿ ರಸಗಳೆಲ್ಲ ಲಕ್ಷ್ಯ. ಮೂರನೆಯದಾದ ಭೋಗೀಕೃತಿಯು ಮಾತ್ರ ಕೇವಲ ಸಹೃದಯನಿಗೆ ಅನ್ವಯಿಸತಕ್ಕುದು; ಏಕೆಂದರೆ ಸಹೃದಯನ ದೃಷ್ಟಿಯಿಂದ ಮೊದಲನೆಯ ಅಭಿಧಾವ್ಯಾಪಾರವು ಬುದ್ಧಿಗಮ್ಯವಾದ (*Intellectual*) ಅಂಶ. ಎರಡನೆಯ ಭಾವಕತ್ವವು ಭಾವನಾಗಮ್ಯವಾದ (*Imaginative*) ಅಂಶ. ಮೂರನೆಯ ಭೋಗೀಕೃತಿಯು ಚರ್ವಣೈಕರೂಪವಾದ (*Aesthetic*) ಅಂಶ.

ಹೋಲಿಸಿ—ಅಭಿಧಾ ಭಾವನಾ ಚಾನ್ಯಾ ತದ್ಭೋಗೀಕೃತಿರೇವ ಚ ।
ಅಭಿಧಾಧಾಮತಾಂ ಯಾತೇ ಶಬ್ದಾರ್ಥಾಲಂಕೃತೀ ತತಃ ॥
ಭಾವನಾಭಾವ್ಯ ಏಷೋಽಪಿ ಶೃಂಗಾರಾದಿಗಣೋ ಮತಃ ।
ತದ್ಭೋಗೀಕೃತಿರೂಪೇಣ ವ್ಯಾಪ್ಯತೇ ಸಿದ್ಧಿಮಾನ್ನರಃ ॥
—ಭಟ್ಟನಾಯಕ (ಅಲಂಕಾರಸರ್ವಸ್ವ ಟೀಕೆಯಲ್ಲಿ ಉದಾಹೃತ).

ಈಗ ಅಭಿನವಗುಪ್ತರ ವಿವರಣೆಯನ್ನು ನೋಡಿದರೆ ಅವರೂ ಕಾವ್ಯದಲ್ಲಿ ವಿಭಾವಾದಿಗಳ ಸಾಧಾರಣೀಕರಣವನ್ನು ಸ್ಪಷ್ಟವಾಗಿ ಒಪ್ಪಿರುವುದನ್ನು ಕಾಣಬಹುದು. ಸೀತಾದಿಗಳೆಂಬ ಕಲ್ಪನೆ ತಪ್ಪಿ ಕಾಮಿನೀತ್ವಾದಿ ಸಾಧಾರಣ್ಯಗ್ರಹಣವಾದಲ್ಲದೆ ಅವುಗಳು 'ವಿಭಾವ'ಗಳೆಂದೇ ಎನಿಸುವುದಿಲ್ಲ. ಹಾಗೆಯೇ ವಾಸನಾಸಿದ್ಧವಾದ ರತ್ಯಾದಿಗಳಾದರೂ ಸ್ವ-ಪರವೆಂಬ ವಿಶೇಷಗಳನ್ನು ಬಿಟ್ಟು ಸಾಧಾರಣೀಕೃತವಾದಾಗ ಮಾತ್ರ ರಸತ್ವವನ್ನು ಪಡೆಯುವುವೆಂಬುದು ಅಭಿನವಗುಪ್ತರ ಸಿದ್ಧಾಂತ (ಹೋಲಿಸಿ—"ಸೀತಾದೀನಾಂ ಸಾಧಾರಣ್ಯಗ್ರಹಂ ವಿನಾ ನ ಕದಾಚಿದಪಿ ವಿಭಾವಾದಿತ್ವಮ್. ತಥಾ ರತ್ಯಾದಿಭಾವಸ್ಯಾಪಿ ಸಾಧಾರಣ್ಯಗ್ರಹಂ ವಿನಾ ರತ್ಯುದ್ಬೋಧಸ್ಯ ಸ್ವಪ್ನೇಽಪಿ ನ ರಸತ್ವಮಿತಿ ಚ ನ ವಿಸ್ಮರ್ತವ್ಯಮ್"—ಸುಧಾಸಾಗರ). ಹೀಗೆ ಸಾಧಾರಣೀಕರಣ ತತ್ತ್ವವು ಭಟ್ಟನಾಯಕ ನಷ್ಟೇ ಅಭಿನವಗುಪ್ತನಿಗೂ ಸಮ್ಮತ.

[38] ಆದರೆ ಕಾವ್ಯದಲ್ಲಿ ಶಾಸ್ತ್ರವಿಲಕ್ಷಣವಾದ ಒಂದೇ ವ್ಯಾಪಾರವನ್ನೊಪ್ಪಬೇಕೇ? ಒಂದ ಕ್ಕಿಂತ ಹೆಚ್ಚು ವ್ಯಾಪಾರಗಳನ್ನು ಕಲ್ಪಿಸಬೇಕೆ? ಎಂಬಂಶದಲ್ಲಿ ಮಾತ್ರ ಮತಭೇದವಿದೆ. ಭಟ್ಟನಾಯಕನು ಸಾಧಾರಣೀಕರಣಕ್ಕಾಗಿ ಭಾವಕತ್ವ ವ್ಯಾಪಾರವನ್ನೂ ಆನಂದದ ವಿವರಣೆ ಗಾಗಿ ಭೋಜಕತ್ವವ್ಯಾಪಾರವನ್ನೂ ಅಗತ್ಯವೆಂದಿದ್ದನು. ಕಲ್ಪನಾಲಾಘವದ ದೃಷ್ಟಿಯಿಂದ ಅಭಿನವಗುಪ್ತನು ಒಂದೇ ವ್ಯಾಪಾರಕ್ಕೆ ಈ ಎರಡು ಗುಣಗಳನ್ನೂ ಆರೋಪಿಸಿ "ಅಭಿವ್ಯಕ್ತಿ" ಯೆಂಬ ಒಂದೇ ವ್ಯಾಪಾರವನ್ನೊಪ್ಪಿದರೆ ಸಾಕೆನ್ನುತ್ತಾನೆ. ಭಾವಕತ್ವ ಭೋಜಕತ್ವಗಳೆರಡನ್ನೂ ತನ್ನಲ್ಲಿ ಐಕ್ಯವಾಗಿಸಿಕೊಳ್ಳುವ ವ್ಯಾಪಾರವೇ ಅಭಿನವಗುಪ್ತನ 'ಅಭಿವ್ಯಕ್ತಿ'. ಭಟ್ಟನಾಯಕನು

ಇರತಕ್ಕದ್ದೇ ಆದರೂ (ವಿಭಾವಾದಿ) ಸಾಧನಗಳ ಸಾಧಾರಣ್ಯದ ಬಲದಿಂದ ತಾತ್ಕಾಲಿಕವಾಗಿ ರಸಿಕರ ಪರಿಮಿತ ಪ್ರತ್ಯೇಕತೆಯನ್ನೆಲ್ಲ ಕಳೆದುಬಿಡುವುದರಿಂದ, ಜ್ಞೇಯಾಂತರದ ಸ್ಪರ್ಶಲೇಶವೂ ಇಲ್ಲದ ಅಪರಿಮಿತ ಸ್ವರೂಪದಿಂದ ಮಾತ್ರ ಸಕಲರಲ್ಲಿಯೂ ಹೃದಯಸಂವಾದವನ್ನು ಪಡೆಯಬಲ್ಲ ರಸಿಕನಿಗೆ ಸಾಧಾರಣತಯಾ ವೇದ್ಯವಾಗುತ್ತದೆ.[39] ಅಭಿನ್ನವಾಗಿದ್ದರೂ ಹೀಗೆ ಇದರ ಪ್ರತೀತಿ ಬರುವುದಕ್ಕೆ ತನ್ನ ಆಕೃತಿಯನ್ನು

---

ಆಗಲೇ ಖಂಡಿಸಿರುವ ಅರ್ಥದ ಅಭಿವ್ಯಕ್ತಿಯಲ್ಲ. ಹೀಗೆ ಭಟ್ಟನಾಯಕನ ವಿವರಣೆಗೂ ಅಭಿನವಗುಪ್ತನ ವಿವರಣೆಗೂ ಶಬ್ದಭೇದವಿದೆಯೇ ಹೊರತು ಪ್ರಕ್ರಿಯಾಭೇದವಿಲ್ಲ. ಭರತನ ನಾಟ್ಯಶಾಸ್ತ್ರದಲ್ಲೇ ಬರುವ—

"ಕವೇರಂತರ್ಗತಂ ಭಾವಂ ಭಾವಯನ್ ಭಾವ ಉಚ್ಯತೇ"—VII, ೨

"ಭಾವಯನ್ತಿ ರಸಾನ್ ಯಸ್ಮಾತ್ ತಸ್ಮಾದ್ಭಾವಾಃ ಪ್ರಕೀರ್ತಿತಾಃ"—VII, ೩

"ಯೋಽರ್ಥೋ ಹೃದಯಸಂವಾದೀ (=ಸಹೃದಯ?) ತಸ್ಯ ಭಾವೋ ರಸೋದ್ಭವಃ |
ಶರೀರಂ ವ್ಯಾಪ್ಯತೇ ತೇನ ಶುಷ್ಕಂ ಕಾಷ್ಠಮಿವಾಗ್ನಿನಾ ||"—VII, ೭

ಮುಂತಾದ ಪ್ರಯೋಗಗಳು 'ಭಾವಕತ್ವ'ವೆಂಬ ಶಬ್ದಕ್ಕೆ ಆಧಾರವನ್ನೊದಗಿಸುವಂತೆ ಅಲ್ಲಿಯೇ ಬರುವ "ರಸಾಭಿವ್ಯಕ್ತಿಹೇತವಃ . . . ಭಾವಾಃ" ಮುಂತಾದ ಇತರ ಪ್ರಯೋಗಗಳೂ ಆನಂದವರ್ಧನನ ಸಿದ್ಧಾಂತವೂ ಅಭಿನವಗುಪ್ತನ 'ಅಭಿವ್ಯಕ್ತಿ'ಯೆಂಬ ಸಂಜ್ಞೆಗೆ ಪುಷ್ಟಿಯನ್ನೊದಗಿಸುತ್ತವೆ.

[39] ಇಲ್ಲಿ ಸಾಧಾರಣೀಕೃತವಾಗಿಯೇ ಸ್ಥಾಯಿಭಾವವು ಅಭಿವ್ಯಕ್ತವಾಗುವುದರಿಂದ ರಸವಾಗಿ ಪರಿಣಮಿಸುವುದೆಂದು ಹೇಳುತ್ತಿದ್ದಾನೆ. ಇಲ್ಲಿ ಅವಧಾರಣೆ (Emphasis) ಯಿರುವುದು ಸಾಧಾರಣೀಕರಣದ ಮೇಲೆಯೇ ಹೊರತು ಸಾಧಾರಣೀಕೃತವಾಗುವ ಸ್ಥಾಯಿಭಾವವು ಸಹೃದಯರದ್ದೇ ಎಂಬಂಶದ ಮೇಲಲ್ಲ. ಹೀಗೆ ಅವಧಾರಣೆಯನ್ನು ಪಲ್ಲಟಿಸಿದರೆ ಭಟ್ಟನಾಯಕನಿಗೂ ಅಭಿನವಗುಪ್ತನಿಗೂ ಇಲ್ಲದ ಮತಭೇದವನ್ನು ಉಪಪಾದಿಸಬಹುದು. ಸತ್ತ್ವೋದ್ರೇಕಪ್ರಕಾಶದ ಆನಂದಮಯ ಸಂವಿದ್ವಿಶ್ರಾಂತಿಯೇ ರಸವೆನ್ನುವ ಭಟ್ಟನಾಯಕನಿಗೆ, ಸಾಧಾರಣೀಕೃತ ವಿಭಾವಾದಿಗಳಿಂದ ಭಾವಿತವಾದ ಸಾಧಾರಣೀಕೃತ ರತ್ಯಾದಿಯೇ ಆ ರಸವೆಂದೂ ತಿಳಿದಿರುವ ಭಟ್ಟನಾಯಕನಿಗೆ, ಸಾಮಾಜಿಕರಿಂದ ಭುಜ್ಯಮಾನವಾದ ಅಂಶವು ವಾಸನಾಸಿದ್ಧವಾದ ಸ್ವಚೈತನ್ಯಾಂಶವೇ ಎಂಬುದು ತಿಳಿದಿರಲಿಲ್ಲವೆನ್ನುವುದು ಸಾಹಸವಾಗುತ್ತದೆ. ಅಭಿನವಗುಪ್ತನು ಭಟ್ಟನಾಯಕನ ತತ್ತ್ವವನ್ನೇ ಮತ್ತಷ್ಟು ವಿವರಿಸಿದನೆಂದು ಬೇಕಾದರೆ ಹೇಳಬಹುದು.

ಮಾಣಿಕ್ಯಚಂದ್ರನು ಅಭಿನವಗುಪ್ತರ ಮಾತುಗಳನ್ನು ಮಾರ್ಮಿಕವಾಗಿ ವಿವರಿಸಿದ್ದಾನೆ— 'ರತಿಯು ಸಾಮಾಜಿಕನಿಗೆ ಸ್ವಗತವೆಂದು ಪ್ರತೀತವಾದರೆ ಕಾಮಿತ್ವವೆಂಬ ದೋಷ ಬರುತ್ತದೆ (ಹಿಂದೆ ೩೪ನೆಯ ಅಡಿಟಿಪ್ಪಣಿಯನ್ನು ನೋಡಿ). ಪರಗತವೆನಿಸಿದರೆ ದ್ವೇಷಾದಿಗಳು ಅಥವಾ ಔದಾಸೀನ್ಯ ಬರುವ ಪ್ರಸಂಗ. ಸರ್ವಸಾಧಾರಣವೆನಿಸಿದರೆ ಔದಾಸೀನ್ಯಕ್ಕೆಡೆಯೇ ಹೊರತು ಆನಂದಕ್ಕಲ್ಲ. ಆನಂದಕ್ಕೆಡೆಯುಂಟೆಂದರೂ ಒಬ್ಬನಲ್ಲಿ ಮಾತ್ರ ಇರುವುದೆನ್ನುವಾಗ ಕಾಮಿತ್ವ ಪ್ರಸಂಗ ತಪ್ಪುವುದಿಲ್ಲ. ಆದ್ದರಿಂದ ಯಾವೊಬ್ಬನಲ್ಲಿ ಮಾತ್ರವೂ ಇದೆಯೆನಿಸದೆ ಅನಿಯತನಿಷ್ಠವಾದ ರತ್ಯಾದಿ ಸ್ಥಾಯಿಭಾವಗಳು ಮಾತ್ರ ಸರ್ವರಸಿಕರಿಂದಲೂ ರಸ್ಯಮಾನವಾಗುತ್ತವೆ. ಪ್ರತಿಯೊಬ್ಬ

ರಸಿಕನಿಗೂ ನಾಟಕಶಾಲೆಯಲ್ಲಿ 'ನಾನು ಬೇರೆ'ಯೆಂಬ ಪ್ರತ್ಯೇಕಭಾವನೆಯೇ ಸಡಿಲಿಹೋಗುತ್ತದೆ. ನನಗೊಬ್ಬನಿಗಾಗಿ ಈ ನಾಟಕವೆಲ್ಲ ನಡೆಯುತ್ತಿದೆ ಎಂಬ ಕಲ್ಪನೆ ದೂರವಾಗುತ್ತದೆ. ಎಲ್ಲರಿಗಾಗಿಯೂ ಇದು ಸಮಾನವಾಗಿರತಕ್ಕದೆಂಬ ಭಾವನೆಯೊಂದೇ ಬರುತ್ತದೆ. ಆ ಸಾಧಾರಣ್ಯಭಾವನೆಗೇ ಸಕಲ ಹೃದಯಸಂವಾದವೆಂದು ಹೆಸರು. ಇದನ್ನೇ ಅಪರಿಮಿತತ್ವದ ಭಾವವೆಂದೂ ಕರೆಯಲಾಗಿದೆ. ನಾಟಕ ಶಾಲೆಯಲ್ಲಿಯೂ 'ನಾನು', 'ನನ್ನದು' ಎಂಬ ಪರಿಮಿತಭಾವನೆಯುಳ್ಳವರು ಸಹೃದಯರಲ್ಲ; ಅವರು ಹೃದಯಸಂವಾದಭಾಗಿಗಳಲ್ಲದ ಅಹೃದಯರು. ಅಂಥವರಿಗೂ ಹೃದಯಸಂವಾದವುಂಟಾಗ ಬೇಕೆಂದು ಕವಿನಟಾದಿಗಳು ವಿಶೇಷ ಪ್ರಯತ್ನಮಾಡುತ್ತಾರೆ. ವಾದ್ಯ, ಗಾನ, ಮಂಡಪಾಲಂಕಾರ ಮುಂತಾದ ಸಾಧನಗಳೆಲ್ಲ ಎಲ್ಲರಿಗೂ ಇವು ಸಮಾನವೆಂದು ತಿಳಿಸುವುದಕ್ಕೇ ಇರತಕ್ಕವು. ಸೀತಾದಿ ಗಳನ್ನು ತಮ್ಮ ವೈಯಕ್ತಿಕದೃಷ್ಟಿಯಿಂದ ಕಾಣುವ ಅಹೃದಯರಿಗಾದರೂ ಇವನ್ನು ಸಾಧಾರಣ ದೃಷ್ಟಿಯಿಂದ ನೋಡುವ ಸಹಿಷ್ಣುತೆ ಇರುತ್ತದೆ. ಒಮ್ಮೆ ಕೆಲವಂಶಗಳಲ್ಲಿ ಹೃದಯಸಂವಾದ ಬಂದ ಮೇಲೆ ಮಿಕ್ಕಂಶಗಳಲ್ಲೂ ಹೃದಯಸಂವಾದ ಬಂದೀತೆಂದು ನಿರೀಕ್ಷಿಸಬಹುದು.

ಈ ತತ್ತ್ವವನ್ನು ಪರ್ಯಾಲೋಚಿಸದಿದ್ದರೆ 'ಭಟ್ಟನಾಯಕನು ರತ್ಯಾದಿಗಳನ್ನು ಸಾಮಾಜಿಕರಿಗೆ ಸ್ವಗತವೆಂದೊಪ್ಪಲಿಲ್ಲ; ಅಭಿನವಗುಪ್ತನು ಇದನ್ನು ಸಾಧಿಸಿದ್ದಾನೆ' ಎಂಬ ಅಪಸಿದ್ಧಾಂತಕ್ಕೆ ಆಸ್ಪದವಾಗುತ್ತದೆ. ಇಬ್ಬರಿಗೂ ತಾತ್ತ್ವಿಕವಾಗಿ ರತ್ಯಾದಿಗಳು ಸ್ವಗತವೇ ಆದಂತೆ ರಸಾಸ್ವಾದ ಕಾಲದಲ್ಲಿ ಸಾಧಾರಣ್ಯವು ವೇದ್ಯವೇ ಹೊರತು ಸ್ವಗತತ್ವವಲ್ಲವೆಂಬಂಶವಾದರೂ ಇಬ್ಬರಿಗೂ ಸಮಾನ. ರಸಾಸ್ವಾದವು ಅಂತರ್ಮುಖವಾಗಿದ್ದರೂ ರಸಿಕನಿಗೆ ಅದರ ಅರಿವಿರುವುದಿಲ್ಲ. ಹೋಲಿಸಿ—

ಪಾಠ್ಯಾದಥ ಧ್ರುವಾಗಾನಾತ್ ತತಃ ಸಂಪೂರಿತೇ ರಸೇ |
ತದಾಸ್ವಾದಭರೈಕಾಗ್ರೋ ಹೃಷ್ಯತ್ಯಂತರ್ಮುಖಃ ಕ್ಷಣಮ್ ||
ತತೋ ನಿರ್ವಿಷಯಸ್ಯಾಸ್ಯ ಸ್ವರೂಪಾವಸ್ಥಿತಾ ನಿಜಃ |
ವ್ಯಜ್ಯತೇ ಹ್ಲಾದನಿಷ್ಯನ್ದೋ ಯೇನ ತೃಪ್ಯನ್ತಿ ಯೋಗಿನಃ ||

ಬಾಹ್ಯ ಅಥವಾ ಆಂತರವಾದ ಜ್ಞಾನವಿಷಯಗಳೆಲ್ಲ ತಪ್ಪಿದೊಡನೆ ಒಳಗಿನಿಂದ ಆತ್ಮಾನಂದವು ಉಕ್ಕುತ್ತದೆ. ಇದೇ ರಸ. ಇದೇ ಯೋಗಿಗಳು ಆಸ್ವಾದಿಸುವ ಆನಂದವಾದರೂ. ಈ ನಿರ್ವಿಷಯೀ ಕರಣವು ರಸಾನಂದದಲ್ಲಿ ತಾತ್ಕಾಲಿಕ; ಯೋಗಾನಂದದಲ್ಲಿ ಶಾಶ್ವತ; ಒಂದು ಕಡೆ ರತ್ಯಾದಿವಾಸನೆ ಗಳು ಸಾಧಾರಣೀಕೃತವಾಗಿ ಅಪರಿಮಿತತ್ವವನ್ನು ಪಡೆದು ನಿಷ್ಕ್ರಿಯವಾಗುತ್ತವೆ; ಮತ್ತೊಂದು ಕಡೆ ಅವುಗಳು ಪ್ರಾಣಾಯಾಮಾದಿಗಳಿಂದ ಕ್ಷಯಿಸಿ ನಿಷ್ಕ್ರಿಯವಾಗುತ್ತವೆ. ಅವು ಸಕ್ರಿಯವಾಗಿರುವ ವರೆಗೆ ಲೋಕದಲ್ಲಿ ನಿಜವಾದ ಆನಂದ ಸಾಧ್ಯವಿಲ್ಲ.

ಅಭಿನವಗುಪ್ತರಿಗೆ ರಸತತ್ತ್ವದ ವಿಷಯದಲ್ಲಿ ಕಾಳಿದಾಸನ—

ರಮ್ಯಾಣಿ ವೀಕ್ಷ್ಯ ಮಧುರಾಂಶ್ಚ ನಿಶಮ್ಯ ಶಬ್ದಾನ್
ಪರ್ಯುತ್ಸುಕೀ ಭವತಿ ಯತ್ ಸುಖಿತೋಽಪಿ ಜಂತುಃ |
ತಚ್ಚೇತಸಾ ಸ್ಮರತಿ ನೂನಮಬೋಧಪೂರ್ವಂ
ಭಾವಸ್ಥಿರಾಣಿ ಜನನಾಂತರಸೌಹೃದಾನಿ ||

ಎಂಬ ಶ್ಲೋಕದಿಂದ ಪ್ರಚೋದನೆ ಬಂದಂತೆ ತೋರುತ್ತದೆ. ರಮಣೀಯ ವಸ್ತುಗಳ ದರ್ಶನದಿಂದಲೂ ಮಧುರ ಶಬ್ದಗಳ ಶ್ರವಣದಿಂದಲೂ ಮನಸ್ಸಿನ ಮೇಲೆ ತಟ್ಟನೆ ಪರಿಣಾಮವಾಗುತ್ತದೆ; ಮನಸ್ಸಿನ

ತಾನೇ ತಿಳಿಯುವ ಅನುಭವವನ್ನು ನಿದರ್ಶನವಾಗಿ ಕೊಡಬಹುದು.[40] ಹೀಗೆ ಆಸ್ವಾದವೇ ಪ್ರಾಣರೂಪವಾಗಿರುವ,[41] ವಿಭಾವಾದಿಗಳು ಜೀವಂತವಾಗಿರುವ ವರೆಗೆ ಮಾತ್ರ ಜೀವಂತವಾಗಿರುವ,[42] ಪಾನಕದ ರುಚಿಯಂತೆ ಅಖಂಡಾಸ್ವಾದವನ್ನು

---

ಆಳದ ಪದರಗಳಲ್ಲಡಗಿದ್ದ ಸ್ಥಾಯಿಭಾವಗಳು ಮೇಲೆ ತೇಲಿಬರುತ್ತವೆ. ತೇಲಿದೊಡನೆ ಮನಸ್ಸಿಗೆ ಒಂದು ಬಗೆಯ ತಳಮಳವುಂಟಾದಂತಾಗುತ್ತದೆ, ಅದನ್ನು ವೈಯಕ್ತಿಕ ದೃಷ್ಟಿಯಿಂದ ನೋಡಿದಾಗ. ಅದರ ವೈಯಕ್ತಿಕ ಸಂಬಂಧವನ್ನೇ ಮರೆತುಬಿಡುವುದಾದರೆ ಅದೇ ಸ್ಥಾಯಿಭಾವಗಳು ಅಖಂಡಾನಂದವನ್ನು ತರುತ್ತವೆ. ಈ ಅನುಭವದ ಹೆಚ್ಚಿನ ವಿವರಣೆಗೆ ಪ್ರೊ. ನಂ. ಶಿವರಾಮಶಾಸ್ತ್ರಿಗಳ *Aesthetic Experience*, (*The Philosophical Quarterly*, July, 1941) ಎಂಬ ಲೇಖನ ವನ್ನು ನೋಡಿ.

40 ಒಬ್ಬನು ತನಗಿಂತ ಬೇರೆಯಾದ ವಿಷಯದ ಪ್ರತೀತಿಯನ್ನು ಪಡೆಯಬಹುದು. ಆದರೆ ರತ್ಯಾದಿಯು ಆತ್ಮಾಭಿನ್ನವಾಗಿರುವಾಗ ಬಾಹ್ಯವಸ್ತುವಿನಂತೆ ಅದು ಪ್ರತೀತಿಗೆ ವಿಷಯವಾಗುವು ದೆಂತು ? ಎಂದು ಕೇಳಬಹುದು. ಅದಕ್ಕೊಂದು ದೃಷ್ಟಾಂತ (Analogy)ದ ಮೂಲಕ ಇಲ್ಲಿ ಉತ್ತರ ಕೊಡಲಾಗಿದೆ. 'ತಾನು' ಎಂದರೆ ತನ್ನ ಆಕಾರವೂ ಅದರಲ್ಲಿಯೇ ಸೇರಿರುತ್ತದಲ್ಲವೇ ? ಆದರೂ ತಾನು ತನ್ನ ಆಕಾರವನ್ನು ಅರಿಯುವನೆಂಬ ವ್ಯವಹಾರವು ರೂಢಿಯಲ್ಲಿರುವಂತೆ ರಸ ಪ್ರತೀತಿಗೂ ಉಪಪತ್ತಿ ಹೇಳಬಹುದು. ಅಥವಾ ಆತ್ಮಸ್ವರೂಪವನ್ನು ಆತ್ಮವೇ ಗ್ರಹಿಸುವಂತೆ ಎಂದು ವೇದಾಂತರೀತ್ಯಾ ಈ ವಾಕ್ಯಕ್ಕೆ ಅರ್ಥವಾಗಬಹುದು. (ಹೋಲಿಸಿ—"ಆತ್ಮಾನಮಾತ್ಮ ನ್ಯವಲೋಕಯಂತಮ್"—ಕಾಳಿದಾಸ) ಅಥವಾ ಬೌದ್ಧದರ್ಶನದ ಯೋಗಾಚಾರ ಪ್ರಕ್ರಿಯೆ ಯಂತೆ "ತಾನೇ" ಎಂದರೆ ಜ್ಞಾನವು 'ತನ್ನ ಆಕೃತಿಯನ್ನೇ' ಎಂದರೆ ವಿಷಯರೂಪದಲ್ಲಿ ಪರಿಣತವಾದ ತನ್ನ ಆಕಾರವನ್ನೇ ವಿಷಯೀಕರಿಸುವಂತೆ ಎಂದು ಅರ್ಥಮಾಡಬಹುದು. ಏಕೆಂದರೆ ಆ ಬೌದ್ಧದರ್ಶನದಲ್ಲಿ ಜ್ಞಾನಬಾಹ್ಯವಾದ ವಸ್ತುಗಳೊಂದೂ ಸತ್ಯವಲ್ಲ. ಜ್ಞಾನದ ರೂಪವಿಶೇಷ ಗಳನ್ನೇ ವಸ್ತುಗಳೆಂದು ಭ್ರಮಿಸುತ್ತೇವೆ. ಜ್ಞಾನವು ಸ್ವಪ್ರಕಾಶವೆನ್ನುವವರು ವಸ್ತುವಿನ ಜ್ಞಾನದಂತೆ, ಆ ಜ್ಞಾನದ ಪರಿಜ್ಞಾನವೂ ಕೂಡ ಅದೇ ಜ್ಞಾನದಿಂದಲೇ ಬರುತ್ತದೆನ್ನುತ್ತಾರೆ. ಆ ಪ್ರಕ್ರಿಯೆ ಯನ್ನು ಬೇಕಾದರೂ ಇಲ್ಲಿಗೆ ಅನ್ವಯಿಸಬಹುದು. ಯಾವುದೇ ಅರ್ಥದಲ್ಲಿ ದೃಷ್ಟಾಂತವನ್ನು ಅನ್ವಯಿಸಿಕೊಂಡರೂ ಆತ್ಮರೂಪವಾದ ರಸದ ಪ್ರತೀತಿಯೂ ಅದರಂತೆಯೇ ಉಪಪನ್ನವೆಂದು ಯೋಚಿಸಿಕೊಳ್ಳಬೇಕು.

41 ಹೀಗೆ ರಸದ ಪ್ರತೀತಿ ಬೇರೆಯಲ್ಲ; ಅದರ ಆಸ್ವಾದ ಬೇರೆಯಲ್ಲ. ರಸದ ಪ್ರತೀತಿಯೇ ಅದರ ಆಸ್ವಾದ ಅಥವಾ ಚರ್ವಣೆ ಮತ್ತು ರಸದ ಚರ್ವಣೆಯೇ ಅದರ ಪ್ರತೀತಿ. ರಸದ ಚರ್ವಣೆ ತಪ್ಪಿದೊಡನೆ ರಸಪ್ರತೀತಿಯೂ ತಪ್ಪುತ್ತದೆ. ಈ ಹೊಸ ನಿರೂಪಣೆಯಿಂದ ಭಟ್ಟನಾಯಕನ ಎರಡು ವ್ಯಾಪಾರಗಳ ಬದಲು ಒಂದೇ ವ್ಯಾಪಾರವನ್ನು ಅಭಿನವಗುಪ್ತನು ಆಶ್ರಯಿಸುವುದಕ್ಕೆ ಸಾರ್ಥಕ್ಯ ಉಂಟಾಗುತ್ತದೆ.

42 ರಸಾಸ್ವಾದವು ತಾತ್ಕಾಲಿಕ; ಬ್ರಹ್ಮಾನಂದದಂತೆ ನಿತ್ಯವಲ್ಲ. ಎಲ್ಲಿಯ ವರೆಗೆ ವಿಭಾವಾದಿ ಗಳು ಇರುವವೋ ಅಲ್ಲಿಯ ವರೆಗೆ ಮಾತ್ರ ರಸಾಸ್ವಾದ ಉಳಿಯುತ್ತದೆ.

ನೀಡುವ,[43] ಅಲೌಕಿಕ ಚಮತ್ಕಾರದ[44] ಕಾರಣವೇ ಶೃಂಗಾರಾದಿ ರಸ. ಎದುರುಗಡೆ ಮಿಂಚುವಂತೆಯೂ ಹೃದಯವನ್ನೇ ತುಂಬುವಂತೆಯೂ, ಅಂಗಾಂಗಗಳನ್ನೆಲ್ಲ ಆಲಿಂಗಿಸುವಂತೆಯೂ, ಮತ್ತೆಲ್ಲವನ್ನೂ ಮರೆಸುವಂತೆಯೂ, ಬ್ರಹ್ಮಾನಂದದ ಸವಿಯನ್ನೇ ಸೂಸುವಂತೆಯೂ ಇರುತ್ತದೆ ಈ ಅಲೌಕಿಕ ಚಮತ್ಕಾರ.[45]

ರಸವು ಇತರ 'ಕಾರ್ಯ'ಗಳಂತೆ ಕಾರ್ಯವಲ್ಲ; ಹಾಗಿದ್ದರೆ ಕಾರಣಗಳಾದ ವಿಭಾವಾದಿಗಳು ನಾಶವಾದಮೇಲೆಯೂ ರಸವು ಉಳಿಯಬೇಕಾಗಿತ್ತು.[46] ಅಥವಾ ಇತರ ಸಿದ್ಧವಸ್ತುಗಳಂತೆ ಅದು ಜ್ಞಾಪ್ಯವೂ ಅಲ್ಲ; ಏಕೆಂದರೆ ಅದು ಪ್ರತೀತಿಗೆ ಮೊದಲು ಸಿದ್ಧವೇ ಅಲ್ಲ.[47] (ಹಾಗಾದರೆ ಮತ್ತೇನೆನ್ನಬಹುದು) ಅದು ವಿಭಾವಾದಿ

---

[43] ವಿಭಾವಾದಿಗಳೇ ಬೇರೆಯಾಗಿಯೂ ರತ್ಯಾದಿಯೇ ಬೇರೆಯಾಗಿಯೂ ಪ್ರತೀತವಾಗುವುವೆಂದು ಅರ್ಥಮಾಡಿಕೊಳ್ಳಲಾಗದು ಸಾಧಾರಣೀಕೃತವಾದ ವಿಭಾವಾದಿಗಳು ಮತ್ತು ರತ್ಯಾದಿಗಳು ಕೂಡಿಯೇ ಅಖಂಡವಾಗಿ ಪ್ರತೀತ ಅಥವಾ ಆಸ್ವಾದ್ಯವಾಗುತ್ತವೆ. ಇದಕ್ಕೆ ದೃಷ್ಟಾಂತವೇ ಪಾನಕದ ರುಚಿ. ಬೆಲ್ಲ, ಬೇಲದಹಣ್ಣು, ಮೆಣಸು ಮುಂತಾದ ಅನೇಕ ವಸ್ತುಗಳನ್ನು ಕೂಡಿಸಿ ಮಾಡುವ ಪಾನಕದಲ್ಲಿ ಸಿಹಿ, ಹುಳಿ, ಖಾರಗಳು ಬೇರೆಬೇರೆಯಾಗಿ ಕುಡಿಯುವವನಿಗೆ ಕಾಣುವುದಿಲ್ಲ; ಒಂದೆ ಅಖಂಡವಾದ ರುಚಿಯಿರುತ್ತದೆ, ಹಾಗೆಯೇ ರಸದ ಆಸ್ವಾದ್ಯತೆಯಾದರೂ.

[44] ವ್ಯವಹಾರಪ್ರಪಂಚದಲ್ಲಿಲ್ಲದ. ಕಾವ್ಯಪ್ರಪಂಚಮಾತ್ರನಿಯತವಾದ ಚಮತ್ಕಾರವೆಂದರ್ಥ. ವ್ಯವಹಾರಪ್ರಪಂಚದಲ್ಲಿ ಅನುಮಾನಗಮ್ಯವಾದ ಸ್ಥಾಯಿಭಾವವೇ ಬೇರೆ; ಕಾವ್ಯಪ್ರಪಂಚದಲ್ಲಿ ಚರ್ವಣಾಮಾತ್ರಗಮ್ಯವಾದ ಸ್ಥಾಯಿಭಾವವೇ ಬೇರೆ. ಆದ್ದರಿಂದಲೇ ಕಾವ್ಯದಲ್ಲಿ ಮಾತ್ರ ಚಮತ್ಕಾರವುಂಟು, ಲೋಕದಲ್ಲಿಲ್ಲ. ಲೋಕದಲ್ಲಿ ವಿಭಾವಾದಿಗಳಿಗೆ ಸಾಧಾರಣೀಕರಣವಿಲ್ಲ; ಗ್ರಾಹಕನಿಗೂ ಅವಕ್ಕೂ ವೈಯಕ್ತಿಕ ಸಂಬಂಧಗಳಿರುತ್ತವೆ; ಕಾವ್ಯದಲ್ಲಿಯಾದರೋ ಇಂತಹ ಸಂಬಂಧಗಳಿರುವುದಿಲ್ಲ; ಸಾಧಾರಣೀಕರಣವಿರುತ್ತದೆ.

[45] ಅಭಿನವಗುಪ್ತನ ಶೈಲಿಯೂ ಈ ಚಮತ್ಕಾರದ ವರ್ಣನೆ ಮಾಡುವಾಗ ಅಲಂಕಾರಮಯವಾಗುತ್ತದೆ. ರಸದ ಚಮತ್ಕಾರದ ಅಲೌಕಿಕತ್ವವನ್ನು, ಆಸ್ವಾದದ ಪರಿಯನ್ನು, ಬಗೆಬಗೆಯ ಉತ್ಪ್ರೇಕ್ಷೆಗಳಿಂದ ಹೀಗೆ ಬಣ್ಣಿಸುತ್ತಾನೆ. ಬ್ರಹ್ಮಾನಂದದ ಸಾದೃಶ್ಯವನ್ನು ಕೊಡುವುದರಲ್ಲಿ ಭಟ್ಟನಾಯಕನ ಪ್ರಭಾವಮುದ್ರೆಯನ್ನು ನೋಡಬಹುದು.

[46] ಲೋಕದಲ್ಲಿ ಮಡಕೆಯೆಂಬ ಕಾರ್ಯ (= *Effect*)ಕ್ಕೆ ಕುಂಬಾರನ ಕೋಲು ನಿಮಿತ್ತ ಕಾರಣ. ಕುಂಬಾರನು ಸತ್ತು, ಅವನ ಕೋಲು ಮುರಿದರೂ ಅವನು ಮಾಡಿದ ಮಡಕೆ ಮಾತ್ರ ಉಳಿದೇ ಇರಬಹುದು. ಹಾಗೆಯೇ ರಸವನ್ನು ಕಾರ್ಯವೆನ್ನುವುದಾದರೆ ಅದರ ನಿಮಿತ್ತ ಕಾರಣವಾದ ವಿಭಾವಾದಿಗಳು ನಾಶವಾದಮೇಲೂ ರಸವುಳಿಯಬೇಕೆಂದು ಹೇಳಿದಂತಾಗುತ್ತದೆ, ವಸ್ತುಸ್ಥಿತಿ ಹಾಗಿಲ್ಲ.

[47] ಸಿದ್ಧವಾದ ಮಡಕೆ ಕತ್ತಲಲ್ಲಿದ್ದರೆ ಅದು ಕಾಣುವಂತೆ ಮಾಡಲು ದೀಪ ಬೇಕಾಗುತ್ತದೆ. ದೀಪಕ್ಕೆ 'ಜ್ಞಾಪಕ'ವೆಂದೂ ಮಡಕೆಗೆ 'ಜ್ಞಾಪ್ಯ'ವೆಂದೂ ತಾರ್ಕಿಕರು ಹೇಳುತ್ತಾರೆ. ಮಡಕೆ

ಗಳಿಂದ ಅಭಿವ್ಯಂಜಿತವೂ ಆಸ್ವಾದ್ಯಮಾನವೂ ಆದುದು ಮಾತ್ರ.[48] ಕಾರಕ, ಜ್ಞಾಪಕ, ಈ ಎರಡಕ್ಕಿಂತಲೂ ಬೇರೆಯಾದುದನ್ನು ಎಲ್ಲಾದರೂ ಕಂಡಿದ್ದುಂಟೆ ಎನ್ನಬಹುದು. ನಿಜ, ಎಲ್ಲೂ ಕಂಡಿದ್ದಿಲ್ಲ ಎಂಬುದು ರಸದ ಅಲೌಕಿಕತ್ವದ ಸಿದ್ಧಿಗೆ ಭೂಷಣವೇ ಹೊರತು ದೂಷಣವಲ್ಲ.[49] ರಸದ ಆಸ್ವಾದಕ್ಕೆ ಉತ್ಪತ್ತಿಯಿರುವುದನ್ನೇ ರಸಕ್ಕೂ ಆರೋಪಿಸಿದರೆ ಅದನ್ನು 'ಕಾರ್ಯ'ವೆಂದು ಬೇಕಾದರೂ ಹೇಳಿಕೊಳ್ಳಿರಿ.[50] ಹಾಗೆಯೇ ಲೌಕಿಕಪ್ರತ್ಯಕ್ಷ ಮುಂತಾದ ಪ್ರಮಾಣಗಳಿಗಿಂತಲೂ, ತಟಸ್ಥ ಸಂವೇದನವುಳ್ಳ ಪರಿಮಿತ ಯೋಗಿಗಳ ಜ್ಞಾನಕ್ಕಿಂತಲೂ, ಜ್ಞೇಯಾಂತರ ಸಂಸ್ಪರ್ಶಶೂನ್ಯತ್ವ, ಮತ್ತು ಸ್ವಾತ್ಮ ಮಾತ್ರ ವಿಶ್ರಾಂತಿಗಳುಳ್ಳ ಮಹಾಯೋಗಿಗಳ ಸಂವೇದನಕ್ಕಿಂತಲೂ, ವಿಲಕ್ಷಣ ವಾಗಿರುವುದಲ್ಲದೆ ಲೋಕೋತ್ತರತ್ವ ಮುಂತಾದ ಗುಣಗಳನ್ನೊಳಗೊಳ್ಳುವ ಸ್ವಾನು ಭವಕ್ಕೆ ವಿಷಯವಾಗಿರುವುದರಿಂದ ಅದನ್ನು 'ಜ್ಞೇಯ'ವೆಂದು ಬೇಕಾದರೂ ಹೇಳಿರಿ.[51] ಆದರೆ ಅದರ ಸಾಕ್ಷಾತ್ಕಾರಕ್ಕೆ ಬೇಕಾಗುವ ಪ್ರಮಾಣವು 'ನಿರ್ವಿ

ಹುಟ್ಟುವ ಮೊದಲು ಹೇಗೆ ಜ್ಞಾಪ್ಯವಲ್ಲವೋ ಹಾಗೆಯೇ ವಿಭಾವಾದಿಗಳಿರುವಾಗ ರಸವು ಹುಟ್ಟಿ ಮುಗಿಯದೆ ಇನ್ನೂ ಹುಟ್ಟುತ್ತಲೇ ಇರುವುದರಿಂದ ಅವುಗಳಿಗೆ ಜ್ಞಾಪ್ಯವೆನಿಸಲಾರದು.

48 ಹೀಗೆ ಲೋಕವಿಲಕ್ಷಣವಾಗಿರುವುದೇ ಕಾವ್ಯದ ಮಹತ್ವ; ಲೋಕದ ತರ್ಕನಿಯಮಗಳಿಗೆ ಕಾವ್ಯರಹಸ್ಯವು ನಿಲುಕುವುದಿಲ್ಲ. ಆ ವೈಶಿಷ್ಟ್ಯವನ್ನು ತೋರಿಸುವುದಕ್ಕಾಗಿ ಕಾವ್ಯದಲ್ಲಿ ಮಾತ್ರ "ಅಭಿವ್ಯಕ್ತಿ" ಅಥವಾ ವ್ಯಂಜನಾವ್ಯಾಪಾರವನ್ನೊಪ್ಪಬೇಕು. ಇಲ್ಲಿ ಅಭಿವ್ಯಕ್ತಿಯೆಂದರೆ ಸುಮ್ಮನೆ ಪ್ರಕಟಗೊಳಿಸುವುದಲ್ಲ; ಆನಂದವನ್ನು ತರಿಸುವುದು ಕೂಡ.

49 ಕಾವ್ಯಕಲೆಯ ತತ್ತ್ವವು ಲೋಕರೀತಿಗೆ ವಿರುದ್ಧವಾಗಿರುವುದೇ ಅದರ ಮೇಲ್ಮೆ; ಲೋಕ ರೀತಿಗೆ ಅನುಗುಣವಾಗಿಯೇ ಇದ್ದಿದ್ದರೆ ಕಾವ್ಯದಲ್ಲಿಯೂ ಲೌಕಿಕ ಸುಖದುಃಖಗಳು ಬರುತ್ತಿದ್ದುವೇ ಹೊರತು ಅಲೌಕಿಕ ರಸವು ಇಲ್ಲವಾಗುತ್ತಿದ್ದಿತು.

50 ರಸವು ಉತ್ಪನ್ನವಾಗುವುದೆಂಬ ರೂಢಿಗೆ ಉಪಪತ್ತಿ ಹೇಗೆನ್ನಬಹುದು. ಚರ್ವಣಾವಿಶಿಷ್ಟ ವಾದುದೇ ರಸವಾದ್ದರಿಂದ ಚರ್ವಣೆಯ ಉತ್ಪತ್ತಿಯನ್ನು ರಸಕ್ಕೂ ಆರೋಪಿಸುವ ರೂಢಿಯಿದೆ ಯೆಂದುತ್ತರ.

51 ರಸವು ಜ್ಞೇಯವೆಂಬ ರೂಢಿಯನ್ನು ಸಮರ್ಥಿಸುವುದು ಹೇಗೆಂದಿಲ್ಲಿ ತೋರಿಸಿದೆ: ಜ್ಞಾನದಲ್ಲಿ ಪ್ರಸಿದ್ಧವಾದ ಪ್ರಕಾರಗಳೆಂದರೆ—(೧) ಲೌಕಿಕ ಪ್ರತ್ಯಕ್ಷ ಮತ್ತು (೨) ಪರಿಮಿತ ಯೋಗಿ ಪ್ರತ್ಯಕ್ಷ ಮತ್ತು (೩) ಅಪರಿಮಿತಯೋಗಿ ಪ್ರತ್ಯಕ್ಷ. ಮೊದಲನೆಯದು ಎಲ್ಲರ ಅನುಭವದ ವಿಷಯವಾದರೆ ಎರಡನೆಯದು ಅಪರಿಪಕ್ವ ಯೋಗಿಗಳ (ಅಥವಾ 'ಯುಂಜಾನ'ರ) ಅನುಭವದ ವಿಷಯ ಮತ್ತು ಮೂರನೆಯದು ಪರಿಪೂರ್ಣ ಯೋಗಿಗಳ ಅನುಭವ. ಈ ಮೂರಕ್ಕಿಂತಲೂ ರಸವು ಬೇರೆಯಾದ ಪ್ರತ್ಯಕ್ಷವಾದ್ದರಿಂದ ಇದನ್ನು "ಲೋಕೋತ್ತರ ಪ್ರತ್ಯಕ್ಷ"ವೆಂದರೂ ಎನ್ನಬಹುದು. ಹೀಗೆ ಪ್ರತ್ಯಕ್ಷಸಿದ್ಧವಾದುದನ್ನು ಜ್ಞೇಯವೆನ್ನಲಡ್ಡಿಯೇನು?

ಕಲ್ಪಕ 'ವಲ್ಲ,[52] ವಿಭಾವಾದಿಗಳ ಪರಾಮರ್ಶವು ಮುಖ್ಯವಾಗಿ ಇದ್ದೇ ಇರುವುದರಿಂದ ; ಸವಿಕಲ್ಪಕವೂ ಅಲ್ಲ,[53] ಆಸ್ವಾದಕಾಲದಲ್ಲಿ ಅದರ ಅಖಂಡ ಆನಂದಾತಿಶಯವು ಅನುಭವಸಿದ್ಧವಾದುದರಿಂದ. ಎರಡೂ ಅಲ್ಲದಿದ್ದರೂ ಎರಡರ ಲಕ್ಷಣವೂ ಅಷ್ಟಿಷ್ಟು ಕೂಡಿಕೊಳ್ಳುವುದು ಮೊದಲಿಸಂತೆ ಅದರ ಲೋಕೋತ್ತರತ್ವಕ್ಕೆ ಸಾಧಕವಾಗುವುದೇ ಹೊರತು ಬಾಧಕವಲ್ಲ.''[54]

ಹುಲಿಯೇ ಮುಂತಾದ ವಿಭಾವಗಳು ಭಯಾನಕರಸದಂತೆ ವೀರ, ಅದ್ಭುತ, ರೌದ್ರಗಳಿಗೂ, ಕಣ್ಣೀರೇ ಮುಂತಾದ ಅನುಭಾವಗಳು ಶೃಂಗಾರರಸದಂತೆ ಕರುಣ. ಭಯಾನಕಗಳಿಗೂ, ಚಿಂತೆಯೇ ಮೊದಲಾದ ವ್ಯಭಿಚಾರಿಭಾವಗಳೂ ಕೂಡ ಶೃಂಗಾರ ರಸದಂತೆ ವೀರ, ಕರುಣ, ಭಯಾನಕಗಳಿಗೂ ಅನ್ವಯಿಸುವುದರಿಂದ ಪ್ರತ್ಯೇಕ ವಿಭಾವಾದಿಗಳಿಗೂ ವಿಶಿಷ್ಟ ರಸಗಳಿಗೂ ನಿಯತ ಸಂಬಂಧವಿಲ್ಲ. ಆದ್ದರಿಂದ ಸೂತ್ರ ದಲ್ಲಿ ಅವನ್ನು (ಬೇರೆ ಬೇರೆ ಹೇಳುವ ಬದಲು) ಒಟ್ಟಾಗಿ ಹೇಳಿದೆ.[55]

" ವಿಯದಲಿಮಲಿನಾಂಬುಗರ್ಭಮೇಘಂ
ಮಧುಕರಕೋಕಿಲಕೂಜಿತೈರ್ದಿಶಾಂ ಶ್ರೀಃ ।
ಧರಣಿರಭಿನವಾಂಕುರಾಂಕಟಂಕಾ
ಪ್ರಣತಿಪರೇ ದಯಿತೇ ಪ್ರಸೀದ ಮುಗ್ಧೇ ॥ "

52 ನಾಮ, ರೂಪ, ಜಾತಿ ಮುಂತಾದ ವಿಶೇಷಗಳೊಂದೂ ಇಲ್ಲದ ಪ್ರತ್ಯಕ್ಷಜ್ಞಾನವೇ ನಿರ್ವಿಕಲ್ಪಕ (*bare sensation*).

53 ನಾಮರೂಪಾದಿ ವಿಶಿಷ್ಟಪ್ರತೀತಿ ಸವಿಕಲ್ಪಕ.

54 ಹೀಗೆ ಪ್ರಾಪಂಚಿಕ ಶಾಸ್ತ್ರಗಳ ಅಳತೆಗೋಲುಗಳಿಂದ ಎಷ್ಟೆಷ್ಟು ಅಳೆದರೂ ರಸಾಸ್ವಾದದ ನೆಲೆಯು ಸಿಕ್ಕುವುದಿಲ್ಲ ; ಅಷ್ಟಿಷ್ಟು ಅನ್ವಯಿಸಿದರೆ ಎಷ್ಟೋ ಅನ್ವಯಿಸದೆ ನಿಲ್ಲುತ್ತದೆ. ರಸವು ಲೋಕೋತ್ತರ ಮತ್ತು ಕಾವ್ಯಮಾತ್ರನಿಯತವೆನ್ನಲು ಕಡೆಗೆ ಸಹೃದಯರ ಹೃದಯಸಂವಾದವೊಂದೇ ಪ್ರಮಾಣವಾಗಿ ನಿಲ್ಲುತ್ತದೆ. ಶಾಸ್ತ್ರವಿಲಕ್ಷಣವಾದ ಅನುಭವವನ್ನು ಶಾಸ್ತ್ರಮರ್ಯಾದೆಯಿಂದ ಪರೀಕ್ಷಿಸುವುದೇ ತಪ್ಪೆಂದು ಅಭಿನವಗುಪ್ತನು ಸೂಚಿಸಿ ಮುಗಿಸುತ್ತಾನೆ. ಹೀಗೆ ಭಾರತದ ಕಲಾ ರಹಸ್ಯಶೋಧಕರಲ್ಲಿ ಅಭಿನವಗುಪ್ತನು ಅಗ್ರಸ್ಥಾನಕ್ಕೆ ಪಾತ್ರನೆಂದು ಭಾವಿಸಬಹುದು. ಕಾವ್ಯದ ಅನುಭವವನ್ನು ಸರಿಯಾಗಿ ವಿವೇಚಿಸಲು ಪ್ರಾಚೀನ ಅಲಂಕಾರಶಾಸ್ತ್ರಕ್ಕಿಂತ ಭಿನ್ನವಾದ ಸ್ವತಂತ್ರ ಶಾಸ್ತ್ರಾಂತರವೇ ಬೇಕೆಂದು ಮನಗಂಡವರಲ್ಲಿ ಅಭಿನವಗುಪ್ತನ ಹೆಸರನ್ನು ಆನಂದವರ್ಧನನ ಜತೆಯಲ್ಲಿ ಹೇಳಲೇಬೇಕು.

55 ಒಟ್ಟಾಗಿ ಎಂದರೆ ಭರತಸೂತ್ರದಲ್ಲಿ "ಸಂಯೋಗ"ವೆಂಬ ಶಬ್ದದಿಂದ, ಮತ್ತು ಇಲ್ಲಿಯ ಕಾರಿಕೆಯಲ್ಲಿ "ತೈಃ" ಎಂಬ ಪದದಿಂದ.

ದುಂಬಿಗಪ್ಪಿನ ನೀರು ತುಂಬಿದ ಮೋಡವೊಡ್ಡಿದೆ ಬಾನೊಳು
ಭೃಂಗ ಕೋಕಿಲಗಾನದಿಂದಿದೊ ದೆಸೆಯ ಸೊಬಗೇರಿರುವುದು।
ಧರಣಿಯಭಿನವ ಸಸ್ಯಸಂಪದದಿಂದೆ ಕಣ್ಮನವೆಳೆವಳು
ಇನಿಯನೆರಗಿರೆ ಕಾಲ್ಗೆ ಬೇಗದಿನೊಲಿದು ಮುಗುದೆಯೆ ನಲಿವುದು॥

ಇತ್ಯಾದಿ ಲಕ್ಷ್ಯಗಳಲ್ಲಿ[56] ಮತ್ತು—

"ಪರಿಮ್ರುದಿತಮೃಣಾಲೀಮ್ಲಾನಮಂಗಂ ಪ್ರವೃತ್ತಿಃ
ಕಥಮಪಿ ಪರಿವಾರಪ್ರಾರ್ಥನಾಭಿಃ ಕ್ರಿಯಾಸು।
ಕಲಯತಿ ಚ ಹಿಮಾಂಶೋರ್ನಿಷ್ಕಲಂಕಸ್ಯ ಲಕ್ಷ್ಮೀಂ
ಅಭಿನವಕರಿದಂತಚ್ಛೇದಕಾಂತಃ ಕಪೋಲಃ॥"[57]

ಬಾಡಿಹುದಂಗಮಿಂತು ಭರದಿಂ ಪರಿಮರ್ದಿತ ಪದ್ಮತಂತುವೊಲ್
ಬೇಡುತುಮಿರ್ಪ ಮೇಳದವರಿಂ ಬಗೆ ವಂದುದದೆಂತೊ ಕಾರ್ಯದೊಳ್।
ನೋಡೆ ಕಪೋಲಬಿಂಬಮದು ತಾಂ ನವದಂತಸುಖಂಡ ಸುಂದರಂ
ನಾಡೆ ಕಳಂಕಮೋಡೆ ಪೊಳೆವಾ ಹಿಮರೋಚಿಯ ಚೆಲ್ವನಾಸುಗುಂ॥

ಮುಂತಾದೆಡೆಗಳಲ್ಲಿ ಮತ್ತು—

ದೂರಾದುತ್ಸುಕಮಾಗತೇ ವಿವಲಿತಂ ಸಂಭಾಷಿಣಿ ಸ್ಫಾರಿತಂ
ಸಂಶ್ಲಿಷ್ಯತ್ಯರುಣಂ ಗೃಹೀತವಸನೇ ಕಿಂಚಾಂಕಿತಭ್ರೂಲತಮ್।
ಮಾನಿನ್ಯಾಶ್ಚರಣಾನತಿವ್ಯತಿಕರೇ ಬಾಷ್ಪಾಂಬುಪೂರ್ಣೇಕ್ಷಣಂ
ಚಕ್ಷುರ್ಜಾತಮಹೋ ಪ್ರಪಂಚಚತುರಂ ಜಾತಾಗಸಿ ಪ್ರೇಯಸಿ॥[58]

---

[56] ಮಾನವತಿಯಾದ ನಾಯಿಕೆಯನ್ನು ಕುರಿತು ಸಖಿಯು ಹೇಳುವ ಮಾತು. ಇಲ್ಲಿ ಮೋಡ, ದುಂಬಿ ಮುಂತಾದ ವಿಭಾವಗಳು ಮಾತ್ರ ಇವೆಯಾದರೂ ಅನುಭಾವವ್ಯಭಿಚಾರಿಗಳು ಸುಖವಾಗಿ ಕಲ್ಪನಾಗಮ್ಯವಾಗಿವೆ.

[57] ಮಾಲತೀಮಾಧವಪ್ರಕರಣ, ಪ್ರಥಮಾಂಕ. ಮಕರಂದನಿಗೆ ಮಾಧವನು ಮಾಲತಿಯ ಅವಸ್ಥೆಯನ್ನು ವರ್ಣಿಸುತ್ತಿದ್ದಾನೆ. ಇಲ್ಲಿ ನಾಯಿಕೆಯ ಅನುಭಾವಗಳು ಮಾತ್ರ ವರ್ಣಿತವಾಗಿದ್ದರೂ ವಿಭಾವ, ವ್ಯಭಿಚಾರಿಗಳನ್ನೂಹಿಸುವುದು ಸುಲಭ.

[58] ಅಮರುಶತಕ, ೪೪. ಈ ಶ್ಲೋಕದಲ್ಲಿ ಔತ್ಸುಕ್ಯವೇ ಮೊದಲಾದ ವ್ಯಭಿಚಾರಿಗಳು ಮಾತ್ರ ಉಕ್ತವಾಗಿದ್ದರೂ ವಿಭಾವಾನುಭಾವಗಳನ್ನು ಊಹಿಸಿಕೊಳ್ಳುತ್ತೇವೆ.

ದೂರವಿರೆ ಕಾತರಿಸಿ, ಕೆಲಕೆ ಬರೆ ಬಾಗುತ್ತ, ನುಡಿದಲ್ಲಿ ಹೊಳೆಯುತ್ತಲು,
ಅಪ್ಪುವೆಡೆ ಕೆಂಪಾಗಿ ಸೀರೆಯನು ಪಿಡಿದೊಡನೆ ಭ್ರೂಲತೆಯನಿಳಿಸುತ್ತಲು।
ಮಾನಿನಿಯ ಕಾಲ್ಗೆರಗೆ ಬಾಷ್ಪಾಂಬುವಿಂ ತುಂಬಿ ಕುಡಿನೋಟವಿನಿದಾದುದು,
ತಪ್ಪುಗೈದಿರೆ ಪ್ರಿಯನು ಮತ್ತರಳಿತದೆ ಕಣ್ಣು ಪೇಳಲೇನಚ್ಚರಿಯನು ॥

ಮುಂತಾದುವುಗಳಲ್ಲಿ ಕೂಡ, ಕ್ರಮವಾಗಿ ಬರಿಯ ವಿಭಾವಗಳ, ಇಲ್ಲವೆ ಬರಿಯ ಅನುಭಾವಗಳ, ಇಲ್ಲವೆ ಬರಿಯ ಔತ್ಸುಕ್ಯ, ನಾಚಿಕೆ, ಹರ್ಷ, ಕೋಪ, ಅಸೂಯೆ, ಪ್ರಸಾದ—ಈ ವ್ಯಭಿಚಾರಿಭಾವಗಳ ಅಸ್ತಿತ್ವವನ್ನು ಮಾತ್ರ ನೋಡುತ್ತೇವೆ. ಆದರೂ ಇವುಗಳಲ್ಲಿ ಅಸಾಧಾರಣತ್ವವಿರುವುದರಿಂದ ಒಂದೊಂದೂ ಮಿಕ್ಕೆರಡನ್ನೂ ಧ್ವನಿಸುವ ಶಕ್ತಿಯನ್ನು ಪಡೆದಿರುತ್ತವೆಯಾಗಿ ವಿಭಾವಾದಿತ್ರಯಸಂಯೋಗಲಭ್ಯವಾದ ರಸಕ್ಕೆ ಯಾವ ಕೊರತೆಯೂ ಇಲ್ಲ.

ಈಗ ರಸದ ಪ್ರಕಾರಗಳನ್ನು ಹೇಳುತ್ತಾನೆ—

ಶೃಂಗಾರಹಾಸ್ಯಕರುಣರೌದ್ರವೀರಭಯಾನಕಾಃ ।
ಬೀಭತ್ಸಾದ್ಭುತಸಂಜ್ಞಾಶ್ಚೇತ್ಯಷ್ಟೌ ನಾಟ್ಯೇ ರಸಾಃ ಸ್ಮೃತಾಃ ॥ ೬ ॥

ಶೃಂಗಾರ, ಹಾಸ್ಯ, ಕರುಣ, ರೌದ್ರ, ವೀರ, ಭಯಾನಕ, ಬೀಭತ್ಸ, ಅದ್ಭುತ, ಈ ಎಂಟನ್ನೂ ನಾಟ್ಯರಸಗಳೆಂದು ಹೇಳುತ್ತಾರೆ.[59]

ಇವುಗಳಲ್ಲಿ ಶೃಂಗಾರವು ಎರಡು ಬಗೆ—ಸಂಭೋಗ ಮತ್ತು ವಿಪ್ರಲಂಭಗಳೆಂದು. ಮೊದಲನೆಯದಾದ ಸಂಭೋಗಶೃಂಗಾರವು ಕೂಡ ಪರಸ್ಪರ ದರ್ಶನ, ಆಲಿಂಗನ, ಅಧರಪಾನ, ಪರಿಚುಂಬನ, ಮುಂತಾಗಿ ಅನಂತ ಪ್ರಭೇದಗಳನ್ನೊಳಗೊಳ್ಳುವುದಾದರೂ ಒಂದೊಂದನ್ನೂ ಲೆಕ್ಕಮಾಡುವುದು ಅಶಕ್ಯವಾದುದರಿಂದ ಒಂದೇ ಎಂದು ಸ್ಥೂಲವಾಗಿ ಪರಿಗಣಿಸಲಾಗುತ್ತದೆ. ಉದಾಹರಣೆ—

ಶೂನ್ಯಂ ವಾಸಗೃಹಂ ವಿಲೋಕ್ಯ ಶಯನಾದುತ್ಥಾಯ ಕಿಂಚಿಚ್ಛನೈಃ
ನಿದ್ರಾವ್ಯಾಜಮುಪಾಗತಸ್ಯ ಸುಚಿರಂ ನಿರ್ವರ್ಣ್ಯ ಪತ್ಯುರ್ಮುಖಮ್ ।
ವಿಶ್ರಬ್ಧಂ ಪರಿಚುಂಬ್ಯ ಜಾತಪುಲಕಾಮಾಲೋಕ್ಯ ಗಂಡಸ್ಥಲೀಂ
ಲಜ್ಜಾನಮ್ರಮುಖೀ ಪ್ರಿಯೇಣ ಹಸತಾ ಬಾಲಾ ಚಿರಂ ಚುಂಬಿತಾ ॥[60]

---

[59] ಇಲ್ಲಿಂದ ಮುಂದೆ ಬರುವ ವಿವರಣೆಯಲ್ಲಿ ಮಮ್ಮಟನು ಭರತನ ನಾಟ್ಯಶಾಸ್ತ್ರವನ್ನು ಹೆಚ್ಚಾಗಿ ಅನುಸರಿಸಿದ್ದಾನೆ. ಚರ್ಚಾಸ್ಪದವಾದ ಶಾಂತರಸದ ಸುದ್ದಿಯನ್ನಿಲ್ಲಿ ಎತ್ತುವುದಿಲ್ಲ.

[60] ಅಮರುಶತಕ, ೭೭. ಇದು ನಾಯಿಕಾರಬ್ಧ ಶೃಂಗಾರ.

**ಸಖಿಯರ್ ಪೋದುದ ಕಂಡು ಪಾಸ ದೆಸೆಯಿಂ ಮೇಲೇಳುತೊಯ್ಯೊಯ್ಯನಾ**
**ಸುಖನಿದ್ರಾಗತನೆಂಬವೋಲ್ ಮಲಗಿರಲ್ ಪ್ರಾಣೇಶನಾ ವಕ್ತ್ರಮಂ।**
**ಸುಖದಿಂ ನೋಡುತೆ ಚುಂಬಿಸಲ್ ಕದಪಿನೊಳ್ ರೋಮಾಂಚಮಂ ಕಾಣುತುಂ**
**ಮುಖದೊಳ್ ನಾಣೊಗೆತಂದ ಬಾಲೆಯನವಂ ಕಾಂತಂ ಚಿರಂ ಚುಂಬಿಪಂ॥**

ಮತ್ತು—

ತ್ವಂ ಮುಗ್ಧಾಕ್ಷಿ ವಿನೈವ ಕಂಚುಲಿಕಯಾ ಧತ್ಸೇ ಮನೋಹಾರಿಣೀಂ
ಲಕ್ಷ್ಮೀಮಿತ್ಯಭಿಧಾಯಿನಿ ಪ್ರಿಯತಮೇ ತದ್ವೀಟಿಕಾಸಂಸ್ಪೃಶಿ।
ಶಯ್ಯೋಪಾಂತನಿವಿಷ್ಟಸಸ್ಮಿತಸಖೀನೇತ್ರೋತ್ಸವಾನಂದಿತೋ
ನಿರ್ಯಾತಶ್ಶನಕೈರಲೀಕವಚನೋಪನ್ಯಾಸಮಾಲೀಜನಃ॥[61]

ಹೇ ಮುಗ್ಧಾಕ್ಷಿ ಸುಕಂಚುಕಂ ಕಳೆದಿರಲ್ ರೂಪಂ ಮನೋಹಾರಿಯೆಂ-
ದೋಪಂ ಪೇಳುತುಮೊಯ್ಯನಾಗಲೆಳೆಯಲ್ ತದ್ವೀಟಿಕಾಪಾಶಮಂ।
ಶಯ್ಯೋಪಾಂತದೊಳಿರ್ದ ಸಸ್ಮಿತಸಖೀನೇತ್ರೋತ್ಸವಾನಂದಿತಂ
ವ್ಯಾಜೋಕ್ತ್ಯಂಗಳಿನಂತೆ ಮೆಲ್ಲನಚಿರಂ ಪೋದತ್ತು ನಾರೀಜನಂ॥

ಎರಡನೆಯದಾದ ವಿಪ್ರಲಂಭಶೃಂಗಾರವು ಅಭಿಲಾಷೆ, ವಿರಹ, ಈರ್ಷ್ಯೆ, ಪ್ರವಾಸ, ಶಾಪ, ಈ ಐದು ಬಗೆಯ ಕಾರಣಗಳಿಂದೊದಗಬಹುದಾದ್ದರಿಂದ ಐದು ಬಗೆ. ಕ್ರಮವಾಗಿ ಉದಾಹರಣೆಗಳನ್ನು ಕೊಡಲಾಗಿದೆ:—

(೧) ಪ್ರೇಮಾರ್ದ್ರಾಃ ಪ್ರಣಯಸ್ಪೃಶಃ ಪರಿಚಯಾದುದ್ಗಾಢರಾಗೋದಯಾಃ
ತಾಸ್ತಾ ಮುಗ್ಧದೃಶೋ ನಿಸರ್ಗಮಧುರಾಶ್ಚೇಷ್ಟಾ ಭವೇಯುರ್ಮಯಿ।
ಯಾಸ್ವನ್ತಃಕರಣಸ್ಯ ಬಾಹ್ಯಕರಣವ್ಯಾಪಾರರೋಧೀ ಕ್ಷಣಾತ್
ಆಶಂಸಾಪರಿಕಲ್ಪಿತಾಸ್ವಪಿ ಭವತ್ಯಾನಂದಸಾಂದ್ರೋ ಲಯಃ॥[62]

ಪ್ರೇಮಾರ್ದ್ರಂ ಪ್ರಣಯೋಚಿತಂ ಪರಿಚಯಪ್ರಾರಂಭರಾಗೋದಯಂ
ಕಾಮಾಕ್ಷೀವಿಹಿತಂ ನಿಸರ್ಗಮಧುರಂ ಹಾವಂ ಮಮಾಪೇಕ್ಷೆಯಿಂ-।
ದೆಂದಾಲೋಚಿಸುವನ್ನಮೆನ್ನ ಕರಣವ್ಯಾಪಾರರೋಧಾವಹಂ
ಆಶಾರಾಜ್ಯದೊಳಂ ಲಯಂಬಡೆಗುಮಾ ಸಾನಂದಸಾಂದ್ರಂ ಮನಂ॥

---

[61] **ಅಮರುಶತಕ, ೨೩. ಇದು ನಾಯಿಕಾರಬ್ಧ ಶೃಂಗಾರ.**

[62] **ಮಾಲತೀಮಾಧವ, v. ಇದು ಅಭಿಲಾಷೆಗೆ ಲಕ್ಷ್ಯ.**

(೨) ಅನ್ಯತ್ರ ವ್ರಜತೀತಿ ಕಾ ಖಲು ಕಥಾ ನಾಪ್ಯಸ್ಯ ತಾದೃಕ್ ಸುಹೃತ್
ಯೋ ಮಾಂ ನೇಚ್ಛತಿ ನಾಗತಶ್ಚ ಹಹಹಾ ಕೋಽಯಂ ವಿಧೇಃ
ಪ್ರಕ್ರಮಃ।
ಇತ್ಯಲ್ಪೇತರಕಲ್ಪನಾಕಬಲಿತಸ್ವಾಂತಾ ನಿಶಾಂತಾಂತರೇ
ಬಾಲಾ ವೃತ್ತವಿವರ್ತನವ್ಯತಿಕರಾ ನಾಪ್ನೋತಿ ನಿದ್ರಾಂ ನಿಶಿ ॥

ಬೇರೆಡೆ ಪೋಪುದೆಲ್ಲಿ, ಕೆಳೆಯಂ ಪೆರತೊರ್ವನದಾರುಮಿಲ್ಲ ಮೇ-
ಣಾಗದವಂ ಸಮಂತೆನಗೆ, ಬಾರನಿದೇನಿದು ಭಾಗ್ಯದಾಟವೋ।
ಈ ಪರಿ ನೂರು ಕಲ್ಪನೆಗಳೊಳ್ ಬಗೆಯಳ್ದಿರೆ ಬಾಲೆ ಮಾಡದೊಳ್
ಜಾನಿಸುತಾವಗಂ ನಡೆದುದಂ ತವೆ ನಿದ್ರಿಸಳಾಕೆ ರಾತ್ರಿಯೊಳ್ ॥[63]

ಇವಳು ವಿರಹೋತ್ಕಂಠಿತೆ.

(೩) ಸಾ ಪತ್ಯುಃ ಪ್ರಥಮಾಪರಾಧಸಮಯೇ ಸಖ್ಯೋಪದೇಶಂ ವಿನಾ
ನೋ ಜಾನಾತಿ ಸವಿಭ್ರಮಾಂಗವಲನಾವಕ್ರೋಕ್ತಿಸಂಸೂಚನಮ್।
ಸ್ವಚ್ಛೈರಚ್ಛಕಪೋಲ ಮೂಲಗಲಿತೈಃ ಪರ್ಯಸ್ತನೇತ್ರೋತ್ಪಲಾ
ಬಾಲಾ ಕೇವಲಮೇವ ರೋದಿತಿ ಲುಠಲ್ಲೋಲೋದಕೈರಶ್ರುಭಿಃ ॥[64]

ಕಾಂತನೆ ತಪ್ಪುಗೈಯೆ ಮೊದಲೊಳ್ ಸಖಿ ಪೇಳ್ವಿನಮಾರ್ತಳಿಲ್ಲ ತಾ-
ನಾರಯಲಂಗಚಾಲನಗಳಿಂ ಕಪಟೋಕ್ತಿಯ ಸೂಚನಂಗಳಂ।
ಕಣ್ಗಳಿನೆಂತುಮುಕ್ಕಿ ಜಲಮಾಕೆಯ ಶುಭ್ರಕಪೋಲಮೂಲದೊಳ್
ರೋದಿಪಳಲ್ತೆ ಬಾಲೆ ವಿಕಚೋತ್ಪಲನೇತ್ರೆಯಧೀರೆಯಾವಗಂ ॥

(೪) ಪ್ರಸ್ಥಾನಂ ವಲಯೈಃ ಕೃತಂ ಪ್ರಿಯಸಖೈರಸ್ರೈರಜಸ್ರಂ ಗತಂ
ಧೃತ್ಯಾ ನ ಕ್ಷಣಮಾಸಿತಂ ವ್ಯವಸಿತಂ ಚಿತ್ತೇನ ಗಂತುಂ ಪುರಃ।
ಯಾತುಂ ನಿಶ್ಚಿತಚೇತಸಿ ಪ್ರಿಯತಮೇ ಸರ್ವೇ ಸಮಂ ಪ್ರಸ್ಥಿತಾಃ।
ಗಂತವ್ಯೇ ಸತಿ ಜೀವಿತ ಪ್ರಿಯಸುಹೃತ್ಸಾರ್ಥಃ ಕಿಮು ತ್ಯಜ್ಯತೇ ॥[65]

---

[63] ಇದು ವಿರಹದ ಉತ್ಕಂಠೆಗೆ ಉದಾಹರಣೆ.

[64] ಅಮರುಶತಕ, ೨೬. ಇದು ಈರ್ಷ್ಯೆಗೆ ಉದಾಹರಣೆ.

[65] ಅಮರುಶತಕ, ೩೧. ಪ್ರವಾಸವಿಪ್ರಲಂಭದ ವರ್ಣನೆ.

ಬಳೆಗಳ್ ಪೋದುವು ನೆಚ್ಚಿನಾ ಸಖಿರೆನಲ್ ಕಣ್ಣೀರ್ಗಳೋಡಲ್ಕೆ ಮೇಣ್
ಚಣಮುಂ ನಿಲ್ಲದು ಧೈರ್ಯಮಂತೆ ಮನಮುಂ ಮುಂದಾದುದಿಂತಕ್ಕಟಾ।
ಪ್ರಿಯನೀಗಳ್ ಪೊರಮಟ್ಟಿರಲ್ ಜತೆಗೆ ತಾಮೆಲ್ಲರ್ ಪ್ರಯಾಣೋನ್ಮುಖರ್
ಪ್ರಿಯನೇ ಪ್ರಾಣನೆ ಪೋಗದಿರ್ಪೆ ಮಗುಳ್ದಿಂತಾಪ್ತೇಷ್ಟರಂ ಬಿಟ್ಟು ನೀಂ॥

(೫) ತ್ವಾಮಾಲಿಖ್ಯ ಪ್ರಣಯಕುಪಿತಾಂ ಧಾತುರಾಗೈಃ ಶಿಲಾಯಾಂ
ಆತ್ಮಾನಂ ತೇ ಚರಣಪತಿತಂ ಯಾವದಿಚ್ಛಾಮಿ ಕರ್ತುಮ್।
ಅಸ್ರೈಸ್ತಾವನ್ಮುಹುರುಪಚಿತೈರ್ದೃಷ್ಟಿರಾಲುಪ್ಯತೇ ಮೇ
ಕ್ರೂರಸ್ತಸ್ಮಿನ್ನಪಿ ನ ಸಹತೇ ಸಂಗಮಂ ನೌ ಕೃತಾಂತಃ॥[66]

ಅರೆಗಳಲ್ಲಿ ಕೆಂಗಾವಿಯಿಂದ ಹುಸಿಮುನಿಸಿನವಳ ಬರೆದು
ನಿನ್ನ ಮೆಲ್ಲಡಿಗೆ ಕೆಡಹಿಕೊಳಲು ಬರುತಿರಲು ಮುಂದುವರಿದು।
ಕಣ್ಣು ತುಂಬಿ ಕಂಗೆಡಿಸಿ ಕಂಬನಿಯ ಹಳ್ಳ ಹರಿದಿತಲ್ಲ
ಚಿತ್ರದಲ್ಲಿ ಕೂಡುವುದು ಕೂಡ ಆ ಬಿದಿಗೆ ಸೇರಲಿಲ್ಲ॥[67]

ಹಾಸ್ಯವೇ ಮೊದಲಾದ ರಸಗಳಿಗೆ ಕ್ರಮವಾಗಿ ಉದಾಹರಣೆಗಳಿವು :—

(೧) ಆಕುಂಚ್ಯ ಪಾಣಿಮಶುಚಿಂ ಮಮ ಮೂರ್ಧ್ನಿ ವೇಶ್ಯಾ
ಮಂತ್ರಾಂಭಸಾಂ ಪ್ರತಿಪದಂ ಪೃಷತೈಃ ಪವಿತ್ರೇ।
ತಾರಸ್ವರಂ ಪ್ರಥಿತಥೂತ್ಕಮದಾತ್ಪ್ರಹಾರಂ
ಹಾಹಾ ಹತೋಽಹಮಿತಿ ರೋದಿತಿ ವಿಷ್ಣುಶರ್ಮಾ॥

ಅಶುಚಿಯಾದೆಡಗೈಯನಾಡಿಸುತ ಸೂಳೆಯಿದೊ
ಮಂತ್ರಜಲಕಣಪೂತವಾದೆನ್ನ ಶಿರದೆ।
ನಿಡುಸರದೆ ಥೂತ್ಕರಿಸಿ ಹೊಡೆದಳಯ್ಯೋ ಶಿವನೆ
ಕೆಟ್ಟೆ ನಾನೆಂದಳುವನಿದೊ ವಿಷ್ಣುಶರ್ಮ॥[68]

(೨) ಹಾ ಮಾತಸ್ತ್ವರಿತಾಸಿ ಕುತ್ರ ಕಿಮಿದಂ ಹಾ ದೇವತಾಃ ಕ್ವಾಶಿಷಃ
ಧಿಕ್ಪ್ರಾಣಾನ್ ಪತಿತೋಽಶನಿರ್ಹುತವಹಸ್ತೇಽಙ್ಗೇಷು ದಗ್ಧೇ ದೃಶೌ।

---

[66] ಮೇಘಸಂದೇಶ, ii, ೪೨. ಶಾಪವಿಪ್ರಲಂಭಕ್ಕೆ ಲಕ್ಷ್ಯ.

[67] ಅಂಬಿಕಾತನಯದತ್ತರ ಭಾಷಾಂತರ.

[68] ಇಲ್ಲಿ ಹಾಸ್ಯರಸ ಸ್ಪಷ್ಟ.

ಇತ್ಥಂ ಘರ್ಘರಮಧ್ಯರುದ್ಧಕರುಣಾಃ ಪೌರಾಂಗನಾನಾಂ ಗಿರಃ
ಚಿತ್ರಸ್ಥಾನಪಿ ರೋದಯನ್ತಿ ಶತಧಾ ಕುರ್ವನ್ತಿ ಭಿತ್ತೀರಪಿ ‖[69]

ಮಾತೆಯೆ ಪೋದೆಯೆತ್ತ ಭರದಿಂ, ಸುರರೇ ಪುಸಿಯಾದುವಾಶಿಷಂ
ಪ್ರಾಣವಿದೇಕೆ, ವಜ್ರಪತನಂ ಗಡ ಕಿಚ್ಚನೆ ಕೊಟ್ಟರಂಗದೊಳ್ ।
ಕಂಗಳೆ ದಗ್ಧಮಕ್ಕೆಯೆನುತುಂ ಪುರನಾರಿಯರೆಲ್ಲ ಗೋಳಿಡಲ್
ಗೋಳಿಡಿಪರ್ ಸುಚಿತ್ರಗತರಂ, ತವೆ ಗೋಡೆಗಳನ್ನೆ ಸೀಳಿಪರ್ ‖[70]

(೩) ಕೃತಮನುಮತಂ ದೃಷ್ಟಂ ವಾ ಯೈರಿದಂ ಗುರುಪಾತಕಂ
ಮನುಜಪಶುಭಿರ್ನಿರ್ಮರ್ಯಾದೈರ್ಭವದ್ಭಿರುದಾಯುಧೈಃ ।
ನರಕರಿಪುಣಾ ಸಾರ್ಧಂ ತೇಷಾಂ ಸಭೀಮಕಿರೀಟಿನಾಂ
ಅಯಮಹಮಸೃಙ್ಮೇದೋಮಾಂಸೈಃ ಕರೋಮಿ ದಿಶಾಂ ಬಲಿಮ್ ‖[71]

ಕರದೊಳ್ ಕೈದಾಂತವರ್ ಮಾನುಷಪಶುಗಳದಾರೀ ಮಹಾ ಪಾಪಮಂ ಗೆ
ಯ್ದಿರೊ ಮೇಣಾರ್ ಕಂಡಿರೋ ಮೇಣನುಮತಿಸಿದಿರೋ ಮೀರಿ ಮರ್ಯಾದೆಯೊಳ್ಪಂ ।
ಹರಿಯಿಂದಂ ಭೀಮನಿಂದಂ ಸುರಪತಿಸುತನಿಂದಂ ನೆರಂಗೊಂಡ ನಿಮ್ಮೆ
ಲ್ಲರ ಮೇದೋರಕ್ತಮಾಂಸಪ್ರಕರದೆ ಬಲಿಯಂ ದಿಕ್ಕುಗಳ್ಗಿಕ್ಕುವೆಂ ನಾಂ ‖[72]

(೪) ಕ್ಷುದ್ರಾಃ ! ಸಂತ್ರಾಸಮೇತೇ ವಿಜಹಿತ ಹರಯಃ ಕ್ಷುಣ್ಣಶಕ್ರೇಭಕುಂಭಾಃ
ಯುಷ್ಮದ್ದೇಹೇಷು ಲಜ್ಜಾಂ ದಧತಿ ಪರಮಮೀ ಸಾಯಕಾ ನಿಷ್ಪತಂತಃ ।
ಸೌಮಿತ್ರೇ ! ತಿಷ್ಠ ಪಾತ್ರಂ ತ್ವಮಸಿ ನ ಹಿ ರುಷಾಂ ನನ್ವಹಂ ಮೇಘನಾದಃ
ಕಿಂಚಿದ್ಭ್ರೂಭಂಗಲೀಲಾನಿಯಮಿತಜಲಧಿಂ ರಾಮಮನ್ವೇಷಯಾಮಿ ‖[73]

---

[69] ಕಾಶ್ಮೀರರಾಜನ ತಾಯಿ ಮೃತಳಾದಾಗ ಭಟ್ಟನಾರಾಯಣಕವಿಯು ಬರೆದ ಚರಮಗೀತೆಯಿದೆಂದು ಮಾಣಿಕ್ಯಚಂದ್ರನು ಬರೆಯುತ್ತಾನೆ.

[70] ಇದು ಕರುಣರಸದ ದೃಷ್ಟಾಂತ.

[71] ವೇಣೀಸಂಹಾರನಾಟಕ, iii. ಇಲ್ಲಿ ರೌದ್ರರಸ.

[72] ಮೈಸೂರು ಸೀತಾರಾಮಶಾಸ್ತ್ರಿಗಳ 'ವೇಣೀಸಂಹಾರನಾಟಕ ಪ್ರತಿಕೃತಿ', ಪುಟ ೫೧.

[73] ಮಹಾನಾಟಕ, xi. ಇಲ್ಲಿ ರಸ ವೀರ.

ಸಂತ್ರಾಸಂಬಿಡಿರಲ್ಪವಾನರರಿರಾ ಶಕ್ರೇಭಕುಂಭಂಗಳಂ
ಚೂರ್ಣಂಗೈದಿರುವೆನ್ನ ಬಾಣವಿಳಿಯಲ್ ನಿಮ್ಮೊಳ್ ವಲಂ ಲಜ್ಜಿತಂ।
ಹೇ ಸೌಮಿತ್ರಿಯಪಾತ್ರ ನೀನು ಮುಳಿಸಿಂಗಾಂ ಮೇಘನಾದಂ ಗಡಾ
ಭ್ರೂಲೀಲಾವಿಜಿತಾಬ್ಧಿಯಂ ಹುಡುಕುವೆಂ ಶ್ರೀರಾಮನೆಂಬಾತನಂ ॥

(೫) ಗ್ರೀವಾಭಂಗಾಭಿರಾಮಂ ಮುಹುರನುಪತತಿ ಸ್ಯಂದನೇ ದತ್ತದೃಷ್ಟಿಃ
ಪಶ್ಚಾರ್ಧೇನ ಪ್ರವಿಷ್ಟಃ ಶರಪತನಭಯಾದ್ಭೂಯಸಾ ಪೂರ್ವಕಾಯಮ್।
ದರ್ಭೈರರ್ಧಾವಲೀಢೈಃ ಶ್ರಮವಿವೃತಮುಖಭ್ರಂಶಿಭಿಃ ಕೀರ್ಣವರ್ತ್ಮಾ
ಪಶ್ಯೋದಗ್ರಪ್ಲುತತ್ವಾದ್ವಿಯತಿ ಬಹುತರಂ ಸ್ತೋಕಮುರ್ವ್ಯಾಂ ಪ್ರಯಾತಿ ॥[74]

ಕೊರಲಂ ತಾಂ ಕೊಂಕುಗೆಯ್ಯುತ್ತಡಿಗಡಿಗೊಡನೈತರ್ಪ ತೇರಲ್ಲಣಂ ನ
ಟ್ಟಿರೆ ನೋಟಂ ಬಾಣಪಾತಕ್ಕಗಿದಿರುಕಿಸುತುಂ ಪೃಷ್ಠಮಂ ಮಾರ್ಗದೊಳ್ ತೀ।
ವಿರೆ ನೀಡುಂ ಬಿಟ್ಟ ಬಾಯಿಂ ಶ್ರಮದುದಿರ್ವರೆಮೆಲ್ದಿರ್ದ ದರ್ಭಾಂಕುರಂಗಳ್
ಧರೆಯಲ್ಲೋರೊರ್ಮೆ ಕಾಲಿಟ್ಟಹಹ ನಿರುಕಿಸೈ ಬಾನೊಳೇ ಪಾರಿ ಪೋಕುಂ ॥[75]

(೬) ಉತ್ಕೃತ್ಯೋತ್ಕೃತ್ಯ ಕೃತ್ತಿಂ ಪ್ರಥಮಮಥ ಪೃಥೂತ್ಸೇಧಭೂಯಾಂಸಿ ಮಾಂಸಾ-
ನ್ಯಂಸಸ್ಫಿಕ್‌ಪೃಷ್ಠಪಿಂಡಾದ್ಯವಯವಸುಲಭಾನ್ಯುಗ್ರಪೂತೀನಿ ಜಗ್ಧ್ವಾ।
ಆರ್ತಃ ಪರ್ಯಸ್ತನೇತ್ರಃ ಪ್ರಕಟಿತದಶನಃ ಪ್ರೇತರಂಕಃ ಕರಂಕಾತ್
ಅಂಕಸ್ಥಾದಸ್ಥಿಸಂಸ್ಥಂ ಸ್ಥಪುಟಗತಮಪಿ ಕ್ರವ್ಯಮವ್ಯಗ್ರಮತ್ತಿ ॥[76]

ತೊಗಲಂ ಕುಕ್ಕುತ್ತೆ ಕುಕ್ಕುತ್ತೊಡನಡಗುಗಳಂ ಪೀನಪೀನಂಗಳಂ ಮೇಣ್
ಭರದಿಂದಂಸಾಂಡಕೋಶಾದ್ಯವಯುವದಿನಣಂ ಬರ್ಪ ದುರ್ಗಂಧಮಂ ಸೇ-।

---

[74] ಅಭಿಜ್ಞಾನಶಾಕುಂತಲ, i. ಇಲ್ಲಿ ಭಯಾನಕರಸ ವ್ಯಕ್ತವಾಗಿದೆ.

[75] ಬಸಪ್ಪ ಶಾಸ್ತ್ರಿಗಳ ಭಾಷಾಂತರ.

[76] ಮಾಲತೀಮಾಧವ, v. ೧೬. ಇದು ಬೀಭತ್ಸರಸದ ಉದಾಹರಣೆ.

ಏಸುತುಂ ಪರ್ಯಸ್ತನೇತ್ರಂ ಪ್ರಕಟಿತದಶಸಂ ಪ್ರೇತಮಾರ್ತಂ ಸುಲುಬ್ಧಂ
ಪೆಣದೊಳ್ ಸಂದಸ್ಥಿಖಂಡಂಗಳಿನಡಗುಗಳಂ ಕಿಳ್ತು ತಿಂದತ್ತು ತೀವ್ರಂ ||

(೭) ಚಿತ್ರಂ ಮಹಾನೇಷ ಬತಾವತಾರಃ
ಕ್ವ ಕಾಂತಿರೇಷಾಽಭಿನವೈವ ಭಂಗಿಃ |
ಲೋಕೋತ್ತರಂ ಧೈರ್ಯಮಹೋ ಪ್ರಭಾವಃ
ಕಾಪ್ಯಾಕೃತಿರ್ನೂತನ ಏಷ ಸರ್ಗಃ ||

ಈತಂ ಗಡಾ ಚಿತ್ರ ಮಹಾವತಾರಂ
ತೇಜಂ ನವಂ ಭಂಗಿಯುಮಂತೆ ನೂತ್ನಂ |
ಲೋಕೋತ್ತರಂ ಧೈರ್ಯಮದೇಂ ಪ್ರಭಾವಂ
ರೂಪಂ ನವೀನಂ ಪೊಸದಾಯ್ತು ಸರ್ಗಂ ||[77]

ಈ ರಸಗಳ ಸ್ಥಾಯಿಭಾವಗಳನ್ನೀಗ ಹೇಳುತ್ತಾನೆ :—

ರತಿರ್ಹಾಸಶ್ಚ ಶೋಕಶ್ಚ ಕ್ರೋಧೋತ್ಸಾಹೌ ಭಯಂ ತಥಾ |
ಜುಗುಪ್ಸಾ ವಿಸ್ಮಯಶ್ಚೇತಿ ಸ್ಥಾಯಿಭಾವಾಃ ಪ್ರಕೀರ್ತಿತಾಃ || ೭ ||

ರತಿ, ಹಾಸ, ಶೋಕ, ಕ್ರೋಧ, ಉತ್ಸಾಹ, ಭಯ, ಜುಗುಪ್ಸೆ ಮತ್ತು ವಿಸ್ಮಯ ಗಳನ್ನು ಸ್ಥಾಯಿಭಾವಗಳೆಂದು ಹೇಳಿದ್ದಾರೆ.

ಇದರ ತಾತ್ಪರ್ಯ ಸ್ಪಷ್ಟವಾಗಿದೆ.

ವ್ಯಭಿಚಾರಿಭಾವಗಳನ್ನೀಗ ಹೇಳುತ್ತಾನೆ—

ನಿರ್ವೇದ ಗ್ಲಾನಿ ಶಂಕಾಖ್ಯಾಃ ತಥಾಸೂಯಾಮದಶ್ರಮಾಃ |
ಆಲಸ್ಯಂ ಚೈವ ದೈನ್ಯಂ ಚ ಚಿಂತಾ ಮೋಹಃ ಸ್ಮೃತಿರ್ಧೃತಿಃ || ೮ ||
ವ್ರೀಡಾ ಚಪಲತಾ ಹರ್ಷ ಆವೇಗೋ ಜಡತಾ ತಥಾ |
ಗರ್ವೋ ವಿಷಾದ ಔತ್ಸುಕ್ಯಂ ನಿದ್ರಾಪಸ್ಮಾರ ಏವ ಚ || ೯ ||
ಸ್ವಪ್ನಂ ಪ್ರಬೋಧೋಽಮರ್ಷಶ್ಚಾಪ್ಯವಹಿತ್ಥಮಥೋಗ್ರತಾ |
ಮತಿರ್ವ್ಯಾಧಿಸ್ತಥೋನ್ಮಾದಸ್ತಥಾ ಮರಣಮೇವ ಚ || ೧೦ ||
ತ್ರಾಸಶ್ಚೈವ ವಿತರ್ಕಶ್ಚ ವಿಜ್ಞೇಯಾ ವ್ಯಭಿಚಾರಿಣಃ |
ತ್ರಯಸ್ತ್ರಿಂಶದಮೀ ಭಾವಾಃ ಸಮಾಖ್ಯಾತಾಸ್ತು ನಾಮತಃ || ೧೧ ||

---

[77] ಇದು ಅದ್ಭುತರಸದ ಲಕ್ಷ್ಯ.

(೧) ನಿರ್ವೇದ, (೨) ಗ್ಲಾನಿ, (೩) ಶಂಕೆ, (೪) ಅಸೂಯೆ, (೫) ಮದ, (೬) ಶ್ರಮ, (೭) ಆಲಸ್ಯ, (೮) ದೈನ್ಯ, (೯) ಚಿಂತೆ, (೧೦) ಮೋಹ, (೧೧) ಸ್ಮೃತಿ, (೧೨) ಧೃತಿ, (೧೩) ವ್ರೀಡೆ, (೧೪) ಚಪಲತೆ, (೧೫) ಹರ್ಷ, (೧೬) ಆವೇಗ, (೧೭) ಜಡತೆ, (೧೮) ಗರ್ವ, (೧೯) ವಿಷಾದ, (೨೦) ಔತ್ಸುಕ್ಯ, (೨೧) ನಿದ್ರೆ, (೨೨) ಅಪಸ್ಮಾರ, (೨೩) ಸ್ವಪ್ನ, (೨೪) ಪ್ರಬೋಧ, (೨೫) ಅಮರ್ಷ, (೨೬) ಅವಹಿತ್ಥ, (೨೭) ಉಗ್ರತೆ, (೨೮) ಮತಿ, (೨೯) ವ್ಯಾಧಿ, (೩೦) ಉನ್ಮಾದ, (೩೧) ಮರಣ, (೩೨) ತ್ರಾಸ, (೩೩) ವಿತರ್ಕ—ಈ ಮೂವತ್ತುಮೂರೂ ವ್ಯಭಿಚಾರಿ ಭಾವಗಳ ಹೆಸರುಗಳು.[78]

ಅಮಂಗಲಪ್ರಾಯವಾದ ನಿರ್ವೇದವನ್ನು ಮೊಟ್ಟಮೊದಲು ಹೆಸರಿಸುವುದು ಅನುಚಿತವೆನಿಸಬಹುದಾದರೂ ಅದಕ್ಕೊಂದು ಔಚಿತ್ಯವಿದೆ. ನಿರ್ವೇದವು ವ್ಯಭಿಚಾರಿ ಭಾವವಾದರೂ ಕೆಲವೊಮ್ಮೆ ಸ್ಥಾಯಿಭಾವದ ಮಟ್ಟಕ್ಕೆ ಏರಬಲ್ಲುದೆಂಬುದನ್ನು ಸೂಚಿಸುವುದೇ ಇದರ ಮರ್ಮ.[79] ಆದುದರಿಂದ—

ನಿರ್ವೇದಸ್ಥಾಯಿಭಾವೋಽಸ್ತಿ ಶಾಂತೋಽಪಿ ನವಮೋ ರಸಃ ‖ ೧೨*ab* ‖

ನಿರ್ವೇದವೆಂಬ ಸ್ಥಾಯಿಭಾವವೂ ಒಂದುಂಟು; ಶಾಂತವು ಒಂಭತ್ತನೆಯ ರಸ.[80]

ಉದಾಹರಣೆ :—

ಅಹೌ ವಾ ಹಾರೇ ವಾ ಕುಸುಮಶಯನೇ ವಾ ದೃಷದಿ ವಾ
ಮಣೌ ಲೋಷ್ಠೇ ವಾ ಬಲವತಿ ರಿಪೌ ವಾ ಸುಹೃದಿ ವಾ ।
ತೃಣೇ ವಾ ಸ್ತ್ರೈಣೇ ವಾ ಮಮ ಸಮದೃಶೋ ಯಾಂತಿ ದಿವಸಾಃ
ಕ್ವಚಿತ್ಪುಣ್ಯಾರಣ್ಯೇ ಶಿವ ಶಿವ ಶಿವೇತಿ ಪ್ರಲಪತಃ ‖[81]

---

[78] ಇವುಗಳ ಅರ್ಥವಿವರಣೆಗೆ ಓದಿ—(೧) ಕನ್ನಡ ಕೈಪಿಡಿ, ಪು. ೨೨೫-೬ ; (೨) ಭಾರತೀಯ ಕಾವ್ಯಮೀಮಾಂಸೆ, ಪು. ೩೨೦-೩೨೨.

[79] ಈ ವಿಷಯದ ವಿಸ್ತೃತ ವಿವೇಚನೆಗೆ ಭಾರತೀಯ ಕಾವ್ಯಮೀಮಾಂಸೆ, ೨೪ ನೆಯ ಅಧ್ಯಾಯವನ್ನೋದಿ. ಮಮ್ಮಟನ ಮನಸ್ಸಿನಲ್ಲಿ ಶಾಂತರಸದ ಸ್ಥಾಯಿಭಾವ ಶಮವೋ ವೈರಾಗ್ಯವೋ, ಮುಂತಾದ ಸಂದೇಹಗಳಿಲ್ಲ. ಅವನು ನಿಸ್ಸಂದಿಗ್ಧವಾಗಿ ನಿರ್ವೇದವೇ ಸ್ಥಾಯಿಭಾವವೆನ್ನುತ್ತಾನೆ.

[80] ಈ ಪ್ರಕ್ರಿಯೆಯನ್ನು ಮಮ್ಮಟನು ಆನಂದವರ್ಧನ, ಅಭಿನವಗುಪ್ತರಿಂದ ಸ್ವೀಕರಿಸಿದ್ದಾನೆ.

[81] ಈ ಪದ್ಯವು ಅಭಿನವಗುಪ್ತನ ಪರಮಗುರುವೂ ಪ್ರತ್ಯಭಿಜ್ಞಾಸೂತ್ರಾದಿ ಗ್ರಂಥಕರ್ತೃವೂ ಆದ ಉತ್ಪಲರಾಜನದೆಂದು ಕ್ಷೇಮೇಂದ್ರನ 'ಔಚಿತ್ಯವಿಚಾರಚರ್ಚೆ'ಯಲ್ಲಿ ಹೇಳಿದೆ. ಭರ್ತೃಹರಿಯ ಪ್ರಚಲಿತ ವೈರಾಗ್ಯಶತಕದಲ್ಲೂ ಇದು ದೊರೆಯುತ್ತದೆ.

ಅಹಿಯಾಗಿರ್ಕೆಮ ಹಾರಮಕ್ಕೆ ಸುಮದಾ ಪಾಸಕ್ಕೆ ಕಲ್ಲಕ್ಕೆ ಮೇಣ್
ಮಣಿಯಾಗಿರ್ಕೆಮ ಲೋಷ್ಟಮಕ್ಕೆ ಪಗೆಯುಂ ಮೇಣಕ್ಕೆ ಮಿತ್ರೋತ್ತಮಂ|
ತೃಣಮೋ ಸ್ತ್ರೈಣಮೊ ಸಾಮ್ಯದೃಷ್ಟಿಯೊಳಗಾಂ ಕಾಲಂಗಳಂ ನೂಂಕುವೆಂ
ಸೊಗದಿಂ ಪುಣ್ಯದರಣ್ಯದೊಳ್ ಶಿವಶಿವಾ ದೇವೇಶಯೆಂದಾವಗಂ ||

ರತಿರ್ದೇವಾದಿವಿಷಯಾ ವ್ಯಭಿಚಾರೀ ತಥಾಂಜಿತಃ || ೧೨*cd* ||

ಭಾವಃ ಪ್ರೋಕ್ತಃ—

ದೇವತೆಗಳೇ ಮುಂತಾದವರ ವಿಷಯದಲ್ಲಿ ವ್ಯಕ್ತವಾಗುವ ರತಿಯೇ ವ್ಯಭಿಚಾರಿಭಾವವೆನಿಸುತ್ತದೆ.[82]

'ಮುಂತಾದವರ' ಎಂದರೆ ಮುನಿ, ಗುರು, ರಾಜ, ಪುತ್ರ, ಮೊದಲಾದವರ ವಿಷಯದಲ್ಲಿ ಎಂದು ತಾತ್ಪರ್ಯ; ಕಾಂತೆಯ ವಿಷಯದಲ್ಲಿ ವ್ಯಕ್ತವಾಗುವ ರತಿ ಮಾತ್ರ ಶೃಂಗಾರರಸಕ್ಕೆ ಸ್ಥಾಯಿ. ಉದಾಹರಣೆ:—

ಕಂಠಕೋಣವಿನಿವಿಷ್ಟಮೀಶ ತೇ
ಕಾಲಕೂಟಮಪಿ ಮೇ ಮಹಾಮೃತಮ್ |
ಅಪ್ಯುಪಾತ್ತಮಮೃತಂ ಭವದ್ವಪು-
ರ್ಭೇದವೃತ್ತಿ ಯದಿ ಮೇ ನ ರೋಚತೇ ||[83]

ಈಶನೆ ನಿನ್ನಯ ಕಂಠದಿ ನೆಲಸಿಹ
ಹಾಲಾಹಲವೂ ಅಮೃತವದು|
ದೊರೆತೊಡಮಮೃತವೆ ನಿನ್ನನ್ನಗಲುತೆ
ಬೇಡವೆ ಬೇಡದು ನನಗೆಂದೂ ||[84]

ಹರತ್ಯಘಂ ಸಂಪ್ರತಿ ಹೇತುರೇಷ್ಯತಃ
ಶುಭಸ್ಯ ಪೂರ್ವಾಚರಿತೈಃ ಕೃತಂ ಶುಭೈಃ|

---

[82] ಸಾಂಗೋಪಾಂಗವಾಗಿಯೂ ಕಾಂತಾವಿಷಯಕವಾಗಿಯೂ ಇದ್ದಾಗ ಮಾತ್ರ ರತ್ಯಾದಿಯು (ಶೃಂಗಾರಕ್ಕೆ) ಸ್ಥಾಯಿಭಾವವೆನಿಸುತ್ತದೆ, ಹಾಗಿಲ್ಲದೆ ನ್ಯೂನಾಂಗವೋ, ದೇವಾದಿವಿಷಯಕವೋ, ಆದರೆ ಅದು ಸ್ಥಾಯಿಭಾವವೇ ಅಲ್ಲ; ವ್ಯಭಿಚಾರಿಭಾವ. ಇದನ್ನು ಸಮರ್ಥಿಸುವ ಶ್ಲೋಕವೊಂದನ್ನು ಪ್ರದೀಪಕಾರನು ಉದಾಹರಿಸಿದ್ದಾನೆ:—

ರತ್ಯಾದಿಶ್ಚೇನ್ನಿರಂಗಃ ಸ್ಯಾದ್ದೇವಾದಿವಿಷಯೋಽಥ ವಾ |
ಅನ್ಯಾಂಗಭಾವಭಾಗ್ವಾ ಸ್ಯಾನ್ನ ತದಾ ಸ್ಥಾಯಿಶಬ್ದಭಾಕ್ ||

[83] ಪದ್ಯವು ಪೂರ್ವೋಕ್ತ ಉತ್ಪಲರಾಜನದು.

[84] ಇದು ದೇವವಿಷಯಕವಾದ ರತಿಗೆ ಉದಾಹರಣೆ.

ಶರೀರಭಾಜಾಂ ಭವದೀಯದರ್ಶನಂ
ವ್ಯನಕ್ತಿ ಕಾಲತ್ರಿತಯೇಽಪಿ ಯೋಗ್ಯತಾಮ್ ॥[85]

ಇಂದಿನ ಪಾಪವನಟ್ಟುತೆ ಮುಂದಿನ
ಶುಭಗಳ ಪುಟ್ಟಿಸಿ ಮುನ್ ಗೈದ।
ಪುಣ್ಯದ ಫಲ ತವ ದರ್ಶನವೊರೆವುದು
ನೋಳ್ಪರ ಮೈಮೆಯನನುಗಾಲ ॥[86]

ಹೀಗೆಯೇ ಉಳಿದುವನ್ನು[87] ಉದಾಹರಣೆಗಳಲ್ಲಿ ವಾಚಕರು ಯೋಜಿಸಿಕೊಳ್ಳಬೇಕು ವ್ಯಭಿಚಾರಿಭಾವಕ್ಕೆ ಉದಾಹರಣೆ:—

ಜಾನೇ ಕೋಪಪರಾಙ್ಮುಖೀ ಪ್ರಿಯತಮಾ ಸ್ವಪ್ನೇಽದ್ಯ ದೃಷ್ಟ್ವಾ ಮಯಾ
ಮಾ ಮಾಂ ಸಂಸ್ಪೃಶ ಪಾಣಿನೇತಿ ರುದತೀ ಗಂತುಂ ಪ್ರವೃತ್ತಾ ಪುರಃ।
ನೋ ಯಾವತ್ಪರಿರಭ್ಯ ಚಾಟುಶತಕೈರಾಶ್ವಾಸಯಾಮಿ ಪ್ರಿಯಾಂ
ಭ್ರಾತಸ್ತಾವದಹಂ ಶಠೇನ ವಿಧಿನಾ ನಿದ್ರಾದರಿದ್ರೀಕೃತಃ ॥

ಕನಸಿನೊಳಿಂದು ಕಂಡೆ ಮುನಿಸಿಂ ಮೊಗಮಂ ತಿರುಪಿರ್ದ ಕಾಂತೆಯಂ
ಕರಗಳಿನೆನ್ನ ಸೋಂಕದಿರು ನೀನೆನುತುಂ ಪೊರಮಟ್ಟಿರಶ್ರುಗಳ್।
ಸವಿಸುಡಿಯಿಂದದೆಂತೊ ಸತಿಯಂ ಬಿಡದಪ್ಪುತುಮೊಪ್ಪಿಸುವನ್ನಮಾ ಖಳಂ
ಬಿದಿ ಕಡೆಗಾಣ್ಚಿದಂ ಸಖನೆ ನಿದ್ರೆಯನೇ ನನಗಂದು ನಿರ್ದಯಂ ॥

ಇಲ್ಲಿ ವಿಧಿಯ ವಿಷಯದಲ್ಲಿ ಅಸೂಯೆಯೆಂಬ ವ್ಯಭಿಚಾರಿಭಾವ ವ್ಯಕ್ತವಾಗಿದೆ.

ತದಾಭಾಸಾಃ ಅನೌಚಿತ್ಯಪ್ರವರ್ತಿತಾಃ ॥ ೧೩ ॥

ಅವುಗಳ ಆಭಾಸಗಳು ಅನೌಚಿತ್ಯದಿಂದ ಉಂಟಾಗುತ್ತವೆ. ಅವುಗಳ ಆಭಾಸಗಳೆಂದರೆ ರಸಾಭಾಸಗಳು ಮತ್ತು ಭಾವಾಭಾಸಗಳು.[88] ರಸಾಭಾಸಕ್ಕೆ ಉದಾಹರಣೆ:—

[85] ಮಾಘನ ಶಿಶುಪಾಲವಧ ಮಹಾಕಾವ್ಯ, ಸರ್ಗ I. ನಾರದನನ್ನು ಕುರಿತು ಕೃಷ್ಣನು ಹೇಳುವ ಮಾತು.

[86] ಇದು ಮುನಿವಿಷಯಕವಾದ ರತಿಗೆ ಉದಾಹರಣೆ.

[87] ಗುರು, ನೃಪ, ಪುತ್ರಾದಿ ವಿಷಯಕವಾದ ರತಿಗಳನ್ನೂ ಎಂದು ತಾತ್ಪರ್ಯ.

[88] ರಸವನ್ನು ರಸಾಭಾಸಗೊಳಿಸುವ ಅನೌಚಿತ್ಯಗಳು ಯಾವುವೆಂದರೆ—(೧) ರತಿ ಉಪನಾಯಕನಲ್ಲುಂಟಾಗುವುದು, (೨) ಗುರುಪತ್ನಿಯಲ್ಲುಂಟಾಗುವುದು, (೩) ಅನೇಕ ನಾಯಕರಲ್ಲುಂಟಾಗುವುದು, (೪) ನಾಯಕನಾಯಿಕೆಯರಿಬ್ಬರಲ್ಲೂ ಇಲ್ಲದಿರುವುದು, (೫) ತಿರ್ಯಗ್ಜಂತುಗಳ ವಿಷಯದಲ್ಲಿ ವರ್ಣಿತವಾಗುವುದು, ಎಂದು ಉದ್ದ್ಯೋತಕಾರನು ಬರೆಯುತ್ತಾನೆ. ಹೋಲಿಸಿ—

ಸ್ತುಮಃ ಕಂ ವಾಮಾಕ್ಷಿ, ಕ್ಷಣಮಪಿ ವಿನಾ ಯಂ ನ ರಮಸೇ
ವಿಲೇಭೇ ಕಃ ಪ್ರಾಣಾನ್, ರಣಮಖಮುಖೇ ಯಂ ಮೃಗಯಸೇ
ಸುಲಗ್ನೇ ಕೋ ಜಾತಶ್ಶಶಿಮುಖಿ, ಯಮಾಲಿಂಗಸಿ ಬಲಾತ್
ತಪಶ್ಶ್ರೀಃ ಕಸ್ಯೈಷಾ, ಮದನನಗರಿ ಧ್ಯಾಯಸಿ ತು ಯಮ್ ‖

ನುತಿಗೆಣೆಯಾತ ಚೆಸ್ನೆ, ಚಣಮಂ ಬಿಡದಾವನ ನೀನೆ ಕಾಮಿಪಯ್
ಹರಣಮವಂಗೆ ಸಾರ್ಥಕಮಲಾ, ರಣರಂಗದೊಳಾರ ಮಾರ್ಗಿಪಯ್ ।
ಶುಭದೊಳೆ ಜಾತನಾತನೆ ಗಡಾ, ಬಿಡದಾವನ ನೀನೆಯಪ್ಪುವಯ್
ವರತಪಗೈದನಾತನೆ ವಲಂ, ತವೆಯಾವನ ನೀನೆ ಜಾನಿಪಯ್ ‖[೮೪]

ಇಲ್ಲಿ ನಾಯಿಕೆಗೆ ಅನೇಕ ಕಾಮುಕರಲ್ಲಿರುವ ಅನುರಾಗವನ್ನೇ ಹೊಗಳಿರುವು ದರಿಂದ ಒಬ್ಬೊಬ್ಬರನ್ನೂ ಕುರಿತು ಅವಳ ಅನುಚಿತ (V.L. ಅನುಗತ) ಆರಂಭಗಳನ್ನು ಎತ್ತಿ ತೋರಿಸಿದಂತಾಗಿದೆ.

ಭಾವಾಭಾಸಕ್ಕೆ ಉದಾಹರಣೆ :—

ರಾಕಾಸುಧಾಕರಮುಖೀ ತರಲಾಯತಾಕ್ಷೀ
ಸಾ ಸ್ಮೇರಯೌವನತರಂಗಿತವಿಭ್ರಮಾಸ್ಯಾ ।
ತತ್ಕಿಂ ಕರೋಮಿ ವಿದಧೇ ಕಥಮತ್ರ ಮೈತ್ರೀಂ
ತತ್ಸ್ವೀಕೃತಿವ್ಯತಿಕರೇ ಕ ಇವಾಭ್ಯುಪಾಯಃ ‖

ರಾಕೇಂದುವಕ್ತ್ರೆ ಚಪಲಾಯತನೇತ್ರೆ ಮತ್ತಂ
ಪ್ರೋದ್ವೇಲ ಯೌವನತರಂಗಿತಗಾತ್ರೆಯಪ್ಪಳ್ ।
ಮತ್ತೇವೆನಾಕೆಯೊಡನಾಟಮದೆಂತುಟಕ್ಕುಂ
ತಾನೆನ್ನನೇ ವರಿಪವೋಲಿಹುದೇನುಪಾಯಂ ‖ [೮೫]

' ಉಪನಾಯಕಸಂಸ್ಥಾಯಾಂ ಮುನಿಗುರುಪತ್ನೀಗತಾಯಾಂ ಚ ।
ಬಹುನಾಯಕವಿಷಯಾಯಾಂ ರತೌ ತಥಾನುಭಯನಿಷ್ಠಾಯಾಂ ‖
ಆಭಾಸತ್ವಂ ಕಥಿತಂ ತಥೈವ ತಿರ್ಯಗಾದಿವಿಷಯಾಯಾಮ್ ‖

ಈ ವಿಷಯದಲ್ಲಿರುವ ಮತಭೇದಗಳ ಚರ್ಚೆಗೆ ಭಾರತೀಯ ಕಾವ್ಯಮೀಮಾಂಸೆ, ಪು. ೯೯-೪೦೨ ನ್ನು ನೋಡಿ.

೮೪ ಪರವನಿತೆಯನ್ನು ಕುರಿತು ಕಾಮುಕನ ಉಕ್ತಿಯೆಂದು ಸಂದರ್ಭವನ್ನು ಕಲ್ಪಿಸಿಕೊಳ್ಳ ಬಹುದು.

೮೫ ಸೀತೆಯ ವಿಷಯದಲ್ಲಿ ರಾವಣನಾಡುವ ಮಾತು.

ಇಲ್ಲಿ ಚಿಂತೆಗೆ ಕಾರಣ ಅನೌಚಿತ್ಯ.[91] ಹೀಗೆಯೇ ಉಳಿದ ಉದಾಹರಣೆಗಳನ್ನು[92] ಊಹಿಸಿಕೊಳ್ಳಬೇಕು.

ಭಾವಸ್ಯ ಶಾಂತಿರುದಯಃ ಸಂಧಿಶ್ಶಬಲತಾ ತಥಾ ॥ ೧೩*cd* ॥

ಮತ್ತು (೧) ಭಾವಶಾಂತಿ,[93] (೨) ಭಾವೋದಯ,[94] (೩) ಭಾವಸಂಧಿ,[95] (೪) ಭಾವಶಬಲತೆ[96]ಗಳು . . . ಇವಕ್ಕೆ ಕ್ರಮವಾಗಿ ಉದಾಹರಣೆಗಳು :—

(೧) ತಸ್ಯಾಸ್ಸಾಂದ್ರವಿಲೇಪನಸ್ತನತಟಪ್ರಶ್ಲೇಷಮುದ್ರಾಂಕಿತಂ
ಕಿಂ ವಕ್ಷಶ್ಚರಣಾನತಿವ್ಯತಿಕರವ್ಯಾಜೇನ ಗೋಪಾಯ್ಯತೇ ।
ಇತ್ಯುಕ್ತೇ ಕ್ವ ತದಿತ್ಯುದೀರ್ಯ ಸಹಸಾ ತತ್ ಸಂಪ್ರಮಾಷ್ಟುರ್ಂ ಮಯಾ
ಸಂಶ್ಲಿಷ್ಟಾ ರಭಸೇನ ತತ್ಸುಖವಶಾತ್ ತನ್ವ್ಯಾ ಚ ತದ್ವಿಸ್ಮೃತಮ್ ॥[97]

ಅವಳಾ ಸಾಂದ್ರವಿಲೇಪನಸ್ತನತಟಪ್ರಶ್ಲೇಷಮುದ್ರಾಂಕಮ-
ಪ್ಪೆರ್ದೆಯಂ ಮುಚ್ಚುವೆಯೇಕೆ ಪಾದನಮನಪ್ರಾರಂಭದಾ ವ್ಯಾಜದಿಂ-।
ದೆನಲಾ ಕಾಂತೆಯದೆಲ್ಲಿಯೆನ್ನುತೊಡನಾಂ ಮುಚ್ಚಲ್ಕದಂ ಬೇಗದಿಂ
ದವಳಾಲಿಂಗನಗೈದೆನಾ ನೆನಪವಳ್ಗಿಲ್ಲಾಯ್ತು ತತ್ಸೌಖ್ಯದಿಂ ॥

ಇಲ್ಲಿ ಕೋಪದ ಶಮನವು ಲಕ್ಷ್ಯ.

(೨) ಏಕಸ್ಮಿನ್ ಶಯನೇ ವಿಪಕ್ಷರಮಣೀನಾಮಗ್ರಹೇ ಮುಗ್ಧಯಾ
ಸದ್ಯೋ ಮಾನಪರಾಙ್ಮುಖಗ್ಲಪಿತಯಾ ಚಾಟೂನಿ ಕುರ್ವನ್ನಪಿ ।
ಆವೇಗಾದವಧೀರಿತಃ ಪ್ರಿಯತಮಸ್ತೂಷ್ಣೀಂ ಸ್ಥಿತಸ್ತತ್ಕ್ಷಣಂ
ಮಾ ಭೂತ್ಸುಪ್ತ ಇವೇತ್ಯಮಂದವಲಿತಗ್ರೀವಂ ಪುನರ್ವೀಕ್ಷಿತಃ ॥[98]

---

[91] ಪರವನಿತೆಯನ್ನು ಕುರಿತಿರುವುದರಿಂದ.

[92] ಉಳಿದ ರಸಗಳ ಮತ್ತು ಭಾವಗಳ ಆಭಾಸಗಳನ್ನೂ ಎಂದರ್ಥ.

[93] ಶಾಂತಿ ಎಂದರೆ ಪ್ರಶಮ ಅಥವಾ ಶಮನ.

[94] ಉದಯವೆಂದರೆ ಉತ್ಪತ್ತಿ.

[95] ಸಂಧಿಯೆಂದರೆ ಸಮಕಾಲದಲ್ಲಿ ಎರಡು ಕೂಡುವಿಕೆ.

[96] ಶಬಲತೆಯೆಂದರೆ ಹಿಂದಿನದನ್ನು ಕುಗ್ಗಿಸಿ ಮುಂದಿನದು ಹುಟ್ಟುವುದು.

[97] ಅಮರುಶತಕ. ಇದು ಭಾವಶಾಂತಿಗೆ ಉದಾಹರಣೆ.

[98] ಅಮರುಶತಕ. ಇದು ಭಾವೋದಯಕ್ಕೆ ಉದಾಹರಣೆ.

ಒಂದೇ ಶಯ್ಯೆಯೊಳೋಪಸನ್ನ್ಯರಮಣೀನಾಮಂಗೊಳಲ್ ಮುಗ್ಧೆ ತಾ-
ನೆತ್ತಂ ಮಾನಪರಾಙ್ಮುಖಕ್ಷುಭಿತೆಯಾ ಪ್ರಾಣೇಶಚಾಟೂಕ್ತಿಯಂ |
ರೋಷಾವೇಗದಿನಂದು ನೂಂಕಲೊಡನಾತಂ ಮೌನಮಂ ತಾಳ್ದಿದಂ
ನಿದ್ರಾಮುದ್ರಿತನಕ್ಕುಮೆಂದು ಮಗುಳ್ದಾ ಲೋಲಾಸ್ಯೆ ಮೇಣ್ ನೋಡಿದಳ್ ||

ಇಲ್ಲಿ ಔತ್ಸುಕ್ಯದ ಉದಯ ಲಕ್ಷ್ಯ.

(೩) ಉತ್ಸಿಕ್ತಸ್ಯ ತಪಃಪರಾಕ್ರಮನಿಧೇರಭ್ಯಾಗಮಾದೇಕತಃ
ತತ್ಸಂಗಪ್ರಿಯತಾ ಚ ವೀರರಭಸೋಲ್ಲಾಸಶ್ಚ ಮಾಂ ಕರ್ಷತಃ |
ವೈದೇಹೀಪರಿರಂಭ ಏಷ ಚ ಮುಹುಶ್ಚೈತನ್ಯಮಾಮೀಲಯನ್
ಆನಂದೀ ಹರಿಚಂದನೇಂದುಶಿಶಿರಃ ಸ್ನಿಗ್ಧೋ ರುಣದ್ಧ್ಯನ್ಯತಃ ||[99]

ಬಂದಂ ಗರ್ವತಪಃ ಪರಾಕ್ರಮಗುಣಾವಾಸಂ ಗಡೆಂಬೊಂದು ಸತ್-
ಸಂಗಪ್ರೇಮಮುಮಂತೆ ವೀರರಭಸೋಲ್ಲಾಸಂ ಕರಂ ಚಿತ್ತಮಂ |
ತುಂಬಲ್ ತಾನಿರದಿತ್ತ ಸೀತೆಯ ಸುಖಾಶ್ಲೇಷಂ ಹೃದಾಪ್ಯಾಯನಂ
ಸಾಂದ್ರಾನಂದಕ ಚಂದನೇಂದು ಶಿಶಿರಂ ಬಾರಿಪ್ಪುದೆನ್ನಂ ದಿಟಂ ||

ಇಲ್ಲಿ ಆವೇಗ ಮತ್ತು ಹರ್ಷಗಳ ಸಂಧಿ ಲಕ್ಷ್ಯ.

(೪) ಕ್ವಾಕಾರ್ಯಂ ಶಶಲಕ್ಷ್ಮಣಃ ಕ್ವ ಚ ಕುಲಂ ಭೂಯೋಽಪಿ ದೃಶ್ಯೇತ ಸಾ
ದೋಷಾಣಾಂ ಪ್ರಶಮಾಯ ನಶ್ಶ್ರುತಮಹೋ ಕೋಪೇಽಪಿ ಕಾಂತಂ ಮುಖಮ್ |
ಕಿಂ ವಕ್ಷ್ಯನ್ತ್ಯಪಕಲ್ಮಷಾಃ ಕೃತಧಿಯಃ ಸ್ವಪ್ನೇಽಪಿ ಸಾ ದುರ್ಲಭಾ
ಚೇತಃ ಸ್ವಾಸ್ಥ್ಯಮುಪೈಹಿ ಕಃ ಖಲು ಯುವಾ ಧನ್ಯೋಽಧರಂ ಪಾಸ್ಯತಿ ||[100]

ಎಲ್ಲಿಯಕಾರ್ಯಮೆಲ್ಲಿ ಶಶಿಯಾ ಸುಕುಲಂ, ಪ್ರಿಯೆ ಮತ್ತೆ ಕಾಂಬಳೇ
ಪೊಲ್ಲದನಟ್ಟಲಲ್ತೆ ತಿಳಿವೀ ಮೊಗಮೇಂ ಮುನಿದುಂ ಮನೋಹರಂ |
ಬಲ್ಲರಕಲ್ಮಷರ್ ನುಡಿವರೇಂ, ಕನಸಲ್ಲಿಯುಮೀಕೆ ಕಾಣಳಿ-
ನ್ನಿಲ್ಲಿ ಸುಧೀರನಾಗು ಮನವೇ, ಮಿಗೆ ಚುಂಬಿಪ ಧನ್ಯನಾವನೋ ||

---

[99] ಮಹಾವೀರಚರಿತನಾಟಕ, ಅಂಕ ii. ಪರಶುರಾಮನು ಬಂದಾಗ ಸೀತಾಲಿಂಗನಸುಖದಲ್ಲಿರುವ ರಾಮನ ವಾಕ್ಯ.

[100] ವಿಕ್ರಮೋರ್ವಶೀಯನಾಟಕ, ಅಂಕ iv. ಉರ್ವಶಿಯನ್ನು ಕಂಡ ಪುರೂರವಸ್ಸಿನ ವಾಕ್ಯ. ಕೆಲವು ಮಾತೃಕೆಗಳಲ್ಲಿ ಶ್ಲೋಕ ಉಪಲಬ್ಧವಿಲ್ಲ. ಆನಂದವರ್ಧನನೂ ಇದನ್ನು ಉದಾಹರಿಸಿದ್ದಾನೆ. ಹೋಲಿಸಿ ಕನ್ನಡ ಧ್ವನ್ಯಾಲೋಕ, ಪು. ೧೧೧.

ಇಲ್ಲಿ ವಿತರ್ಕ, ಔತ್ಸುಕ್ಯ, ಮತಿ, ಸ್ಮರಣ, ಶಂಕೆ, ದೈನ್ಯ, ಧೃತಿ, ಚಿಂತೆ, ಹೀಗೆ ನಾನಾ ಭಾವಗಳ ಶಬಲತೆಯಿದೆ.

ಭಾವದ ಸ್ಥಿತಿಯನ್ನು ಆಗಲೇ ನಿರೂಪಿಸಿ 'ಜಾನೇ ಕೋಪಪರಾಙ್ಮುಖೀ . . .'[101] ಎಂಬ ಲಕ್ಷ್ಯವನ್ನು ಉದಾಹರಿಸಲಾಗಿದೆ.

ಮುಖ್ಯೇ ರಸೇಽಪಿ ತೇಽಙ್ಗಿತ್ವಂ ಪ್ರಾಪ್ನುವನ್ತಿ ಕದಾಚನ ॥ ೧೪*ab* ॥

ಯದ್ಯಪಿ ರಸವೇ ಮುಖ್ಯವಾದರೂ, ಒಮ್ಮೊಮ್ಮೆ ಅವುಗಳೂ ಪ್ರಾಧಾನ್ಯವನ್ನು ಪಡೆಯುತ್ತವೆ.

ಅವುಗಳೆಂದರೆ 'ಭಾವಶಾಂತಿ'ಯೇ ಮೊದಲಾದವು. ಮಹಾರಾಜನೇ ಪ್ರೇಕ್ಷಕನಾಗಿ ಉಪಸ್ಥಿತನಿದ್ದರೂ ವಿವಾಹಪ್ರವೃತ್ತನಾದ ರಾಜಸೇವಕನಿಗೆ ಕಾಲೋಚಿತವಾದ ಪ್ರಾಧಾನ್ಯವೊದಗುವಂತೆ ಅವಕ್ಕೂ ಪ್ರಾಧಾನ್ಯವುಂಟು.[102]

ಅನುಸ್ವಾನಾಭಸಂಲಕ್ಷ್ಯಕ್ರಮವ್ಯಂಗ್ಯಸ್ಥಿತಿಸ್ತು ಯಃ ॥ ೧೪*cd* ॥

ಶಬ್ದಾರ್ಥೋಭಯಶಕ್ತ್ಯುತ್ಥಃ ತ್ರಿಧಾ ಸ ಕಥಿತೋ ಧ್ವನಿಃ ॥ ೧೫*ab* ॥

ಅನುರಣನರೂಪವಾಗಿಯೂ ಸಂಲಕ್ಷ್ಯಕ್ರಮವಾಗಿಯೂ ಇರುವ ಧ್ವನಿ ಮೂರು ಬಗೆಯಾಗಿದೆ :—

(೧) ಶಬ್ದಶಕ್ತಿಮೂಲ, (೨) ಅರ್ಥಶಕ್ತಿಮೂಲ, ಮತ್ತು (೩) ಉಭಯಶಕ್ತಿಮೂಲ.

ಎಂದರೆ ಕ್ರಮವಾಗಿ (೧) 'ಶಬ್ದಶಕ್ತಿಮೂಲ-ಅನುರಣನರೂಪ-ವ್ಯಂಗ್ಯ, (೨) ಅರ್ಥಶಕ್ತಿಮೂಲ-ಅನುರಣನರೂಪ-ವ್ಯಂಗ್ಯ ಮತ್ತು (೩) ಉಭಯಶಕ್ತಿಮೂಲ-ಅನುರಣನರೂಪವೆಂಬುವೇ ಮೂರು ಬಗೆಗಳು.[103]

ಅಲಂಕಾರೋಽಥ ವಸ್ತ್ವೇವ ಶಬ್ದಾದ್ಯತ್ರಾವಭಾಸತೇ ॥ ೧೫*cd* ॥

ಪ್ರಧಾನತ್ವೇನ ಸ ಜ್ಞೇಯಃ ಶಬ್ದಶಕ್ತ್ಯುದ್ಭವೋ ದ್ವಿಧಾ ॥ ೧೬*ab* ॥

ಎಲ್ಲಿ ಶಬ್ದದಿಂದ ಪ್ರಧಾನವಾಗಿ (೧) ಅಲಂಕಾರ [104]ಇಲ್ಲವೇ (೨) ವಸ್ತು

---

101 ಮೇಲೆ ವ್ಯಭಿಚಾರಿಭಾವವಾದ ಅಸೂಯೆಯ ಉದಾಹರಣೆಯನ್ನು ನೋಡಿ.

102 ಇಲ್ಲಿಯವರೆಗೆ ಅಸಂಲಕ್ಷ್ಯಕ್ರಮ ಅಥವಾ ರಸಾದಿಧ್ವನಿಯನ್ನು ವಿವರಿಸಲಾಯಿತು. ಇನ್ನು ಮುಂದೆ ಸಂಲಕ್ಷ್ಯಕ್ರಮಧ್ವನಿಯ ವಿಭಾಗಪ್ರದರ್ಶನಕ್ಕೆ ಹೊರಡುತ್ತಾನೆ.

103 ಇದರ ಮೂಲವನ್ನು ಕನ್ನಡ ಧ್ವನ್ಯಾಲೋಕ, ಪು. ೪೯-೬೨ ರಲ್ಲಿ ನೋಡಬಹುದು.

104 ಅಲಂಕಾರಗಳ ವಿಸ್ತೃತ ನಿರೂಪಣೆ ಮುಂದೆ ಹತ್ತನೆಯ ಉಲ್ಲಾಸದಲ್ಲಿ ಬರುತ್ತದೆ.

ಮಾತ್ರವು ಧ್ವನಿತವಾಗುತ್ತಿರುವುದೋ ಅದನ್ನು ಶಬ್ದಶಕ್ತಿಮೂಲಧ್ವನಿಯೆಂದು ತಿಳಿಯುವುದು. ಈ ಎರಡೂ ಅದರ ಎರಡು ಪ್ರಕಾರಗಳು.

'ವಸ್ತುಮಾತ್ರ'ವೆನ್ನುವುದಕ್ಕೆ ಅಲಂಕಾರವಿಲ್ಲದ ವಸ್ತುಮಾತ್ರವೆಂದು ತಾತ್ಪರ್ಯ. ಮೊದಲನೆಯದಕ್ಕೆ ಉದಾಹರಣೆ :—

(೧) i. ಉಲ್ಲಾಸ್ಯ ಕಾಲಕರವಾಲಮಹಾಂಬುವಾಹಂ
ದೇವೇನ ಯೇನ ಜರಠೋರ್ಜಿತಗರ್ಜಿತೇನ ।
ನಿರ್ವಾಪಿತಸ್ಸಕಲ ಏವ ರಣೇ ರಿಪೂಣಾಂ
ಧಾರಾಜಲೈಸ್ತ್ರಿಜಗತಿ ಜ್ವಲಿತಃ ಪ್ರತಾಪಃ ॥

ಬೀಸುತ್ತೆ ಕಾಳಕರವಾಳ ಮಹಾಭ್ರಮಂ ದಲ್
ತೋರುತ್ತೆ ತೀವ್ರತರಗರ್ಜಿತ ಘೋಷಮಂ ಮೇಣ್ !
ಧಾರಾಜಲಂಗಳಿನಿದೋ ತ್ರಿಜಗಂಗಳೊಳ್ ನೀಂ
ಶತ್ರುಪ್ರತಾಪಶಿಖಿಯಂ ಶಮಿಸಿರ್ಪಯೆಂಬಿಂ ॥[105]

ಇಲ್ಲಿ ವಾಕ್ಯದ ಅರ್ಥವು ಅಸಂಬದ್ಧವೆನಿಸದಂತಾಗಬೇಕಾದರೆ ಅಪ್ರಸ್ತುತವಾದ ಅರ್ಥಕ್ಕೂ ಪ್ರಸ್ತುತವಾದ ಅರ್ಥಕ್ಕೂ ಉಪಮಸೋಪಮೇಯಭಾವವನ್ನು ಕಲ್ಪಿಸಿ ಕೊಳ್ಳಬೇಕಾಗುವುದರಿಂದ ಉಪಮಾಲಂಕಾರ ವ್ಯಂಗ್ಯ.

ii. ತಿಗ್ಮರುಚಿರಪ್ರತಾಪೋ ವಿಧುರನಿಶಾಕೃದ್ವಿಭೋ ಮಧುರಲೀಲಃ ।
ಮತಿಮಾನತತ್ತ್ವವೃತ್ತಿಃ ಪ್ರತಿಪದಪಕ್ಷಾಗ್ರಣೀರ್ವಿಭಾತಿ ಭವಾನ್ ॥

ಪ್ರಭೋ, ನಿನ್ನ ಪ್ರತಾಪವು ದಾಹಕವಾಗಿರುವಂತೆ ರುಚಿರವೂ ಆಗಿದೆ; ವೈರಿಗಳಿಗೆ ನೀನು ಕತ್ತಲೆಯನ್ನು (=ಮರಣವನ್ನು) ತರುವೆ, ನಿನ್ನ ಲೀಲೆ ಮಧುರ ಮತ್ತು ನಿನ್ನ ವೃತ್ತಿಯು ಸನ್ಮತಿ, ಅಭಿಮಾನ, ತತ್ತ್ವಗಳಲ್ಲೇ ನಿಷ್ಠವಾಗಿದೆ; ಪದವಿಯನ್ನು ಸಾಧಿಸುವ ಪಕ್ಷದ ಮುಂದಾಳೇ ನೀನು.[106]

ಮತ್ತು

ನಿನ್ನ ಇರವೇ ವಿಸ್ಮಯಕರವಾಗಿದೆ: ಸೂರ್ಯನಾದರೂ ಸುಡುವುದಿಲ್ಲ; ಚಂದ್ರನಾದರೂ ರಾತ್ರಿಯನ್ನುಂಟುಮಾಡುವುದಿಲ್ಲ; ವಸಂತನಾದರೂ ವಿಲಾಸವಿಲ್ಲ ; ಮತಿವಂತನಾದರೂ ತತ್ತ್ವದಲ್ಲಿ ನಿಷ್ಠೆಯಿಲ್ಲ; ಪಾಡ್ಯವಾದರೂ ಪಕ್ಷಕ್ಕೆ ಪ್ರಥಮವಲ್ಲ![107]

---

105 ರಾಜನ ಪ್ರಶಂಸಾಪರವಾದ ಪದ್ಯ.

106 ಮೂಲದ ಪದಗಳನ್ನು ಸಮಾಸಪದಗಳೆಂದು ಭಾವಿಸಿದರೆ ಈ ಅರ್ಥ ಬರುತ್ತದೆ. ಇದೂ ರಾಜಪ್ರಶಂಸೆಯೇ.

107 ಸಮಾಸವನ್ನಾಶ್ರಯಿಸದೆ ಹೋದರೆ ಈ ಅರ್ಥವೂ ಬರುತ್ತದೆ.

ಇಲ್ಲಿ ಸಮಾಸವನ್ನಾಶ್ರಯಿಸದಿರುವ ಎರಡನೆಯ ಅರ್ಥವನ್ನು ಸ್ವೀಕರಿಸಿದರೆ ವಿರೋಧಾಭಾಸಾಲಂಕಾರ ವ್ಯಂಗ್ಯ.

iii. ಅಮಿತಸ್ಸಮಿತಃ ಪ್ರಾಪ್ತೈರುತ್ಕರ್ಷೈರ್ಹರ್ಷದಃ ಪ್ರಭೋ ।
ಅಹಿತಸ್ಸಹಿತಃ ಸಾಧುಯಶೋಭಿರಸತಾಮಸಿ ॥

ಹರ್ಷದಾಯಕನಾದ ಪ್ರಭುವೆ! ಯುದ್ಧಗಳಲ್ಲಿ ಜಯಿಸಿ ಪಡೆದ ಉತ್ಕರ್ಷದಿಂದ ನೀನು ಅಮಿತನಾಗಿರುವೆ; ನೀನು ಕುಜನರಿಗೆ ಶತ್ರುವಾಗಿರುವುದಲ್ಲದೆ ಉತ್ತಮ ಯಶಸ್ಸಿಗೆ ಪಾತ್ರನೂ ಆಗಿರುವೆ.

ಮತ್ತು

(ಶಬ್ದಚಮತ್ಕಾರವನ್ನನುಲಕ್ಷಿಸಿದರೆ) ನೀನು ಅಮಿತನಾಗಿರುವಂತೆ ಸಮಿತ (=ಪರಿಮಾಣಸಹಿತ)ನೂ ಆಗಿರುವೆ; ಶತ್ರುಗಳ ಹರ್ಷವನ್ನು ಮುರಿದು ಹರ್ಷದನೆನಿಸುವಂತೆ ಮಿತ್ರರಿಗೆ ಹರ್ಷವಿತ್ತೂ ಹರ್ಷದನೆನಿಸುವೆ; 'ಅಹಿತ'ನೆನಿಸುವಂತೆಯೇ 'ಸಹಿತ'ನೆಂದೂ ಎನಿಸುವೆ.

ಇಲ್ಲಿಯೂ ವಿರೋಧಾಭಾಸಾಲಂಕಾರ ವ್ಯಂಗ್ಯ.[108]

iv. ನಿರುಪಾದಾನಸಂಭಾರಮಭಿತ್ತಾವೇವ ತನ್ವತೇ ।
ಜಗಚ್ಚಿತ್ರಂ ನಮಸ್ತಸ್ಮೈ ಕಲಾಶ್ಲಾಘ್ಯಾಯ ಶೂಲಿನೇ ॥[109]

ಮತ್ತಿನ ಕರಣಗಳಿಲ್ಲದ-
ಭಿತ್ತಿಯೊಳಂ ವಿಶ್ವಚಿತ್ರಮಂ ಬರ್ಚಿಸುವಂ-।
ಗುತ್ತಮಸುಕಲಾಕಾರಿಗೆ
ಚಿತ್ತದೊಳಾಂ ಶೂಲಿಗಿಂದು ನಮಿಸುತ್ತಿರ್ಪೆಂ ॥

ಇಲ್ಲಿ ವ್ಯತಿರೇಕಾಲಂಕಾರ ವ್ಯಂಗ್ಯ. ವಸ್ತುತಃ, ಧ್ವನಿತವಾಗುವ ಅಲಂಕಾರಗಳಿಗೆ ಅಲಂಕಾರತ್ವ ತಪ್ಪಿ ಅಲಂಕಾರ್ಯತ್ವವೊದಗುವುದಾದರೂ, ಬ್ರಾಹ್ಮಣಶ್ರಮಣನ್ಯಾಯದಂತೆ[110] ಅವುಗಳ ಅಲಂಕಾರತ್ವವನ್ನು ಗ್ರಹಿಸಬೇಕು.

---

[108] ಹಿಂದಿನ ಪದ್ಯ 'ಸಭಂಗ' ವಿರೋಧಾಭಾಸಕ್ಕೆ ಉದಾಹರಣೆ; ಇದು 'ಅಭಂಗ' ವಿರೋಧಾಭಾಸಕ್ಕೆ. ಹಿಂದಿನಂತೆ ಇಲ್ಲಿ ಪದಚ್ಛೇದ ಬದಲಾಗುವುದಿಲ್ಲ.

[109] ಪದ್ಯವನ್ನು ಅಭಿನವಗುಪ್ತರೂ ಉದಾಹರಿಸಿದ್ದಾರೆ. ಭಟ್ಟನಾಯಕನದಿರಬಹುದು.

[110] ಬ್ರಾಹ್ಮಣನು ಸಂನ್ಯಾಸವನ್ನು ಸ್ವೀಕರಿಸಿದ ಮೇಲೆ ಜಾತಿವೈಶಿಷ್ಟ್ಯಗಳು ಹೋಗುವುದಾದರೂ, ಪೂರ್ವಾಶ್ರಮದ ದೃಷ್ಟಿಯಿಂದ ಬ್ರಾಹ್ಮಣಶ್ರಮಣನೆಂದು ವ್ಯವಹರಿಸುವ ರೂಢಿಯುಂಟು. ಹಾಗೆಯೇ ವಸ್ತುತಃ ವಾಚ್ಯಾಲಂಕಾರದ ಸ್ವರೂಪವೂ ವ್ಯಂಗ್ಯಾಲಂಕಾರದ ಸ್ವರೂಪವೂ ಬೇರೆ ಬೇರೆಯಾದರೂ, ಎರಡನ್ನೂ ಅಲಂಕಾರವೆನ್ನುವ ರೂಢಿಯಿದೆ—ಪೂರ್ವಾವಸ್ಥೆಯ ದೃಷ್ಟಿಯಿಂದ.

ವಸ್ತುಮಾತ್ರಕ್ಕೆ ಉದಾಹರಣೆ :—

(೨) i. ಪಂಥಿಅ ಣ ಏತ್ಥ ಸತ್ಥರಮತ್ಥಿ ಮಣಂ ಪತ್ಥರತ್ಥಲೇ ಗಾಮೇ !
ಉಣ್ಣಅಪಓಹರಂ ಪೆಕ್ಖಿಊಣ ಜಇ ವಸಸಿ ತಾ ವಸಸು ॥

ಕಲ್ಲೆಲಮುಪ್ಪೀ ಪಳ್ಳಿಯೊ-
ಳಿಲ್ಲೆಂತುಂ ಪಾಸಿನಾಸೆ ಪಾಂಥನೆ ಮಲಗಲ್ |
ಉನ್ನತಮಾಯ್ತು ಪಯೋಧರ-[111]
ಮೆನ್ನುತ್ತುಂ ತಂಗಲಿನ್ನು ತಂಗಲ್‌ಬಹುದಯ್ ॥

ಇಲ್ಲಿ ' ನೀನು ಉಪಭೋಗಕ್ಷಮನಾಗಿದ್ದರೆ ತಂಗಬಹುದು ' ಎಂಬ ವಸ್ತು ವ್ಯಂಗ್ಯ.

ii. ಶನಿರಶನಿಶ್ಚ ತಮುಚ್ಚೈರ್ನಿಹನ್ತಿ ಕುಪ್ಯಸಿ ನರೇಂದ್ರ ಯಸ್ಮೈ ತ್ವಮ್ ।
ಯತ್ರ ಪ್ರಸೀದಸಿ ಪುನಃ ಸ ಭಾತ್ಯುದಾರೋಽನುದಾರಶ್ಚ ॥

ನರೇಂದ್ರನೆ, ನೀನು ಯಾರ ಮೇಲೆ ಸಿಟ್ಟಾಗುವೆಯೋ ಅವನನ್ನು ಶನಿ (=ಗ್ರಹ) ಮತ್ತು ಅಶನಿ (=ಶನಿಯಲ್ಲದವನು ಮತ್ತು ವಜ್ರಾಯುಧ)ಗಳೆರಡೂ ಮೇಲ್ವಾಯ್ದು ಮುರಿಯುತ್ತವೆ. ಅದೇ ನೀನು ಯಾರ ವಿಷಯದಲ್ಲಿ ಪ್ರಸನ್ನನಾಗುವೆಯೋ ಅವನು ಏಕಕಾಲದಲ್ಲಿ ಉದಾರ (=ಮಹಾತ್ಮ)ನೂ ಆಗುತ್ತಾನೆ, ಅನುದಾರ (=ಉದಾರನಲ್ಲದವನು ಮತ್ತು ಪತ್ನೀಸಖ)ನೂ ಆಗುತ್ತಾನೆ.

ಇಲ್ಲಿ ವಿರುದ್ಧವಾದ ಅಂಶಗಳೂ ಕೂಡ ನಿನ್ನನ್ನು ಅನುಸರಿಸುವುದಕ್ಕಾಗಿ ಒಂದೇ ಕಾರ್ಯವನ್ನು ಮಾಡುತ್ತವೆಯೆಂಬುದು ಧರ್ಮವ್ಯತ್ಯಯ[112]ದಿಂದಲೇ ವ್ಯಂಗ್ಯ.

ಅರ್ಥಶಕ್ತ್ಯುದ್ಭವೋಽಪ್ಯರ್ಥೋ ವ್ಯಂಜಕಸ್ಸಂಭವೀ ಸ್ವತಃ ॥ ೧೭*cd* ॥

ಪ್ರೌಢೋಕ್ತಿಮಾತ್ರಾತ್ ಸಿದ್ಧೋ ವಾ ಕವೇಸ್ತೇನೋಮ್ಭಿತಸ್ಯ ವಾ ।
ವಸ್ತು ವಾಲಂಕೃತಿರ್ವೇತಿ ಷಡ್‌ಭೇದೋಽಸೌ ವ್ಯನಕ್ತಿ ಯತ್ ॥ ೧೭ ॥

ವಸ್ತ್ವಲಂಕಾರಮಥವಾ ತೇನಾಯಂ ದ್ವಾದಶಾತ್ಮಕಃ ॥ ೧೮*ab* ॥

ಅರ್ಥಶಕ್ತಿಮೂಲವಾದ ವ್ಯಂಜಕವು 'ಸ್ವತಃಸಂಭವಿ', 'ಕವಿಪ್ರೌಢೋಕ್ತಿಸಿದ್ಧ' ಮತ್ತು 'ಕವಿನಿಬದ್ಧಪ್ರೌಢೋಕ್ತಿಸಿದ್ಧ'ವೆಂದು ಮೂರು ತೆರ; ಅದು ಒಂದೊಂದೂ

---

111 ಪಯೋಧರ=ಮೋಡ ಮತ್ತು ಸ್ತನ.

112 ಒಂದೊಂದರ ಸಹಜಗುಣದ ವಿಪರ್ಯಾಸ.

ವಸ್ತುವಾಗಬಹುದು ಇಲ್ಲವೆ ಅಲಂಕಾರವಾಗಬಹುದು ಎಂಬುದರಿಂದ ಆರು ಬಗೆ ಯಾಯಿತು. ಈ ಆರರ ವ್ಯಂಗ್ಯವು ಮತ್ತೆ ವಸ್ತು ಅಥವಾ ಅಲಂಕಾರವಾಗಬಹು ದಾದ್ದರಿಂದ ಅರ್ಥಶಕ್ತಿಮೂಲಧ್ವನಿಯು ಹನ್ನೆರಡು ಪ್ರಕಾರಗಳನ್ನೊಳಗೊಳ್ಳುತ್ತದೆ.

ಅರ್ಥವು ಎರಡು ವಿಧ:—(೧) ಸ್ವತಃ ಸಿದ್ಧವಾಗಿರುವುದು ಮತ್ತು (೨) ಇದೇ ಮೊದಲು ಕಲ್ಪಿತವಾದುದು. ಮೊದಲನೆಯದಾದ ಸ್ವತಃಸಂಭವಿಯು ಕವಿಯ ಭಣಿತಿ ಕೌಶಲದಿಂದ ಮಾತ್ರ ಉತ್ಪನ್ನವಾಗುವಂತಹುದಲ್ಲ; ಅದು ಕಾವ್ಯಪ್ರಪಂಚದ ಹೊರಗೂ ತಾನೇ ತಾನಾಗಿ ವಿದ್ಯಮಾನವಾಗಿರುವುದು ಸಂಭವ. ಆದರೆ ಬಾಹ್ಯ ಪ್ರಪಂಚದಲ್ಲಿ ಇಲ್ಲದೆಯೇ ಇರುವ ವಸ್ತುವನ್ನು ಕವಿಯು ತನ್ನ ಪ್ರತಿಭಾಬಲದಿಂದ ಮೊಟ್ಟಮೊದಲು ಸೃಷ್ಟಿಸುವ ಅಂಶವು ಎರಡನೆಯದು. ಕವಿಯು ತನ್ನ ಮಾತಿನಿಂದಲೇ ಕಲ್ಪಿಸಬಹುದು ಇಲ್ಲವೆ ತಾನು ನಿರ್ಮಿಸಿದ ಪಾತ್ರಗಳ ಮಾತುಗಳ ಮೂಲಕ ಕಲ್ಪಿಸ ಬಹುದು. ಹೀಗೆ ಎರಡನೆಯ ಬಗೆಯು ಮತ್ತೆ ಎರಡು ವಿಧವಾಗಿರುತ್ತದೆ. ಅಲ್ಲದೆ ಪ್ರತಿಯೊಂದು ಬಗೆಯೂ ವಸ್ತುರೂಪವಾಗಿರಬಹುದು ಇಲ್ಲವೆ ಅಲಂಕಾರರೂಪ ವಾಗಿರಬಹುದಾದ್ದರಿಂದ ವ್ಯಂಜಕವು ಆರುಬಗೆಯಾಯಿತು. ಅದರ ವ್ಯಂಗ್ಯ ಕೂಡ ವಸ್ತು ಇಲ್ಲವೆ ಅಲಂಕಾರವಾಗಬಹುದಾದ್ದರಿಂದ ಅರ್ಥಶಕ್ತಿಮೂಲಧ್ವನಿಯ ಬಗೆಗಳು ಒಟ್ಟಾರೆ ಹನ್ನೆರಡು. ಕೆಳಗೆ ಕ್ರಮವಾಗಿ ಉದಾಹರಣೆಗಳನ್ನು ಕೊಡಲಾಗಿದೆ:—

೧. ಅಲಸಸಿರೋಮಣಿ ಧುತ್ತಾಣಮಗ್ಗಿಮೋ ಪುತ್ತಿ ಧಣಸಮಿದ್ಧಿಮ ಓ।
ಇಅ ಭಣಿಏಣ ಣಅಂಗೀ ಪಪ್ಫುಲ್ಲವಿಲೋಅಣಾ ಜಾಆ॥

ಅಲಸಶಿರೋಮಣಿ ಧೂರ್ತರ
ಕುಲಾಗ್ರಣಿಯುಮಂತೆ ಮಗಳೆ ಸುಧನಸಮೃದ್ಧಂ।
ಎಂದೊರೆಯಲೊಡಂ ಸತಿಯಾ
ನಂದಿಸುತುಂ ತಾನೆ ಫುಲ್ಲಲೋಚನೆಯಾದಳ್॥

ಇಲ್ಲಿ 'ಆತನು ನನ್ನ ಪ್ರೇಮಪಾಶಕ್ಕೆ ಸಿಕ್ಕಿದವ'ನೆಂಬ ವಸ್ತುವು ವರ್ಣಿತ ವಸ್ತುವಿನಿಂದ ವ್ಯಂಗ್ಯ.

೨. ಧನ್ಯಾಸಿ ಯಾ ಕಥಯಸಿ ಪ್ರಿಯಸಂಗಮೇಽಪಿ
ವಿಶ್ರಬ್ಧಚಾಟುಕಶತಾನಿ ರತಾಂತರೇಷು।
ನೀವೀಂ ಪ್ರತಿ ಪ್ರಣಿಹಿತೇ ತು ಕರೇ ಪ್ರಿಯೇಣ
ಸಖ್ಯಃ ಶಪಾಮಿ ಯದಿ ಕಿಂಚಿದಪಿ ಸ್ಮರಾಮಿ॥[118]

[118] ಇದು ಕವಯಿತ್ರಿಯಾದ ವಿಜ್ಜಕೆಯದೆಂದು ಶಾರ್ಙ್ಗಧರಪದ್ಧತಿಯಲ್ಲಿ ಹೇಳಿದೆ.

ರತದೊಳ್ ಪ್ರಿಯನೊಡನಾಡಿದ
ಸವಿವಾತಂ ಸುಡಿವೆ ಧನ್ಯೆ ನೀನಹೆ ನಿರುತಂ |
ಕೈ ನೀಡಿರೆ ನೀವಿಗಪಂ[114]
ನಾನೊಂದಂ ಸಖಿಯರಾಣೆ ನೆನೆಯಲ್ಕಾರೆಂ ||

ಇಲ್ಲಿ 'ನೀನು ಅಧನ್ಯೆ, ನಾನೇ ನಿಜವಾಗಿ ಧನ್ಯೆ'ಯೆಂಬ ವ್ಯತಿರೇಕಾಲಂಕಾರ [115]ವ್ಯಂಗ್ಯ.

೩. ದರ್ಪಾಂಧ ಗಂಧಗಜಕುಂಭಕಪಾಟಕೂಟ-
ಸಂಕ್ರಾಂತನಿಘ್ನಘನಶೋಣಿತ ಶೋಣಶೋಚಿಃ |
ವೀರೈರ್ವ್ಯಲೋಕಿ ಯುಧಿ ಕೋಪಕಷಾಯಕಾಂತಿಃ
ಕಾಳೀಕಟಾಕ್ಷ ಇವ ಯಸ್ಯ ಕರೇ ಕೃಪಾಣಃ ||

ದರ್ಪಾಂಧ-ಗಂಧಗಜ-ಕುಂಭ-ಕಪಾಟ-ಕೂಟ-
ಸಂಕ್ರಾಂತ-ಸಾಂದ್ರ-ಘನಶೋಣಿತ-ಶೋಣವರ್ಣಂ |
ಕೈಯೊಳ್ ಕೃಪಾಣಮಿರೆ ಕಣ್ಗೆಸೆದತ್ತು ರಕ್ತಂ
ಕಾಳೀಕಟಾಕ್ಷ ಸದೃಶಂ ರಣದೊಳ್ ಭಟರ್ಗಂ ||

ಇಲ್ಲಿ ಉಪಮಾಲಂಕಾರದಿಂದ 'ಸಕಲ ರಿಪುಬಲವೂ ಕ್ಷಣದಲ್ಲಿ ಧ್ವಂಸವಾಗುತ್ತದೆ' ಯೆಂಬ ವಸ್ತು ವ್ಯಂಗ್ಯ.

೪. ಗಾಢಕಾಂತದಶನಕ್ಷತವ್ಯಥಾ
ಸಂಕಟಾದರಿವಧೂಜನಸ್ಯ ಯಃ |
ಓಷ್ಠವಿದ್ರುಮದಲಾನ್ಯಮೋಚಯತ್
ನಿರ್ದಶನ್ ಯುಧಿ ರುಷಾ ನಿಜಾಧರಮ್ ||

ಕರ್ಚುತೆ ತನ್ನಧರಮನೇ
ಬಿರ್ಚುವವೊಲ್ ಕಾಂತದಂತಪೀಡೆಯಿನೆತ್ತಂ |
ವೈರಿವಧೂಜನದಧರೋ
ತ್ಕರಮಂ ಸಾರ್ಚಿರ್ಪನೀತನೆಂತುಂ ರಣದೊಳ್ ||

---

114 ನೀವೀ = ಸೀರೆಯ ಒಳಗಂಟು.

115 ಎರಡನ್ನು ಹೋಲಿಸುವಾಗ ಒಂದಕ್ಕಿಂತ ಇನ್ನೊಂದು ಹೆಚ್ಚೆಂದು ಚಮತ್ಕಾರಕವಾಗಿ ವರ್ಣಿಸುವಲ್ಲಿ 'ವ್ಯತಿರೇಕ' ಹುಟ್ಟುತ್ತದೆ.

ಇಲ್ಲಿರುವ ವಿರೋಧಾಲಂಕಾರದಿಂದ 'ತುಟಿಯನ್ನು ಕಚ್ಚಿದ ಸಮಕಾಲದಲ್ಲಿಯೇ ಶತ್ರುಗಳು ಹತರಾದರು' ಎಂಬ ತುಲ್ಯಯೋಗಿತಾಲಂಕಾರವೂ, 'ನನಗೆ ಗಾಯ ವಾದರೂ ಪರರ ಗಾಯವನ್ನಳಿಸಬೇಕೆಂಬ ಉದ್ದೇಶ 'ವಿತ್ತೆಂಬ ಉತ್ಪ್ರೇಕ್ಷಾಲಂಕಾರವೂ ವ್ಯಂಗ್ಯ. ಈ ಮೇಲಿನ ಉದಾಹರಣೆಗಳಲ್ಲೆಲ್ಲ ವ್ಯಂಜಕವು 'ಸ್ವತಃ ಸಂಭವಿ.'

೫. ಕೈಲಾಸಸ್ಯ ಪ್ರಥಮಶಿಖರೇ ವೇಣುಸಂಮೂರ್ಛನಾಭಿಃ
ಶ್ರುತ್ವಾ ಕೀರ್ತಿಂ ವಿಬುಧರಮಣೀಗೀಯಮಾನಾಂ ಯದೀಯಾಮ್ ।
ಸ್ರಸ್ತಾಪಾಂಗಾಸ್ಸರಸಬಿಸಿನೀಕಾಂಡಸಂಜಾತಶಂಕಾಃ
ದಿಙ್ಮಾತಙ್ಗಾಶ್ಶ್ರವಣಪುಲಿನೇ ಹಸ್ತಮಾವರ್ತಯನ್ತಿ ॥

ಕೈಲಾಸಾದ್ರಿಯ ತುಂಗಶೃಂಗದೊಳಗಂ ವೇಣ್ವಾದಿಗೀತಂಗಳಿಂ
ಕೇಳುತ್ತುಂ ತವ ಕೀರ್ತಿಯಾ ಸುರವಧೂಪ್ರೋದ್ಗೀಯಮಾನಾಂಶಮಂ ।
ಲೋಲಾಪಾಂಗದಿನೆಲ್ಲ ದಿಗ್ಗಜಗಳುಂ ದಲ್ ಪದ್ಮಿನೀಕಾಂಡಮೆಂ-
ದಾರೈದೆತ್ತುವುವಂತದಂ ಕರಗಳಿಂ ತಂತಮ್ಮ ಶ್ರೋತ್ರಾಂತದೊಳ್ ॥

ಇಲ್ಲಿ 'ಬುದ್ಧಿಯಿಲ್ಲದ ಮೃಗಗಳಲ್ಲೂ ಕೂಡ ಹೀಗೆ ಬುದ್ಧಿಯನ್ನು ಹುಟ್ಟಿಸುತ್ತಾ ನಿನ್ನ ಕೀರ್ತಿಯು ಚಮತ್ಕಾರವನ್ನುಂಟುಮಾಡುತ್ತದೆ'ಯೆಂಬ ವಸ್ತು ವ್ಯಂಗ್ಯ.

೬. ಕೇಸೇಸು ಬಲಾಮೋಡಿಅ ತೇಣ ಸಮರಮ್ಮಿ ಜಅಸಿರೀ ಗಹಿಆ ।
ಜಹ ಕಂದರಾಹಿಂ ವಿಹುರಾ ತಸ್ಸ ದಿಢಂ ಕಂಠಅಮ್ಮಿ ಸಂಠವಿಆ ॥

ಬಲದಿಂ ಕೇಶಂಗೊಳ್ಳುತೆ
ಸೆಳೆದಂ ಜಯಸಿರಿಯನಾತನಂತಿರೆ ರಣದೊಳ್ ।
ಸಲೆ ಗುಹೆಗಳ್ ರಿಪುಕಂಠಂ
ಗಳನೊಡನೆಯೆ ತಬ್ಬಿ ಮುದ್ದಿಪಂತಿರಲಾಗಳ್ ॥

ಇಲ್ಲಿ 'ಕೇಶಗ್ರಹಣದ ದರ್ಶನದಿಂದ ಕಾಮೋದ್ರೇಕಗೊಂಡ ಗುಹೆಗಳು 'ರಿಪು ಜನರ ಕಂಠಾಲಿಂಗನ ಮಾಡುವಂತಿವೆ'ಯೆಂಬಲ್ಲಿ ಉತ್ಪ್ರೇಕ್ಷಾಲಂಕಾರವೂ, 'ಸಂಗ್ರಾಮದಲ್ಲಿ ಒಂದು ಕಡೆ ಅವನ ವಿಜಯವನ್ನು ಕಂಡ ರಿಪುಗಳು ಪಲಾಯನ ಮಾಡಿ ಗುಹೆಗಳಲ್ಲಡಗಿರುವರು' ಎಂಬಲ್ಲಿ ಕಾವ್ಯಲಿಂಗಾಲಂಕಾರವೂ, 'ರಿಪುಗಳು ನಿಜವಾಗಿಯೂ ಪಲಾಯನ ಮಾಡಿಲ್ಲ; ಆದರೆ ರಾಜನ ಕೈಯಿಂದ ಸೋಲು ಅವರಿಗೆ ಆಗಬಾರದೆಂದು ಗುಹೆಗಳೇ ಅವರನ್ನು ಹೊರಕ್ಕೆ ಬಿಡುವುದಿಲ್ಲ' ಎಂಬಲ್ಲಿ ಅಪಹ್ನುತಿ ಅಲಂಕಾರವೂ ವ್ಯಂಗ್ಯ.

೭. ಗಾಢಾಲಿಂಗಣರಹಸುಜ್ಜಅಮ್ಮಿ ದಇಏ ಲಹು ಸಮೋಸರಇ।
ಮಾಣಂಸಿಣೀಣಂ ಮಾಣೋ ಪೀಲಣಭೀಅವ್ವ ಹಿಅಆಹಿ ॥

ಇನಿಯಂ ಗಾಢಾಲಿಂಗನ-
ಕನುವಾಗಲ್ ರಭಸದಿಂದೆ[116] ಮಾನಿನಿಯರ್ಗಂ।
ಮನದಿಂದಂ ಮಾನಂ ಪೀ-
ಡನಭೀತಿಯಿನೆಂಬ ಮಾಳ್ಕೆಯಿಂ ಪೊರಮಡುಗುಂ ॥

ಇಲ್ಲಿರುವ ಉತ್ಪ್ರೇಕ್ಷೆಯಿಂದ 'ರಮಣಿಯರ ಪ್ರತ್ಯಾಲಿಂಗನಾದಿಗಳು ವಿಜೃಂಭಿಸುತ್ತವೆ'ಎಂಬ ವಸ್ತು ವ್ಯಂಗ್ಯ.

೮. ಜಾ ಠೇರಂ ವ ಹಸನ್ತೀ ಕಇವಅಣಾಂಬುರುಹಬದ್ಧವಿಣಿವೇಸಾ।
ದಾವೇಇ ಭುಅಣಮಂಡಲಮಣ್ಣಂ ಪಿಅ ಜಅಇ ಸಾ ವಾಣೀ ॥[117]

ಸ್ಥವಿರನ ನಗುವಂತಿರೆ ತಾಂ
ಕವಿವದನಾಂಭೋಜಬದ್ಧಸದ್ಮಳ್ ಮುದದಿಂ।
ಭುವನಮಶೇಷಂ ಬೇರಂ-
ಬವೊಲನಿಶಂ ತೋರಲಾರ್ಪ ವಾಣಿಗೆ ವಿಜಯಂ ॥

ಇಲ್ಲಿ ಉತ್ಪ್ರೇಕ್ಷೆಯಿಂದ 'ಚಮತ್ಕಾರೈಕಕಾರಣವೂ ಹೊಸಹೊಸದೂ ಆದ ಜಗತ್ತನ್ನು ಜಲಾಸನವಿಲ್ಲದೆಯೇ ವಾಣಿ ನಿರ್ಮಿಸುತ್ತಾಳೆ' ಎಂಬ ವ್ಯತಿರೇಕಾಲಂಕಾರ ವ್ಯಂಗ್ಯ. ಮೇಲಿನ ನಾಲ್ಕು ಉದಾಹರಣೆಗಳಲ್ಲೂ ವ್ಯಂಜಕವು ಕವಿಯ ಕಲ್ಪನೆಯಲ್ಲಿ (ಪ್ರೌಢೋಕ್ತಿಯಲ್ಲಿ) ಮಾತ್ರ ಸಿದ್ಧವಾದುದು.

೯. ಜೇ ಲಂಕಾಗಿರಿಮೇಹಲಾಸು ಖಲಿಆ ಸಂಭೋಅಖಿಣ್ಣೋರಈ
ಫಾರುಪ್ಫುಲ್ಲಫಣಾವಲೀಕವಲಣೇ ಪತ್ತಾ ದರಿದ್ದತ್ತಣಮ್।
ತೇ ಏಣ್ಹಿಂ ಮಲಆಣಿಲಾ ವಿರಹಿಣೀಣೀಸಾಸಸಂಪಕ್ಕಿಣೋ
ಜಾದಾ ಝತ್ತಿ ಸಿಸುತ್ತಣೇವಿ ಬಹಲಾ ತಾರುಣ್ಣಪುಣ್ಣಾ ವಿಅ ॥[118]

---

[116] ರಭಸವೆಂದರೆ ವೇಗ ಮತ್ತು ಹರ್ಷ. 'ರಭಸೋ ವೇಗಹರ್ಷಯೋಃ'—ವಿಶ್ವಕೋಶ.

[117] ಈ ಪದ್ಯವು ಭಾಸಮಹಾಕವಿಯದೆಂದು ಸಾಯಣಾಚಾರ್ಯರ 'ಅಲಂಕಾರ ಮಹೋದಧಿ'ಯೆಂಬ ಗ್ರಂಥದಲ್ಲಿ ಬರೆದಿದೆ.

[118] ರಾಜಶೇಖರಕೃತ ಕರ್ಪೂರಮಂಜರೀಸಟ್ಟಕದ ಪ್ರಥಮಾಂಕದಲ್ಲಿ ಬರುವ ಪದ್ಯ. ನಾಯಿಕೆಯ ಸಖಿ ಮಾಡುವ ವಸಂತವರ್ಣನೆಯಿದು

ಆ ಲಂಕಾಗಿರಿಸಾನುವಲ್ಲಿ ಡಕುತುಂ ಸಂಭೋಗಖಿನ್ನೋರಗೀ-
ಸ್ಫಾರೋತ್ಫುಲ್ಲಫಣಾವಳೀಕವಳದಿಂ ಪ್ರಾಪ್ತಂ ದರಿದ್ರತ್ವಮಂ|
ಇಂತೀಗಳ್ ಮಳಯಾನಿಳಂ ವಿರಹಿಣೀನಿಶ್ವಾಸ ಸಂಪರ್ಕದಿಂ
ಜಾತಂ ಮತ್ತೆ ಮಹಾಧಿಕಂ ಶಿಶುವೆ ಮೇಣ್ ತಾರುಣ್ಯಪೂರ್ಣೋಪಮಂ ‖

ಇಲ್ಲಿ 'ನಿಶ್ವಾಸಗಳಿಂದ ಮೈದುಂಬಿದ ಮಲಯಾನಿಲವೇನನ್ನು ತಾನೆ ಮಾಡುವು ದಿಲ್ಲ'ವೆಂಬ ವಸ್ತು ವರ್ಣಿತವಸ್ತುವಿನಿಂದ ವ್ಯಂಗ್ಯ.

೧೦. ಸಹಿ ವಿರಇಊಣ ಮಾಣಸ್ಸ ಮಜ್ಝ ಧೀರತ್ತಣೇಣ ಆಸಾಸಮ್ |
ಪಿಅದಂಸಣವಿಹಲಂಖಲಖಣಮ್ಮಿ ಸಹಸತ್ತಿ ತೇಣ ಓಸರಿಅಮ್ ‖

ಕಡುಧೈರ್ಯದಿನಾಂ ಮಾನಂ-
ಬಿಡಿದಿರ್ದೆಂ ಸಖಿಯೆ ದುಷ್ಕರಂ ತಾನೆನೆಯುಂ|
ತಡೆಯದೆ ನೋಡೌ ಪರಿದುದು
ನಡೆ ರಮಣಂ ಕಾಣಲಂದು ತವಕದ ಚಣದೊಳ್ ‖

ಇಲ್ಲಿ ವಸ್ತುವಿನಿಂದ 'ಪ್ರಾರ್ಥನೆಯನ್ನು ಆತ ಮಾಡದಿದ್ದರೂ ಪ್ರಸನ್ನಳಾದೆ' ನೆಂಬ ವಿಭಾವನಾಲಂಕಾರ ಅಥವಾ 'ಪ್ರಿಯದರ್ಶನದ ಸೌಭಾಗ್ಯಬಲವು ಧೈರ್ಯ ದಿಂದಲೂ ಸಹಿಸಲಶಕ್ಯ'ವೆಂಬ ಉತ್ಪ್ರೇಕ್ಷಾಲಂಕಾರ ವ್ಯಂಗ್ಯ.

೧೧. ಓಲ್ಲೋಲ್ಲಕರಅರಅಣಕ್ಖಏಹಿಂ ತುಹ ಲೋಅಣೇಸು ಮಹ ದಿಣ್ಣಮ್ |
ರತ್ತಂಸುಅಂ ಪಸಾಓ ಕೋವೇಣ ಪುಣೋ ಇಮೇ ಣ ಅಕ್ಕಮಿಅ ‖

ಕರಜರದನಕ್ಷತಂಗಳ್
ದೊರೆಕೊಂಡಿರೆ ಪಸಿಯವಾಗಿ ನಿನ್ನಯ ಕಣ್ಣೊಳ್ |
ವರರಕ್ತಾಂಶುಕಮೆನ್ನದು
ಕರಮಪ್ಪುದು ಮೆಚ್ಚು ಕುಪಿತಮಲ್ಲತ್ಕಕ್ಷಿಯುಗಂ ‖

ಇಲ್ಲಿ 'ಕುಪಿತಲೋಚನಗಳನ್ನೇಕೆ ತಳೆದಿರುವೆ' ಎಂಬ ಉತ್ತರಾಲಂಕಾರದಿಂದ 'ಆರ್ದ್ರನಖಕ್ಷತಗಳನ್ನು ಬಚ್ಚಿಡುತ್ತಿರುವುದಷ್ಟೇ ಅಲ್ಲ; ಅವಕ್ಕೆ ನಾನು ಪ್ರಸಾದ ಪಾತ್ರಳೂ ಆದೆ'ನೆಂಬ ವಸ್ತು ವ್ಯಂಗ್ಯ.

೧೨. ಮಹಿಲಾಸಹಸ್ಸಭರಿಏ ತುಹ ಹಿಅಏ ಸುಹಅ ಸಾ ಅಮಾಅನ್ತೀ ।
ಅನುದಿನಮಣಣ್ಣಕಮ್ಮಾ ಅಂಗಂ ತಣುಅಂ ವಿ ತಣುಏಇ ॥[119]

ವನಿತಾಸಹಸ್ರಮಯಮೆನೆ
ನಿನತ್ತೆರ್ದೆಯೊಳ್ ತಾಣಮಿಲ್ಲದಾಗಿರ್ಪುದರಿಂ- ।
ದನುದಿಸಮವಳುಂ ಸುಭಗನೆ
ತನು ಕೃಶಮೆನೆಯುಂ ಮಗುಳ್ದು ಸವೆಯಿಸುತಿರ್ಪಳ್ ॥

ಇಲ್ಲಿ ಕಾವ್ಯಲಿಂಗಾಲಂಕಾರದಿಂದ 'ಕೃಶಶರೀರವನ್ನು ಎಷ್ಟೆಷ್ಟು ಸವೆಸಿದರೂ ನಿನ್ನ ಹೃದಯದಲ್ಲಿ ಹಿಡಿಸಲಾರದಿದ್ದಾಳೆ' ಎಂಬ ವಿಶೇಷೋಕ್ತಿ ಅಲಂಕಾರ ವ್ಯಂಗ್ಯ. ಈ ಮೇಲಿನ ನಾಲ್ಕು ಉದಾಹರಣೆಗಳಲ್ಲೂ ಕವಿನಿಬದ್ಧ ಪ್ರೌಢೋಕ್ತಿಯಲ್ಲಿ ಮಾತ್ರ ಲಬ್ಧಸ್ವರೂಪವುಳ್ಳುದು ವ್ಯಂಜಕವಾಗಿದೆ. ಹೀಗೆ ಹನ್ನೆರಡು ಪ್ರಕಾರಗಳು.

ಶಬ್ದಾರ್ಥೋಭಯಭೂರೇಕಃ ॥ ೧೮೮ ॥

ಶಬ್ದಾರ್ಥೋಭಯಶಕ್ತಿಮೂಲವಾದ ಧ್ವನಿಯು ಒಂದೇ ಬಗೆಯಾಗಿರುತ್ತದೆ. ಉದಾಹರಣೆ :—

ಅತಂದ್ರಚಂದ್ರಾಭರಣಾ ಸಮುದ್ದೀಪಿತಮನ್ಮಥಾ ।
ತಾರಕಾತರಲಾ ಶ್ಯಾಮಾ ಸಾನಂದಂ ನ ಕರೋತಿ ಕಮ್ ॥

ಹೊಳೆವ ಚಂದ್ರನಿಂದ ಭೂಷಿತಳೂ, ಕಾಮೋದ್ದೀಪನಕಾರಿಣಿಯೂ, ತರಲ ನಕ್ಷತ್ರಶೋಭಿನಿಯೂ ಆದ ರಜನಿಯು ಯಾರನ್ನು ತಾನೆ ಆನಂದಗೊಳಿಸುವುದಿಲ್ಲ?

ಮತ್ತು

ಉತ್ಸಾಹಶಾಲಿನಿಯೂ, ಚಂದ್ರಾಕೃತಿಯ ತಿಲಕವನ್ನಿಟ್ಟವಳೂ, ತನ್ನ ಹರ್ಷ ದಿಂದ ಕಾಮವನ್ನು ಕೆರಳಿಸುವವಳೂ, ಚಂಚಲವಾದ ಕಣ್ಣಾಲಿಗಳುಳ್ಳವಳೂ ಆದ ಸುಂದರಿಯು ಯಾರನ್ನು ತಾನೆ ಆನಂದಗೊಳಿಸುವುದಿಲ್ಲ?
ಇಲ್ಲಿ ಉಪಮಾಲಂಕಾರ ವ್ಯಂಗ್ಯ.

ಭೇದಾ ಅಷ್ಟಾದಶಾಸ್ಯ ತತ್ ॥ ೧೮d ॥

ಹೀಗೆ ಇದರ ಭೇದಗಳು ಹದಿನೆಂಟು.

[119] ಹಾಲ, ಗಾಥಾಸಪ್ತಶತಿ, iv.

ಇದರ ಎಂದರೆ ಧ್ವನಿಯ ಎಂದರ್ಥ.[120]

ರಸಾದೀನಾಮನಂತತ್ವಾತ್ ಭೇದ ಏಕೋ ಹಿ ಗಣ್ಯತೇ ॥ ೧೯*ab* ॥

ರಸಾದಿಗಳು ಅನಂತವಾದುದರಿಂದ ಅವುಗಳನ್ನು ಒಂದೇ ಭೇದವೆಂದು ಪರಿಗಣಿಸಲಾಗುತ್ತದೆ.

ಅನಂತವಾಗುವುದು ಹೇಗೆಂದರೆ—ಮೊದಲು ರಸಗಳು ಒಂಭತ್ತು; ಅವುಗಳಲ್ಲಿ ಶೃಂಗಾರವೊಂದರಲ್ಲೇ ಎರಡು ಭೇದಗಳಿವೆ:–(೧) ಸಂಭೋಗ ಮತ್ತು (೨) ವಿಪ್ರಲಂಭ. 'ಸಂಭೋಗ ಶೃಂಗಾರವೇ ಪರಸ್ಪರ ದರ್ಶನ, ಆಲಿಂಗನ, ಪರಿಚುಂಬನ, ಮುಂತಾದ ಭೇದಗಳನ್ನೂ ಕುಸುಮೋಚ್ಚಯ, ಜಲಕ್ರೀಡೆ, ಸೂರ್ಯಾಸ್ತ, ಚಂದ್ರೋದಯ, ವಸಂತಾದಿ ಷಡೃತುವರ್ಣನ, ಮೊದಲಾದ ಅನೇಕ (ಉದ್ದೀಪಕ) ಭೇದಗಳನ್ನೂ ಒಳಗೊಳ್ಳುತ್ತದೆ. ವಿಪ್ರಲಂಭದಲ್ಲಿಯೂ ಅಭಿಲಾಷೆಯೇ ಮುಂತಾದ ಪ್ರಭೇದಗಳನ್ನು

[120] ಹೇಗೆಂದರೆ—



ನಿರೂಪಿಸಲಾಗಿದೆ. ಅಲ್ಲದೆ ಸಂಭೋಗ, ವಿಪ್ರಲಂಭಗಳೆರಡಕ್ಕೂ ಮತ್ತೆ ವಿಭಾವ, ಅನುಭಾವ, ವ್ಯಭಿಚಾರಿಗಳ ಮೂಲಕ ಬಗೆಬಗೆಯ ವೈಚಿತ್ರ್ಯವೊದಗುತ್ತದೆ; ಆ ಒಂದೊಂದು ಬಗೆಯಲ್ಲಿಯೂ ನಾಯಕ, ನಾಯಿಕೆಯರು ಉತ್ತಮ, ಅಧಮ, ಇಲ್ಲವೆ ಮಧ್ಯಮ ಪ್ರಕೃತಿಗಳಾಗಬಹುದು; ಈ ಪ್ರಭೇದಗಳಲ್ಲೂ ಮತ್ತೆ ದೇಶ, ಕಾಲ, ಅವಸ್ಥೆ, ಮೊದಲಾದುವುಗಳಿಂದ ಅವಾಂತರ ಭೇದಗಳುಂಟಾಗುತ್ತವೆ. ಹೀಗೆ ಒಂದೇ ಶೃಂಗಾರರಸದ ಎಲ್ಲ ಭೇದಗಳನ್ನೂ ಲೆಕ್ಕಮಾಡಿ ಮುಗಿಸುವುದು ದುಷ್ಕರವಾಗಿಬಿಡುವಾಗ, ಎಲ್ಲ ರಸಗಳ ಸಂಖ್ಯೆಯನ್ನೂ ಹೇಳುವುದು ಎಂತು? ಆದುದರಿಂದ ಈ ಅನಂತ ರಸಭೇದಗಳಿಗೆಲ್ಲ ಸಮಾನಧರ್ಮವಾದ ಅಸಂಲಕ್ಷ್ಯ ಕ್ರಮತ್ವವನ್ನಾಶ್ರಯಿಸಿ ರಸಾದಿಧ್ವನಿಯು ಒಂದೇ ಬಗೆಯೆಂದು ಪರಿಗಣಿಸಲಾಗಿದೆ.

ವಾಕ್ಯೇ ದ್ವ್ಯುತ್ಥಃ

ಎರಡರಿಂದಲೂ ಹುಟ್ಟುವ ಧ್ವನಿ ವಾಕ್ಯದಲ್ಲಿ ಮಾತ್ರ ಬರುತ್ತದೆ.

'ಎರಡರಿಂದಲೂ ಹುಟ್ಟುವ ಧ್ವನಿ'ಯೆಂದರೆ ಶಬ್ದಾರ್ಥೋಭಯಶಕ್ತಿ ಮೂಲವಾದ ಧ್ವನಿ.

ಪದೇಽಪ್ಯನ್ಯೇ ॥ ೧೯೮ ॥

ಉಳಿದ ಹದಿನೇಳು ಬಗೆಗಳು ಪದದಲ್ಲಿಯೂ ಬರುತ್ತವೆ. 'ಪದದಲ್ಲಿಯೂ' ಎನ್ನುವುದರಿಂದ, ವಾಕ್ಯದಲ್ಲಿಯೂ ಬರುವುವೆಂದಾಯಿತು. ಒಂದೇ ಅವಯವದಲ್ಲಿರುವ ಆಭರಣದಿಂದಲೂ ಶೋಭಿಸುವ ಕಾಮಿನಿಯಂತೆ ಪದಪ್ರಕಾಶ್ಯವಾದ ವ್ಯಂಗ್ಯದಿಂದಲೂ ವಾಕ್ಯವ್ಯಂಗ್ಯವಾದ ವಾಣಿಯು ಶೋಭಿಸುತ್ತಾಳೆ. ಪದಪ್ರಕಾಶ್ಯವಾದ ವ್ಯಂಗ್ಯಕ್ಕೆ ಕ್ರಮವಾಗಿ ಉದಾಹರಣೆಗಳಿವು[121] :—

೧. ಯಸ್ಯ ಮಿತ್ರಾಣಿ ಮಿತ್ರಾಣಿ ಶತ್ರವಶ್ಶತ್ರವಸ್ತಥಾ।
ಅನುಕಂಪ್ಯೋಽನುಕಂಪ್ಯಶ್ಚ ಸ ಜಾತಃ ಸ ಚ ಜೀವತಿ ॥

ಮಿತ್ರರದಾವನ ಮಿತ್ರರ್
ಶತ್ರುಗಳುಂ ಶತ್ರುಜನರೆ ಮತ್ತಂ ನೋಡಲ್ ।
ಅನುಕಂಪ್ಯನೆ ಮೇಣನುಕಂ-
ಪ್ಯನವಂ ಗಡ ಜಾತನವನೆ ಜೀವಿಪನೆಂಬೆಂ ॥

---

[121] ಇದೇ ಧ್ವನಿಪ್ರಭೇದಗಳಿಗೆ ಈಗಾಗಲೇ ಕೊಟ್ಟಿರುವ ಉದಾಹರಣೆಗಳು ವಾಕ್ಯಪ್ರಕಾಶ್ಯವೆಂದು ತಿಳಿಯಬೇಕು. ಮುಂದೆ ಬರೆಯುವ ಉದಾಹರಣೆಗಳೆಲ್ಲ ಪದಪ್ರಕಾಶ್ಯಗಳು. ಮೇಲಿನ ಟಿಪ್ಪಣಿಯಲ್ಲಿ ಕಾಣಿಸಿರುವ ಸಂಖ್ಯಾನುಕ್ರಮದಲ್ಲಿಯೇ ಈ ಉದಾಹರಣೆಗಳನ್ನು ಕೊಡಲಾಗಿದೆ.

ಇಲ್ಲಿ ಎರಡನೆಯ 'ಮಿತ್ರ', 'ಶತ್ರು,' 'ಅನುಕಂಪ್ಯ' ಶಬ್ದಗಳು ಕ್ರಮವಾಗಿ ವಿಶ್ವಾಸಪಾತ್ರತ್ವ, ನಿಗ್ರಹಯೋಗ್ಯತ್ವ ಮತ್ತು ಸ್ನೇಹಪಾತ್ರತ್ವ, ಗುಣಗಳುಳ್ಳ ಅರ್ಥಾಂತರಗಳಲ್ಲಿ ಸಂಕ್ರಮಿತವಾಚ್ಯ (=ಪರ್ಯವಸನ್ನಾರ್ಥ) ಗಳಾಗಿವೆ.

೨. ಖಲವ್ವವಹಾರಾ ದೀಸನ್ತಿ ದಾರುಣಾ ಜಹವಿ ತಹವಿ ಧೀರಾಣಮ್ ।
ಹಿಅಅವಅಸ್ಸಬಹುಮಅ ಣ ಹು ವವಸಾಅ ವಿಮುಜ್ಝನ್ತಿ ॥

ಖಳರಾಚಾರಂ ಕ್ರೂರಂ
ಗಡಮೆಂದೊಡಮುತ್ತಮಾತ್ಮರಪ್ಪರ ಚರಿತಂ ।
ಹೃದಯವಯಸ್ಯಾನುಮತಂ
ಸುದೃಢಂ ಮತಿಗೆಟ್ಟುಪೋಗದೆಂಬುದು ಸಹಜಂ ॥

ಇಲ್ಲಿ 'ಮತಿಗೆಟ್ಟುಪೋಗದು' ಎಂಬುದು.

೩. (*a*) ಲಾವಣ್ಯಂ ತದಸೌ ಕಾಂತಿಸ್ತದ್ರೂಪಂ ಸ ವಚಃಕ್ರಮಃ ।
ತದಾ ಸುಧಾಸ್ಪದಮಭೂದಧುನಾ ತು ಜ್ವರೋಪಮಮ್ ॥

ಆ ಲಾವಣ್ಯಂ ಮೇಣಾ
ಕಾಂತಿಯುಮಾ ವಾಗ್ವಿಲಾಸಮೆಲ್ಲಮುಮಾಗಳ್ ।
ತಾನಮೃತೋಪಮಮಾದುದು
ಜಾನಿಸೆ ಮೇಣೀಗಳೆಲ್ಲಮುಂ ಜ್ವರಸದೃಶಂ ॥

ಇಲ್ಲಿ 'ಆ' ಮೊದಲಾದ ಪದಗಳು ಅನುಭವೈಕವೇದ್ಯವಾದ ಅರ್ಥಗಳನ್ನು ಸೂಚಿಸುತ್ತವೆ. ಅಥವಾ—

೩. (*b*) ಮುಗ್ಧೇ ಮುಗ್ಧತಯೈವ ನೇತುಮಖಿಲಃ ಕಾಲಃ ಕಿಮಾರಭ್ಯತೇ
ಮಾನಂ ಧತ್ಸ್ವ ಧೃತಿಂ ಬಧಾನ ಋಜುತಾಂ ದೂರೇ ಕುರು ಪ್ರೇಯಸಿ ।
ಸಖ್ಯೈವಂ ಪ್ರತಿಬೋಧಿತಾ ಪ್ರತಿವಚಸ್ತಾಮಾಹ ಭೀತಾನನಾ
ನೀಚೈಶ್ಶಂಸ ಹೃದಿ ಸ್ಥಿತೋ ಹಿ ನನು ಮೇ ಪ್ರಾಣೇಶ್ವರಃ ಶ್ರೋಷ್ಯತಿ ॥[122]

[122] ಅಮರುಶತಕ.

ಕೆಳದೀ ನೂಂಕುವೆಯೇನಣಂ ಸಮಯಮಂ ನೀನಿಂತು ಮುಗ್ಧತ್ವದೊಳ್
ತಳೆಯೌ ಮಾನಮನಪ್ಪುಕಯ್ ಧೃತಿಯುಮಂ ಮುಗ್ಧತ್ವಮಂ ಬಿಟ್ಟಿರಾ|
ಪತಿಯೊಳ್ ಮೇಣೆನೆ ದೂತಿ ಮಾರ್ನುಡಿದಳಾ ಭೀತಾಸ್ಯೆಯಿಂತೀ ತೆರಂ—
'ನುಡಿ ನೀಂ ಮೆಲ್ಲನೆಯೆನ್ನ ಹೃದ್ಗತನಿವಂ ಪ್ರಾಣೇಶ್ವರಂ ಕೇಳ್ದಪಂ' ||

ಇಲ್ಲಿ 'ಭೀತಾಸ್ಯೆ'ಯೆಂಬ ಪದ. ಇದರಿಂದ ಮೆಲ್ಲನೆ ಹೇಳುವುದರ ಯುಕ್ತತೆ ಸೂಚಿತವಾಗುತ್ತದೆ. ಭಾವಾದಿಗಳು ಪದಪ್ರಕಾಶ್ಯವಾದಾಗ ಹೆಚ್ಚಿನ ಸೌಂದರ್ಯ ವಿರದ ಕಾರಣ ಅವನ್ನು ಉದಾಹರಿಸಿಲ್ಲ.

೪. ರುಧಿರವಿಸರಪ್ರಸಾಧಿತಕರವಾಲಕರಾಲರುಚಿರಭುಜಪರಿಘಃ|
ಝಟಿತಿ ಭ್ರುಕುಟಿವಿಟಂಕಿತಲಲಾಟಪಟ್ಟೋ ವಿಭಾಸಿ ನೃಪ ಭೀಮ ||

ಉರುರುಧಿರವಿಸರಶೋಭಿತ
ಕರಾಲಕರವಾಲರುಚಿರಗುರುಭುಜಪರಿಘಂ|
ಭರದಿಂ ಭ್ರುಕುಟಿವಿಟಂಕಿತ
ವರಭಾಲಂ ನೀನೆ ಭೀಮನೆಂಬೆಂ ನೃಪನೇ ||

ಇಲ್ಲಿ ಭೀಷಣನಾದ ಪ್ರಕೃತ ರಾಜನಿಗೆ ಭೀಮಸೇನನು ಉಪಮಾನ.

೫. ಭುಕ್ತಿಮುಕ್ತಿಕೃದೇಕಾಂತಸಮಾದೇಶನತತ್ಪರಃ|
ಕಸ್ಯ ನಾನಂದನಿಸ್ಯನ್ದಂ ವಿದಧಾತಿ ಸದಾಗಮಃ ||

ಭುಕ್ತಿಯೊಳಂ ಮುಕ್ತಿಯೊಳಂ
ಏಕಾಂತಸಮೋಪದೇಶ ತತ್ಪರಮಪ್ಪಾ|
ಮಹದಾಗಮಮೆಂಬುದು ಮೇಣ್
ಮಹದಾನಂದಾನುಭೂತಿಯಂ ಬಳೆಯಿಸುಗುಂ ||

ಇಲ್ಲಿ ನಾಯಿಕೆಯೊಬ್ಬಳು ಸಂಕೇತನಿರ್ದೇಶಮಾಡುವ ಉಪಪತಿಗೆ ಹೀಗೆ ಪದಗಳು ನೇರವಾಗಿಯೇ ಅನ್ವಯಿಸುವಂತೆ ಆಡುತ್ತಾಳೆ.

೬. ಸಾಯಂ ಸ್ನಾನಮುಪಾಸಿತಂ ಮಲಯಜೇನಾಂಗಂ ಸಮಾಲೇಪಿತಂ
ಯಾತೋಽಸ್ತಾಚಲಮೌಲಿಮಂಬರಮಣಿರ್ವಿಸ್ರಬ್ಧಮತ್ರಾಗತಿಃ|
ಆಶ್ಚರ್ಯಂ ತವ ಸೌಕುಮಾರ್ಯಮಭಿತಃ ಕ್ಲಾಂತಾಸಿ ಯೇನಾಧುನಾ
ನೇತ್ರದ್ವಂದ್ವನಿಮೀಲನವ್ಯತಿಕರಂ ಶಕ್ನೋತಿ ತೇ ನಾಸಿತುಮ್ ||

ಸ್ನಾನಂ ಸಂಜೆಯೊಳಂಗರಾಗರಚಿತಂ ಗಾಢಾಂಗಲೇಪಂ ವಲಂ
ತಾನಸ್ರಾಸ್ತ್ರಚಲಮ್ಮೈದಿದಂ ದಿನಪನುಂ; ನಿನ್ನಾಗಮಂ ಧೈರ್ಯದಿಂ |
ದಾರ್ಢ್ಯಂ ಗಡ ಸೌಕುಮಾರ್ಯಮತುಲಾಯಾಸಂಬಡುತ್ತಿರ್ಪುದೇಂ
ನೇತ್ರದ್ವಂದ್ವಮಿದೀಗ ಮುಚ್ಚದೆ ಸಮಂತೆಂತುಂ ನಿಲಲ್ಕಾರದಾ ||

ಇಲ್ಲಿ ವರ್ಣಿತವಸ್ತುವಿನಿಂದ 'ಪರಪುರುಷನ ಸಹವಾಸದಲ್ಲಿ ಆಯಾಸಪಟ್ಟಿರುವೆ' ಯೆಂಬ ವಸ್ತುವು 'ಇದೀಗ' ಎಂಬ ಪದದ ಮೂಲಕ ಸೂಚಿತವಾಗಿದೆ.

೭. ತದಪ್ರಾಪ್ತಿಮಹಾದುಃಖವಿಲೀನಾಶೇಷಪಾತಕಾ |
ತಚ್ಚಿಂತಾವಿಪುಲಾಹ್ಲಾದಕ್ಷೀಣಪುಣ್ಯಚಯಾ ತಥಾ ||
ಚಿಂತಯನ್ತೀ ಜಗತ್ಸೂತಿಂ ಪರಬ್ರಹ್ಮಸ್ವರೂಪಿಣಮ್ |
ನಿರುಚ್ಛ್ವಾಸತಯಾ ಮುಕ್ತಿಂ ಗತಾನ್ಯಾ ಗೋಪಕನ್ಯಕಾ ||[128]

ಆತನ ವಿಯೋಗಮೆಂಬಾ
ಸಂತತಬಹುದುಃಖದಿಂದೆ ಪರಿಯಲಶೇಷಂ |
ಪಾತಕಮಾ ಸುಕೃತಚಯಂ
ಆತನ ಚಿಂತಾಭಿಜಾತಹರ್ಷದಿನಳಿಯಲ್ ||

ಚಿಂತಿಸುತುಂ ಜಗದೀಶನ
ನಂತಾ ಪರಮಾತ್ಮರೂಪನಂ ಗೋಪಿಕೆಯುಂ |
ಅಂತ್ಯದೊಳುಸಿರಳಿಯಲ್ ತಾಂ
ಸಂತಾಪವಿದೂರಮುಕ್ತಿಯಂ ಮೇಣ್ ಪಡೆದಳ್ ||

ಇಲ್ಲಿ 'ಜನ್ಮಸಹಸ್ರಗಳಲ್ಲಿ ಅನುಭೋಗಿಸಬೇಕಾದಂತಹ ದುಷ್ಕೃತಸುಕೃತ ಫಲಗಳೆಲ್ಲ ವಿಯೋಗದುಃಖ ಮತ್ತು ಚಿಂತಾಹ್ಲಾದಗಳ ಮೂಲಕ ಅನುಭವಿಸಿ ಮುಗಿದುವು' ಎಂದಿದೆ. ಏವಂಚ, 'ಅಶೇಷ', 'ಚಯ' ಈ ಎರಡು ಪದಗಳ ಮೂಲಕ ಎರಡು ಅತಿಶಯೋಕ್ತಿಗಳು ವ್ಯಂಗ್ಯ.

೮. ಕ್ಷಣದಾಸಾವಕ್ಷಣದಾ ವನಮವನಂ ವ್ಯಸನಮವ್ಯಸನಮ್ |
ಬತ ವೀರ ತವ ದ್ವಿಷತಾಂ ಪರಾಙ್ಮುಖೇ ತ್ವಯಿ ಪರಾಙ್ಮುಖಂ ಸರ್ವಮ್ ||

---

128 ಈ ಎರಡು ಪದ್ಯಗಳೂ ವಿಷ್ಣುಪುರಾಣದಲ್ಲಿ ಬರುತ್ತವೆ.

ಎಲೈ ವೀರನೇ! ನೀನು ಪ್ರತಿಕೂಲನಾದೊಡನೆ ನಿನ್ನ ಶತ್ರುಗಳಿಗೆ ಸರ್ವವೂ ವಿಪರೀತವೇ ಆಗುತ್ತಿದೆ: ಕ್ಷಣದೆ (=ರಾತ್ರಿ)ಯು ಅಕ್ಷಣದೆ (ರಾತ್ರಿಯಲ್ಲ; ಮತ್ತು ಉತ್ಸವದಾಯಿನಿಯಲ್ಲ); ವನವು (=ಅರಣ್ಯ) ಅವನ (=ಅರಣ್ಯವಲ್ಲದ್ದು ಮತ್ತು ರಕ್ಷಣೆ); ವ್ಯಸನವೇ (=ಮನೋರಂಜಕ ಕಾರ್ಯ) ಅವ್ಯಸನ (ವ್ಯಸನವಲ್ಲದ್ದು ಮತ್ತು ಕುರಿಕಾಯುವುದು).

ಇಲ್ಲಿ ಶಬ್ದ ಶಕ್ತಿಮೂಲವಾದ ವಿರೋಧಾಲಂಕಾರಕ್ಕೆ ಅಂಗವಾಗಿರುವ ಅರ್ಥಾಂತರ ನ್ಯಾಸಾಲಂಕಾರದಿಂದ 'ವಿಧಿಯೂ ನಿನ್ನನ್ನೇ ಅನುಸರಿಸುತ್ತದೆ' ಎಂಬ ವಸ್ತು 'ಸರ್ವ' ಎಂಬ ಪದದ ಮೂಲಕ ವ್ಯಂಗ್ಯ.

೯. ತುಹ ವಲ್ಲಹಸ್ಸ ಗೋಸಮ್ಮಿ ಆಸಿ ಅಹರೋ ಮಿಲಾಣಕಮಲದಲೋ।
ಇಅ ಣವವಹುಆ ಸೋಊಣ ಕುಣಹ ವಅಣಂ ಮಹೀಸಁಮುಹಮ್ ॥

ನಿನ್ನಿನಿಯನ ತುಟಿ ಪಗಲೊಳ್
ಕಣ್ಗೆಸೆದುದು ಬಾಡಿಪೋದ ಪದುಮದ ತೆರದಿಂ-।
ದೆನ್ನಲ್ಕಾಲಿಸಿ ನವವಧು
ತನ್ನಾನನಮಂ ಸಮಂತು ಕೆಳಗಾಗಿಸಿದಳ್ ॥

ಇಲ್ಲಿ ರೂಪಕಾಲಂಕಾರದಿಂದ 'ನೀನವನನ್ನು ಮತ್ತೆ ಮತ್ತೆ ಚುಂಬಿಸಿದುದರ ಫಲವಾಗಿಯೇ ಅವನ ತುಟಿ ಬಾಡಿತು' ಎಂಬ ಕಾವ್ಯಲಿಂಗಾಲಂಕಾರವು 'ಬಾಡಿಪೋದ' ಎಂಬ ಪದದ ಮೂಲಕ ಧ್ವನಿತವಾಗಿದೆ. ಈ ಮೇಲಿನ ನಾಲ್ಕು ಉದಾಹರಣೆಗಳಲ್ಲಿಯೂ (೬-೯) ವ್ಯಂಜಕವು 'ಸ್ವತಃ ಸಂಭವಿ'.

೧೦. ರಾಈಸು ಚಂದಧವಲಾಸು ಲಲಿಅಮಪ್ಫಾಲಿಊಣ ಜೋ ಚಾವಮ್।
ಏಕಚ್ಛತ್ತಂ ವಿಅ ಕುಣಇ ಭುಅಣರಜ್ಜಂ ವಿಜಂಭಂತೋ ॥

ಶಶಿಧವಳಂಗಳೆನಿಪ್ಪಾ
ನಿಶಿಗಳೊಳಾವಂ ಸುಚಾಪಟಂಕೃತಿಯಿಂದಂ।
ತ್ರಿಭುವನರಾಜ್ಯಮನೆಲ್ಲಂ
ಬಸಗೈಯುವನೇಕ ಛತ್ರದಡಿಯೊಳ್ ಭೂಪಂ ॥

ಇಲ್ಲಿ ವಸ್ತುವಿನಿಂದ 'ಕಾಮಿಗಳಿಗೆ ರಾಜನೇ ಕಾಮ; ಅವನ ಆಜ್ಞೆಯನ್ನು ಮೀರಲು ಅವರಿಗೆ ಧೈರ್ಯವಿಲ್ಲ; ಆದ್ದರಿಂದಲೇ ಎಚ್ಚರವಾಗಿದ್ದು ಕಾಮಕ್ರೀಡೆ

ಗಳಲ್ಲಿಯೇ ರಾತ್ರಿಯನ್ನೆಲ್ಲ ಕಳೆಯುತ್ತಾರೆ' ಎಂಬ ವಸ್ತು 'ತ್ರಿಭುವನ ರಾಜ್ಯ ಎಂಬ ಪದದ ಮೂಲಕ ಸೂಚಿತವಾಗಿದೆ.

೧೧. ನಿಶಿತಶರಧಿಯಾರ್ಪಯತ್ಯನಂಗೋ
ದೃಶಿ ಸುದೃಶಃ ಸ್ವಬಲಂ ವಯಸ್ಯರಾಲೇ।
ದಿಶಿ ನಿಪತತಿ ಯತ್ರ ಸಾ ಚ ತತ್ರ
ವ್ಯತಿಕರಮೇತ್ಯ ಸಮುನ್ಮಿಷನ್ತ್ಯವಸ್ಥಾಃ ॥

ತನ್ನಯ ಬಲಮಂ ಕಾಮಂ
ಕನ್ನೆಯರಾ ಕಣ್ಣೊಳೀವನಂಬಿದೆಯೆಸುತುಂ।
ಎತ್ತಲ್ ಮೇಣದು ಪರಿವುದೊ
ಅತ್ತಲ್ ಬಳಿಸಾರ್ವುವಲ್ತೆ ಮಿಶ್ರವಿಕಾರಂ ॥

ಇಲ್ಲಿ ವಸ್ತುವಿನಿಂದ 'ಏಕಕಾಲದಲ್ಲಿ ಪರಸ್ಪರ ವಿರುದ್ಧವಾದ ಅವಸ್ಥೆಗಳು ಕೂಡ ಉಂಟಾಗುತ್ತವೆ' ಎಂಬ ವಿರೋಧಾಲಂಕಾರವು ವ್ಯತಿಕರ (= ಮಿಶ್ರ)ವೆಂಬ ಪದದ ಮೂಲಕ ಧ್ವನಿತವಾಗಿದೆ.

೧೨. ವಾರಿಜ್ಜನ್ತೋ ವಿ ಪುಣೋ ಸಂದಾವಕದತ್ಥಿಏಣ ಹಿಅಏಣ।
ಥಣಹರವಅಸ್ಸಏಣ ವಿಸುದ್ಧಜಾಈ ಣ ಚಲಇ ಸೇ ಹಾರೋ ॥

ಬಾರಿಸೆ ಪೀಡಿತಹೃದಯಂ
ಹಾರಮನದು ಶುದ್ಧಜಾತಿಯಪ್ಪುದರಿಂದಾ-।
ಧಾರಮನಗಲದು ಸುಸ್ತನ-
ಭಾರಂ ವರಮಿತ್ರನೆಂದು ಕಾಯುವ ತೆರದಿಂ ॥

ಇಲ್ಲಿ 'ವಿಶುದ್ಧ ಜಾತಿ'ಯದೆಂಬ ಕಾವ್ಯಲಿಂಗಾಲಂಕಾರದಿಂದ 'ಹಾರವು ಸದಾಕಾಲವೂ ಕಂಪಿಸುತ್ತಲೇ ಇದೆ'ಯೆಂಬ ವಸ್ತು 'ಅಗಲದು' ಎಂಬ ಪದದ ಮೂಲಕ ವ್ಯಂಗ್ಯ.

೧೩. ಸೋ ಮುದ್ಧಸಾಮಲಂಗೋ ಧಮ್ಮಿಲ್ಲೋ ಕಲಿಅಲಲಿಅಣಿಅದೇಹೋ।
ತೀಏ ಖಂಧಾಹಿ ಬಲಂ ಗಹಿಅ ಸರೋ ಸುರಅಸಂಗರೇ ಜಅಇ ॥

ಸುರುಚಿರ ಶಾಮಲವರ್ಣಂ
ಸೋರ್ಮುಡಿಯದು ಕಲಿತಲಲಿತಕೋಮಲ ದೇಹಂ।

ಮನ್ಮಥನೆನಲವಳಾ ಸ್ಕಂ-
ಧದೆ ಬಲಮಂ ಕೊಂಡು ಗೆಲ್ವುದಂಗಜರಣದೊಳ್ ||

ಇಲ್ಲಿ (ಸೋಮಸ್ಪುಡಿಯೇ ಮನ್ಮಥನೆಂಬ) ರೂಪಕಾಲಂಕಾರದಿಂದ 'ಮತ್ತೆ ಮತ್ತೆ ಎಳೆದುದರ ಫಲವಾಗಿ ಕೇಶಪಾಶವು ಹೆಗಲಮೇಲೆ ಯಾವ ರೀತಿ ಬಂದಿತೆಂದರೆ, ರತಿಕ್ರೀಡೆಯು ತೀರಿದರೂ ಕಾಮುಕನ ಅಭಿಲಾಷೆ ತೀರಲೇ ಇಲ್ಲ' ಎಂಬ ವಿಭಾವನಾಲಂಕಾರವು 'ಸ್ಕಂಧ'ವೆಂಬ ಪದದ ಮೂಲಕ ವ್ಯಂಗ್ಯ. ಈ ಉದಾಹರಣೆಗಳಲ್ಲಿ (೧೦-೧೪) ವ್ಯಂಜಕ ಸ್ವರೂಪವು ಕವಿಪ್ರೌಢೋಕ್ತಿಯಿಂದ ಮಾತ್ರ ಸಿದ್ಧವಾದುದು.

೧೪. ಣವಪುಣ್ಣಿಮಾಮಿಅಂಕಸ್ಸ ಸುಹಅ ಕೋ ತ್ತಂ ಸಿ ಭಣಸು ಮಹ ಸಚ್ಚಮ್ |
ಕಾ ಸೋಹಗ್ಗಸಮಗ್ಗಾ ಪಓಸರಅಣಿ ವ್ವ ತುಹ ಅಜ್ಜ ||

ನವಪೂರ್ಣಿಮಾಶಶಾಂಕನ
ಸಹಯೋಗಂ ನಿನಗಿದೆಂತು ಪೇಳಯ್ ದಿಟಮಂ |
ಮತ್ತಂ ಪ್ರದೋಷರಾತ್ರಿಯು-
ಮೀಗಳ್ ನಿನಗಾವಳಪ್ಪಳಧಿಕಮನೋಜ್ಞಳ್ ||

ಇಲ್ಲಿ ವಸ್ತುವಿನಿಂದ 'ನನ್ನಲ್ಲಿ ಹೇಗೋ ಹಾಗೆ ಇನ್ನೊಬ್ಬಳಲ್ಲಿಯೂ ಮೊದಲು ನೀನು ಅನುರಕ್ತನಾಗಿದ್ದೆ, ಆದರೆ ಅನಂತರ ಅವಳ ಅನುರಾಗ ತಪ್ಪಿತು' ಎಂಬ ವಸ್ತು ಕ್ರಮವಾಗಿ 'ನವ . . .' ಇತ್ಯಾದಿ ಮತ್ತು 'ಪ್ರದೋಷ . . .' ಇತ್ಯಾದಿ ಪದಗಳ ಮೂಲಕ ವ್ಯಂಗ್ಯ.

೧೫. ಸಹಿ ಣವಣಿಹುವಣಸರಮರಮ್ಮಿ ಅಂಕವಾಲೀಸಹೀಏ ಣಿಬಿಡಾಏ |
ಹಾರೋ ಣಿವಾರಿಓ ವಿಅ ಉಚ್ಛೇರನ್ತೋ ತದೋ ಕಹಂ ರಮಿಅಮ್ ||

ಅಂಗಜರಣದೊಳ್ ನಿಬಿಡಾ
ಲಿಂಗನಸಖಿಯೊಡೆಯೆ ಹಾರಮಂ ಬಾಧಕಮಂ |
ಹಿಂಗದೆ ರತಮಂ ಕೆಳದಿಯೆ
ಸಂಗಡಿಸಲ್ ನೆರೆದೆಯೆಂತೊ ಪೇಳೊಂದಿನಿಸಂ ||

ಇಲ್ಲಿ ವಸ್ತುವಿನಿಂದ 'ಹಾರ ಹರಿದ ಮೇಲೆ ಅವಶ್ಯವಾಗಿಯೂ ಹೊಸಪರಿಯ ರತ ಸಾಗಿಯೇ ಇದ್ದಿರಬೇಕು; ಅದರ ಪರಿಯನ್ನು ವಿವರಿಸು' ಎಂಬ ವ್ಯತಿರೇಕಾಲಂಕಾರವು 'ಎಂತೋ' ಎಂಬ ಪದದ ಮೂಲಕ ಗಮ್ಯ.

೧೬. (a) ಪವಿಸನ್ತೀ ಘರವಾರಂ ವಿವಲಿಅವಲಣಾ ವಿಲೋಇಊಣ ಪಹಮ್ ।
ಖಂಧೇ ಘೇತ್ತೂಣ ಘಡಂ ಹಾಹಾ ಣಟ್ಠೋತ್ತಿ ರುಅಸಿ ಸಹಿ ಕಿಂ ತಿ ॥

ಮನೆಬಾಗಿಲೊಳ್ಪೈತರುತಾ-
ನನಮಂ ತಿರುಪಲ್ಕೆ ಸಖಿಯೆ ಪಾಂಥಂ ಕಾಣಲ್ ।
ಪಿಡಿದಿರ್ದುಂ ಸ್ಕಂಧದೊಳೇ
ಕೊಡನೊಡೆದತ್ತಕಟಯೆಂದು ರೋದಿಪುದೇಕೌ ॥

ಇಲ್ಲಿ ಕಾವ್ಯಲಿಂಗಾಲಂಕಾರದಿಂದ 'ಸಂಕೇತಸ್ಥಾನಕ್ಕೆ ಹೊರಟಿರುವ ನಲ್ಲನನ್ನು ನೋಡಿ ಅಲ್ಲಿಗೆ ನೀನೂ ಹೊರಡಬಯಸುತ್ತಿರುವೆಯಾದರೆ, ಮತ್ತೊಂದು ಕೊಡವನ್ನು ತೆಗೆದುಕೊಂಡು ಹೋಗು' ಎಂಬ ವಸ್ತು 'ಏಕೌ' ಎಂಬ ಪದದ ಮೂಲಕ ವ್ಯಂಗ್ಯ. ಇದಕ್ಕೇ ಮತ್ತೊಂದು ಉದಾಹರಣೆ:—[124]

೧೬. (b) ವಿಹಲಂಖಲಂ ತುಮಂ ಸಹಿ ದಿಟ್ಠೂಣ ಕುಡೇಣ ತರಲತರದಿಟ್ಠಿಮ್ ।
ವಾರಪ್ಫಂಸಮಿಸೇಣ ಅಪ್ಪಾ ಗುರುಓತ್ತಿ ಪಾಡಿಅ ವಿಭಿಣ್ಣೋ ॥

ನಿನ್ನಾಯಾಸಮನಂತೆಯೆ
ನಿನ್ನಯ ತರಲೇಕ್ಷಣಂಗಳಂ ನೋಡುತ್ತುಂ ।
ಗುರುವಾದೀ ಕೊಡನೊಡೆದುದು
ಕೆಡೆಯುತ್ತುಂ ತಾನೆ ಬಾಗಿಲೊತ್ತಿದ ನೆವದಿಂ ॥

ಇಲ್ಲಿ 'ನದೀತೀರದ ಲತಾಕುಂಜದಲ್ಲಿ ಕೃತಸಂಕೇತನಾದ ವಿಟನು ಬಾರದೆ, ಕಡೆಗೆ ಮನೆ ಸೇರುವ ಸಮಯದಲ್ಲಿ ಬಂದುದನ್ನು ನೋಡಿದ ನೀನು ಮತ್ತೆ ನದೀ

[124] ಈ ಪದ್ಯದಲ್ಲಿ ಕಾವ್ಯಲಿಂಗವನ್ನು 'ಸ್ವತಃಸಂಭವಿ'ಯೆನ್ನಲೂ ಬರುವುದರಿಂದ ನಿಸ್ಸಂದಿಗ್ಧವಾಗಿ ಕವಿನಿಬದ್ಧಪ್ರೌಢೋಕ್ತಿಯ ಉದಾಹರಣೆಗಾಗಿ ಮತ್ತೊಂದನ್ನು ಬರೆದಿದ್ದಾನೆ.

ಗಮನಕ್ಕೆ ಅನುವಾಗಿ ಬಾಗಿಲು ತಾಗಿದ ನೆವದಿಂದ ಬೇಕೆಂದೇ ವ್ಯಾಕುಲಳಾಗಿ ಕೊಡವನ್ನು ಒಡೆದಿರುವೆಯೆಂಬುದನ್ನು ನಾನು ಬಲ್ಲೆ; ನೀನೇಕೆ ನಂಬುವುದಿಲ್ಲ? ನಿನ್ನ ಇಷ್ಟಾನುಸಾರ ಹೋಗು; ನಿನ್ನ ಅತ್ತೆಯೊಡನೆ ನಾನು ಎಲ್ಲವನ್ನೂ ಅನುಕೂಲವಾಗುವಂತೆ ಸಮರ್ಥಿಸಿ ಮಾತನಾಡುತ್ತೇನೆ' ಎಂಬ ವಸ್ತು 'ಬಾಗಿಲೊತ್ತಿದ ನೆವದಿಂ' ಎಂಬ ಅಪಹ್ನುತ್ಯಲಂಕಾರದಿಂದ ಗಮ್ಯ.

೧೭. ಜೋಹ್ಣಾಇ ಮಹುರಸೇಣ ಅ ವಿಇಣ್ಣತಾರುಣ್ಣಉತ್ಸುಅಮಣಾ ಸಾ।
ಬುಡ್ಢಾ ವಿ ಣವೋಢವ್ವಿಅ ಪರವಹುಆ ಅಹಹ ಹರಇ ತುಹ
ಹಿಅಅಮ್ ॥

ಮಧುರಸದಿಂ ಚಂದ್ರಿಕೆಯಿಂ-
ದಧಿಗತತಾರುಣ್ಯಳಾಕೆ ಮುದಿಯಾಗಿರೆಯುಂ।
ಅಧಿಕಪ್ರೀತಿಕರಳ್ ಪರ-
ವಧುವೆಂದೇ ನಿನಗಮಿಂತು ನೂತನವಧುವೊಲ್ ॥

ಇಲ್ಲಿ ಕಾವ್ಯಲಿಂಗಾಲಂಕಾರದಿಂದ 'ನನ್ನನ್ನು ಕಡೆಗಣಿಸಿ ನೀನು ಮುದುಕಿಯಾದ ಪರವಧುವನ್ನು ಅಪೇಕ್ಷಿಸುವೆ, ನಿನ್ನ ವರ್ತನೆಯನ್ನು ಹೇಳಲಳವಲ್ಲ'ವೆಂಬ ಆಕ್ಷೇಪಾಲಂಕಾರವು 'ಪರವಧು'ವೆಂಬ ಪದದಿಂದ ವ್ಯಂಗ್ಯ.

ಈ ಮೇಲಿನ ಉದಾಹರಣೆಗಳಲ್ಲಿ (೧೪-೧೭) ವ್ಯಂಜಕವು ಕವಿನಿರ್ಮಿತ ಪಾತ್ರಗಳ ಪ್ರೌಢೋಕ್ತಿಯಲ್ಲಿ ಮಾತ್ರ ಸಿದ್ಧವಾದುದು. ವಾಕ್ಯಗಮ್ಯವಾದ ಧ್ವನಿಯನ್ನಾಗಲೇ ಉದಾಹರಿಸಲಾಗಿದೆ. ಶಬ್ದಾರ್ಥೋಭಯಶಕ್ತಿಮೂಲಧ್ವನಿಯು ಪದಪ್ರಕಾಶ್ಯವಲ್ಲವಾದಕಾರಣ ಒಟ್ಟು ಧ್ವನಿಭೇದಗಳು ಮೂವತ್ತೈದು.[125]

ಪ್ರಬಂಧೇऽಪ್ಯರ್ಥಶಕ್ತಿಭೂಃ ॥ ೧೯*d* ॥

ಅರ್ಥಶಕ್ತಿಮೂಲ ಧ್ವನಿಯು ಸಮಗ್ರಪ್ರಬಂಧದಲ್ಲಿಯೂ ವ್ಯಕ್ತವಾಗುವುದುಂಟು. ಉದಾಹರಣೆಗೆ ಗೃಧ್ರಗೋಮಾಯುಸಂವಾದವನ್ನು[126] ಹೇಳಬಹುದು :—

[125] ವಾಕ್ಯಪ್ರಕಾಶ್ಯವಾದ ಧ್ವನಿಪ್ರಕಾರಗಳು ೧೮ + ಪದಪ್ರಕಾಶ್ಯವಾದ ಪ್ರಕಾರಗಳು ೧೭ = ೩೫. ಅಡಿಟಿಪ್ಪಣಿ ೧೨೦ ರಲ್ಲಿ ತೋರಿಸಿದ ವಿಭಾಗವು ವ್ಯಂಗ್ಯದೃಷ್ಟಿಯಿಂದ; ಇಲ್ಲಿ ಹೇಳುವ ವಿಭಾಗದಲ್ಲಿ ವ್ಯಂಜಕದೃಷ್ಟಿಯೂ ಸೇರಿದೆ.

[126] ಮಹಾಭಾರತ, ಶಾಂತಿಪರ್ವ, ಅಧ್ಯಾಯ ೧೫೩.

ಅಲಂ ಸ್ಥಿತ್ವಾ ಶ್ಮಶಾನೇಽಸ್ಮಿನ್ ಗೃಧ್ರಗೋಮಾಯುಸಂಕುಲೇ ।
ಕಂಕಾಲಬಹಲೇ ಘೋರೇ ಸರ್ವಪ್ರಾಣಿಭಯಂಕರೇ ॥
ನ ಚೇಹ ಜೀವಿತಃ ಕಶ್ಚಿತ್ ಕಾಲಧರ್ಮಮುಪಾಗತಃ ।
ಪ್ರಿಯೋ ವಾ ಯದಿ ವಾ ದ್ವೇಷ್ಯಃ ಪ್ರಾಣಿನಾಂ ಗತಿರೀದೃಶೀ ॥

ಬಿಡಿಬಿಡಿರಿಂ ಸುಡುಗಾಡಂ
ಕಡುಭೀಕರಮಪ್ಪ ಗೃಧ್ರಗೋಮಾಯುಗಳಿಂ- ।
ದಿಡಿಕಿರಿದಿದೆ ಮೂಳೆಗಳಿಂ-
ದೊಡರಿಸುತುಂ ಸಕಲಜೀವಿಗಳ್ಗಂಜಿಕೆಯಂ ॥

ಕಾಲಂ ತೀರಿದ ಬಳಿಯಂ
ಜೀವಂಬಿಡಿದಿರ್ಪನಿಲ್ಲ ನೋಡಲ್ಕೆಂದುಂ ।
ಪ್ರಿಯನಕ್ಕೆಮ ಪಗೆಯಕ್ಕೆಮ
ಲೋಕಸ್ಥಿತ ಜೀವಿಜಾತಕಿದೆ ಗತಿಯಲ್ತೇ ॥

ಹಗಲು ಸಾಮರ್ಥ್ಯವುಳ್ಳ ಹದ್ದು ಮೃತಪುರುಷನನ್ನು ಬೇಗ ಪರಿತ್ಯಜಿಸಬೇಕೆಂದು ಹೇಳುವ ವಾಕ್ಯವಿದು.

ಆದಿತ್ಯೋಽಯಂ ಸ್ಥಿತೋ ಮೂಢಾಃ ಸ್ನೇಹಂ ಕುರುತ ಸಾಂಪ್ರತಮ್ ।
ಬಹುವಿಘ್ನೋ ಮುಹೂರ್ತೋಽಯಂ ಜೀವೇದಪಿ ಕದಾಚನ ॥
ಅಮುಂ ಕನಕವರ್ಣಾಭಂ ಬಾಲಮಪ್ರಾಪ್ತಯೌವನಮ್ ।
ಗೃಧ್ರವಾಕ್ಯಾತ್ ಕಥಂ ಮೂಢಾಃ ತ್ಯಜಧ್ವಮವಿಶಂಕಿತಾಃ ॥

ರವಿಯಿದೊ ಪೊಳೆವಂ ಗಾಂಪರೆ
ತವೆ ನೇಹಂದೋರಿ ತಡೆವುದೈಸಲೆ ಯೋಗ್ಯಂ ।
ಬಹುವಿಘ್ನಕರಂ ಚಣಮಿದು
ಬದುಕಿದೊಡಂ ಬದುಕಲಕ್ಕುಮೆತ್ತಾನುಂ ತಾಂ ॥

ಇವನಂ ಸುವರ್ಣವರ್ಣಸ-
ನಿವಸಂ ಗಡ ಯೌವನಕ್ಕೆ ದಾಂಟದ ಮಗುವಂ ।
ಅವಿಶಂಕಿತರೆಂತೀಗಳ್
ತವೆ ತೊರೆವಿರಿ ಗೃಧ್ರದುಕ್ತಿಯಿಂ ಕಡುಮೂಢರ್ ॥

ರಾತ್ರಿ ಸಾಮರ್ಥ್ಯವೇರುವ ನರಿ ಜನರನ್ನು ಕೂಡಲೇ ಹೋಗದಂತೆ ಆಗ್ರಹ ಮಾಡುವ ವಾಕ್ಯವಿದು. ಹೀಗೆ ಒಟ್ಟು ಪ್ರಬಂಧದಲ್ಲೇ ಧ್ವನಿಯಿದೆ. ಮಿಕ್ಕ ಹನ್ನೊಂದು ಭೇದಗಳನ್ನು ಗ್ರಂಥವಿಸ್ತಾರದ ಭೀತಿಯಿಂದ ಉದಾಹರಿಸಿಲ್ಲ.[127] ಲಕ್ಷಣಕ್ಕನುಗುಣ ವಾಗಿ ವಾಚಕರೇ ಊಹಿಸಿಕೊಳ್ಳುವುದು. ಕಾರಿಕೆಯಲ್ಲಿ 'ಅಪಿ' ಎಂದಿರುವುದಕ್ಕೆ ಪ್ರಬಂಧದಂತೆ ಪದ, ವಾಕ್ಯಗಳಲ್ಲಿಯೂ ಎಂದು ತಾತ್ಪರ್ಯ.

ಪದ್ಯೈಕದೇಶರಚನಾವರ್ಣೇಷ್ವಪಿ ರಸಾದಯಃ ‖ ೨೦*ab* ‖

ಪದಾಂಶ, ರಚನೆ, ಅಕ್ಷರಗಳಲ್ಲಿಯೂ ರಸಾದಿಗಳು ವ್ಯಂಗ್ಯವಾಗುವುವು. ಪ್ರಕೃತಿಯಿಂದ ವ್ಯಂಗ್ಯವಾಗುವುದಕ್ಕೆ ಉದಾಹರಣೆ :—

ರಇಕೇಲಿಹಿಅಣಿಅಸಣಕರಕಿಸಲಅರುದ್ಧಣಅಣಜುಅಲಸ್ಸ ।
ರುದ್ದಸ್ಸ ತಇಅಣಅಣಂ ಪವ್ವಈಪರಿಚುಂಬಿಅಂ ಜಅಇ ‖[128]

ರತಿಕೇಲ್ಯಪಹೃತನಿವಸನ-
ಕರಕಿಸಲಯರುದ್ಧನಯನಯುಗಲಸ ಶಿವನಾ ।
ಮೂರನೆ ನಯನಂ ಮೆರೆವುದು
ಪಾರ್ವತಿ ಪರಿಚುಂಬಿಸಲ್ಕೆ ಸಂಗಮದೆಡೆಯೊಳ್ ‖

ಇಲ್ಲಿ 'ಮೆರೆವುದು' ಎಂದಿದೆಯೇ ಹೊರತು 'ಶೋಭಿಸುವುದು' ಎಂದಿಲ್ಲ. ಆದ್ದರಿಂದ ಎಲ್ಲ ಕಣ್ಣುಗಳನ್ನು ಮುಚ್ಚುವ ಕೆಲಸವೂ ಒಂದೇ ಆದರೂ, ಈ ಕಣ್ಣನ್ನು ಮುಚ್ಚುವುದು ಮಾತ್ರ ಲೋಕೋತ್ತರವಾದುದೆಂದೂ ಅತ ಏವ ಅದೇ ಉತ್ಕೃಷ್ಟ ವೆಂದೂ ಭಾಸವಾಗುತ್ತದೆ. ಇನ್ನೊಂದು ಉದಾಹರಣೆ :—

ಪ್ರೇಯಾನ್ ಸೋಽಯಮಪಾಕೃತಃ ಸಶಪಥಂ ಪಾದಾನತಃ ಕಾಂತಯಾ
ದ್ವಿತ್ರಾಣ್ಯೇವ ಪದಾನಿ ವಾಸಭವನಾದ್ಯಾವನ್ನ ಯಾತ್ಯುನ್ಮನಾಃ ।
ತಾವತ್ಪ್ರತ್ಯುತ ಪಾಣಿಸಂಪುಟಗಲನ್ನೀವೀನಿಬಂಧಂ ಧೃತೋ
ಧಾವಿತ್ವೇವ ಕೃತಪ್ರಣಾಮಕಮಹೋ ಪ್ರೇಮ್ಣೋ ವಿಚಿತ್ರಾ ಗತಿಃ ‖

---

[127] ಟಿಪ್ಪಣಿ ೧೨೦ ರಲ್ಲಿ ತೋರಿಸಿದಂತೆ ಒಟ್ಟು ಅರ್ಥಶಕ್ತಿಮೂಲಧ್ವನಿಯ ಬಗೆಗಳು ೧೨. ಒಂದರ ಪ್ರಬಂಧ ಪ್ರಕಾಶ್ಯತೆಯನ್ನು ಮಾತ್ರ ಇಲ್ಲಿ ತೋರಿಸಿದೆ.

[128] ಗಾಥಾಸಪ್ತಶತಿ, V, ೫೫.

ಪ್ರಿಯನಂ ಪಾದದೆ ಬಿಳ್ದನಂ ಶಪಥದಿಂ ನೂಂಕಿರ್ದಳಾ ಕಾಂತೆ ತಾ-
ನವನುಂ ವಾಸಗೃಹಂಬಿಡಲ್ಕಡಿಯಿಡಲ್ ದ್ವಿತ್ರ್ಯಂಗಳಂ ಅಂತರೊಳ್ ।
ಭರದಿಂ ಧಾವಿಸಿ ಪಾಣಿಸಂಪುಟಲಸನ್ನೀವೀಭರಳ್ ಬಾರಿಪಳ್
ನಮನಂಗೈಯುತುಮೆನ್ನಲಿನ್ನು ಗತಿಯೇ ಚಿತ್ರಂ ಗಡಾ ಪ್ರೇಮದಾ ॥

ಇಲ್ಲಿ ಎರಡು ಮೂರು ಅಡಿಗಳನ್ನಿಟ್ಟನೆಂದಿದೆಯೇ ಹೊರತು, ಎರಡು ಮೂರು ಬಾಗಿಲುಗಳನ್ನು ದಾಟಿದನೆಂದಿಲ್ಲ.

ಕ್ರಿಯಾಪದ ಮತ್ತು ನಾಮಪದ ಪ್ರತ್ಯಯಗಳ ವ್ಯಂಜಕತ್ವಕ್ಕೆ ಉದಾಹರಣೆ :—

ಪಥಿ ಪಥಿ ಶುಕಚಂಚೂಚಾರುರಾಭಾಂಕುರಾಣಾಂ
ದಿಶಿ ದಿಶಿ ಪವಮಾನೋ ವೀರುಧಾಂ ಲಾಸಕಶ್ಚ ।
ನರಿ ನರಿ ಕಿರತಿ ದ್ರಾಕ್ ಸಾಯಕಾನ್ ಪುಷ್ಪಧನ್ವಾ
ಪುರಿ ಪುರಿ ವಿನಿವೃತ್ತಾ ಮಾನಿನೀಮಾನಚರ್ಚಾ ॥

ದಾರಿದಾರಿಗಳಲ್ಲಿ ಚಿಗುರ ಕಾಂತಿಯು ತಾನು
ಗಿಳಿಗಳಾ ಚಂಚುಗಳ ಬಣ್ಣಕೆಣೆಯು ।
ದಿಕ್ಕುದಿಕ್ಕುಗಳಲ್ಲಿ ತೀಡುತಿಹ ತೆಂಬೆಲರು
ಬಳ್ಳಿಗಳನೆಲ್ಲೆಡೆಗೆ ಕುಣಿಸುತಿಹುದು ॥
ಪುರುಷಪುರುಷರ ಮೇಲೆ ತಟ್ಟನೆಯೆ ಸುರಿಸುವನು
ಕಣೆಗಳನು ತಾನೆ ಕುಸುಮಶರನು ।
ಪುರಪುರದೆ ತೊಲಗಿತ್ತು ಮಾನಿನೀ ಜನರೊಳಗೆ
ಮಾನವಾರ್ತೆಯೆ, ನೋಡಿ ಸೋಜಿಗವನು ॥

ಇಲ್ಲಿ 'ಸುರಿಸುವನು' ಎಂಬಲ್ಲಿ ಕ್ರಿಯೆಯು ಇನ್ನೂ ಸಾಗುತ್ತಲೇ ಇದೆಯೆಂಬುದು, 'ತೊಲಗಿತ್ತು' ಎಂಬಲ್ಲಿ ತೊಲಗುವ ಕೆಲಸ ಮುಗಿದಿದೆಯೆಂಬುದೂ 'ಪ್ರತ್ಯಯಗಳಿಂದಲೇ ವ್ಯಂಗ್ಯ. ಸಂಸ್ಕೃತಮೂಲದಲ್ಲಿ ವಿನಿವೃತ್ತಾ (=ತೊಲಗಿತ್ತು) ಎಂಬಲ್ಲಿರುವ 'ಕ್ತ' ಪ್ರತ್ಯಯವು ಕೆಲಸ ಎಷ್ಟೋ ಹಿಂದೆಯೇ ಮುಗಿದಿದೆಯೆಂಬುದನ್ನೂ ಸೂಚಿಸುತ್ತದೆ.

ಇನ್ನೊಂದು ಉದಾಹರಣೆ :—

ಲಿಖನ್ನಾಸ್ತೇ ಭೂಮಿಂ ಬಹಿರವನತಃ ಪ್ರಾಣದಯಿತಃ
ನಿರಾಹಾರಾಃ ಸಖ್ಯಃ ಸತತರುದಿತೋಚ್ಛೂನನಯನಾಃ ।

ಪರಿತ್ಯಕ್ತಂ ಸರ್ವಂ ಹಸಿತಪಠಿತಂ ಪಂಜರಶುಕೈಃ,
ತವಾವಸ್ಥಾ ಚೇಯಂ, ವಿಸೃಜ ಕಠಿನೇ ಮಾನಮಧುನಾ ||

ಪ್ರಾಣಕಾಂತನು ಹೊರಗೆ ತಲೆವಾಗಿ ನೆಲವನ್ನು
ಬರೆಯುತಿರುವನು ಕಾಲ ಬೆರಳಿನಿಂದ |
ತೊರೆಯುತಾಹಾರವನು ಸಖಿಯರಿರ್ಪರು ನೋಡು
ಅತ್ತತ್ತು ಊದಿರುವ ಕಣ್ಗಳಿಂದ |
ಹಾಸಪಾಠಾದಿಗಳನೆಲ್ಲ ನಿಲ್ಲಿಸಿ ತಾವು
ಪಂಜರದ ಗಿಳಿಗಳೂ ಸುಮ್ಮನಿಹವು |
ನಿನ್ನವಸ್ಥೆಯು ನೋಡಲಿಂತಾಗೆ ಕರ್ಕಶಳೆ
ಬಿಸುಡೀಗ ಕೋಪವನು ತಡಮಾಡದೆ ||

ಇಲ್ಲಿ 'ಬರೆಯುತ್ತಾ' ಎಂದಿದೆ, 'ಬರೆವನು' ಎಂದಲ್ಲ; 'ಇರುವನು' ಎಂದಿದೆ, ಇದ್ದನು' ಎಂದಲ್ಲ, ಎಂದರೆ ಅವಳು ಪ್ರಸನ್ನಳಾಗುವವರೆಗೂ ಇರುವನೆಂದಾಯಿತು; 'ನೆಲವನ್ನು' ಎಂದಿದೆ, 'ನೆಲದಲ್ಲಿ' ಎಂದಲ್ಲ; ಬುದ್ಧಿಪೂರ್ವಕವಾಗಿ ಏನೊಂದನ್ನೂ ಬರೆಯುತ್ತಿಲ್ಲವೆಂದರ್ಥ, ಇದೆಲ್ಲವೂ ಕ್ರಿಯಾಪದ ಮತ್ತು ನಾಮ ಪ್ರತ್ಯಯಗಳಿಂದ ವ್ಯಂಗ್ಯ.

ಸಂಬಂಧದ ವ್ಯಂಜಕತ್ವಕ್ಕೆ ಉದಾಹರಣೆ:—

ಗಾಮಾರುಹಮ್ಮಿ ಗಾಮೇ ವಸಾಮಿ ಣಅರಟ್ಠಿಇಂ ಣ ಜಾಣಾಮಿ |
ಣಅರಿಆಣಂ ಪಇಣೋ ಹರೇಮಿ ಜಾ ಹೋಮಿ ಸಾ ಹೋಮಿ ||

ಪಳ್ಳಿಯೊಳೇ ಪುಟ್ಟಿದೆನಾಂ
ಪಳ್ಳಿಯೆ ಮನೆಯೆನಗೆ ನಗರನೀತಿಯನರಿಯೆಂ |
ಒಳ್ಳೆಯ ನಗರಸ್ತ್ರೀಯರ
ವಲ್ಲಭರಂ ಸೆಳೆಯುವಾಕೆ ನಾನೇ ನಿರುತಂ ||

ಇಲ್ಲಿ 'ನಗರಸ್ತ್ರೀಯರ' ಎಂಬ ಷಷ್ಠೀಪ್ರಯೋಗದಲ್ಲಿ ವ್ಯಂಜಕತ್ವವುಂಟು.

ರಮಣೀಯಃ ಕ್ಷತ್ರಿಯಕುಮಾರ ಆಸೀತ್[129]

---

[129] ಮಹಾವೀರಚರಿತನಾಟಕ II, ಪರಶುರಾಮನ ವಾಕ್ಯ.

'ಕ್ಷತ್ರಿಯ ಕುಮಾರನು ರಮಣೀಯನಾಗಿದ್ದನು (ಹಿಂದೆ)'—ಎಂಬಲ್ಲಿ ಕಾಲದ ವ್ಯಂಜಕತ್ವವನ್ನು ನೋಡಬಹುದು. ವಚನವ್ಯಂಜಕತ್ವಕ್ಕೆ ಉದಾಹರಣೆ:—

ತಾಣ ಗುಣಗ್ಗಹಣಾಣಂ ತಾಣುಕ್ಕಂಠಾಣಂ ತಸ್ಸ ಪೇಮ್ಮಸ್ಸ।
ತಾಣ ಭಣಿಆಣಂ ಸುಂದರ ಏರಿಸಿಅ ಜಾಅಮವಸಾಣಮ್॥

ಆದೊರೆ ಗುಣಪರತೆಗಳಿಂ
ಗಾದೊರೆಯುತ್ಕಂಠೆಗಳ್ಗೆ ಪ್ರೇಮಕ್ಕಂ ಮೇಣ್।
ಆದೊರೆ ವಚನಂಗಳ್ಗಂ
ಸುಂದರನೇ ಬಂದುದೆಂತು ಕಡೆಯೀ ಪರಿಯೊಳ್॥

ಇಲ್ಲಿ ಗುಣಪರತೆ ಮುಂತಾದುವು ಅನೇಕವೆಂಬುದೂ ಪ್ರೇಮವು ಒಂದೇ ಎಂಬುದೂ ವಚನದಿಂದ ವ್ಯಂಗ್ಯ. ಪುರುಷವ್ಯತ್ಯಯಕ್ಕೆ[180] ಉದಾಹರಣೆ:—

ರೇ ರೇ ಚಂಚಲಲೋಚನಾಂಚಿತರುಚೇ ಚೇತಃ ಪ್ರಮುಚ್ಯ ಸ್ಥಿರ-
ಪ್ರೇಮಾಣಂ ಮಹಿಮಾನಮೇಣನಯನಾಮಾಲೋಕ್ಯ ಕಿಂ ನೃತ್ಯಸಿ।
ಕಿಂ ಮನ್ಯೇ ವಿಹರಿಷ್ಯಸೇ ಬತ ಹತಾಂ ಮುಂಚಾಂತರಾಶಾಮಿಮಾಮ್
ಏಷಾ ಕಂಠತಟೇ ಕೃತಾ ಖಲು ಶಿಲಾ ಸಂಸಾರವಾರಾಂನಿಧೌ॥

ರೇ ರೇ ಮಾನಸ ಕಾಮಿನೀಪರವಶಾ, ಬೀಳ್ಕೊಟ್ಟು ನೀಂ ಶಾಶ್ವತ-
ಪ್ರೇಮೋಪಾಸನೆಯಂ ಮೃಗಾಕ್ಷಿಯನಣಂ ನೋಡುತ್ತುಮೇಂ ನರ್ತಿಪಯ್॥
ಕೂಟಂ ಮೇಣ್ ದೊರೆಕೊಳ್ವುದೆಂದರಿವೆಯೇಂ ಕೀಳಾಸೆಯಂ ನಿಲ್ಲಿಸಯ್
ಸಂಸಾರಾಂಬುಧಿಯಲ್ಲಿ ಕಲ್ಲಿವಳೆ ಮೇಣ್ ಕಂಠಸ್ಥಮಪ್ಪಳ್ ದಿಟಂ॥

ಇಲ್ಲಿ ಪ್ರಹಾಸ[181]ವ್ಯಂಗ್ಯ.

ಪೂರ್ವನಿಪಾತದ[182]ಭಾವವ್ಯಂಜಕತೆಗೆ ಉದಾಹರಣೆ:—

---

180 ಇಲ್ಲಿ ತನ್ನನ್ನೇ ಮಧ್ಯಮಪುರುಷದಿಂದ ಸಂಬೋಧಿಸಿಕೊಳ್ಳಲಾಗಿದೆ.

181 ತನ್ನ ಸ್ಥಿತಿಗೆ ತಾನೇ ನಗುವುದು.

182 ಸಂಸ್ಕೃತದಲ್ಲಿ ದ್ವಂದ್ವಸಮಾಸಮಾಡುವಾಗ ಅಲ್ಪಾಕ್ಷರದ ಪದಗಳೇ ಪೂರ್ವಪದಸ್ಥಾನದಲ್ಲಿರಬೇಕೆಂಬುದು ನಿಯಮ. ಆದರೆ ಒಂದು ಪದಕ್ಕೆ ಹೆಚ್ಚಿನ ಪ್ರಾಧಾನ್ಯ ವಿವಕ್ಷಿತವಾದರೆ ಅದು ಬಹ್ವಕ್ಷರವಾದರೂ ಮೊದಲೇ ಬರಬಹುದೆಂದು ಅಪವಾದವಿದೆ.

ಯೇಷಾಂ ದೋರ್ಬಲಮೇವ, ದುರ್ಬಲತಯಾ ತೇ ಸಂಮತಾಃ, ತೈರಪಿ
ಪ್ರಾಯಃ ಕೇವಲನೀತಿರೀತಿಶರಣೈಃ ಕಾರ್ಯಂ ಕಿಮುರ್ವೀಶ್ವರೈಃ |
ಯೇ ಕ್ಷ್ಮಾಶಕ್ರ ಪುನಃಪರಾಕ್ರಮನಯಸ್ವೀಕಾರಕಾಂತಕ್ರಮಾಃ,
ತೇ ಸ್ಯುಸ್ತ್ವಾದೃಶ ಏವ ಭವಾದೃಶಾಸ್ತ್ರಿಜಗತಿ ದ್ವಿತ್ರಾಃ ಪವಿತ್ರಾಃ ಪರಮ್ ||

ಆರೊಳ್ ದೋರ್ಬಲಮೊಂದೆ, ದುರ್ಬಲರವರ್ ಪೃಥ್ವೀಶರಪ್ಪರ್ ಸಮಂ-
ತಾರೊಳ್ ಕೇವಲ ನೀತಿರೀತಿ ಶರಣಂ ಮೇಣಪ್ಪುದೇನನ್ನರಿಂ |
ಆರ್ ಭೂಪಾಲ, ಮಹಾಪರಾಕ್ರಮನಯಸ್ವೀಕಾರಕಾಂತಕ್ರಮರ್
ಮೂಲೋಕಂಗಳೊಳಿಲ್ಲ ನಿನ್ನ ಸದೃಶರ್ ದ್ವಿತ್ರರ್ ಪವಿತ್ರರ್ ಗಡಾ ||

ಇಲ್ಲಿ ಪರಾಕ್ರಮದ ಪ್ರಾಧಾನ್ಯವು ಗಮ್ಯ.[133]

ವಿಭಕ್ತಿವಿಶೇಷದ ವ್ಯಂಜಕತ್ವಕ್ಕೆ ಉದಾಹರಣೆ:—

ಪ್ರಧನಾಧ್ವನಿ ಧೀರಧನುರ್ಧ್ವನಿಭೃತಿ ವಿಧುರೈರಯೋಧಿ ತವ ದಿವಸಮ್ |
ದಿವಸೇನ ತು ನರಪ ಭವಾನಯುದ್ಧ ವಿಧಿಸಿದ್ಧಸಾಧುವಾದಪದಮ್ ||

ದಿನಮಂ ಯುದ್ಧಂಗೈಯುತೆ
ನಿನತರಿಗಳ್ ಕಳೆದರಂದು ಬಿಲ್ದನಿ ಮೊರೆಯಲ್ |
ದಿನದಿಂ ಕಾದಿದೆ ನೀನುಂ
ಜನನಾಥನೆ ದೇವಸಿದ್ಧರುಂ ಪೊಗಳ್ವಿನೆಗಂ ||

ಇಲ್ಲಿ 'ದಿನದಿಂ' ಎಂಬಲ್ಲಿ ಸಿದ್ಧಿಸೂಚಕವಾದ ತೃತೀಯೆ ಫಲಪ್ರಾಪ್ತಿಯನ್ನು ಧ್ವನಿಸುತ್ತದೆ.[134]

ಭೂಯೋ ಭೂಯಃ ಸವಿಧನಗರೀರಥ್ಯಯಾ ಪರ್ಯಟನ್ತಂ
ದೃಷ್ಟ್ವಾ ದೃಷ್ಟ್ವಾ ಭವನವಲಭೀತುಂಗವಾತಾಯನಸ್ಥಾ |

---

[133] ಉದಾಹರಣೆಯ 'ಪರಾಕ್ರಮನಯ' . . . ಎಂಬಲ್ಲಿ 'ಪರಾಕ್ರಮ' ಪದವನ್ನು ಪೂರ್ವಪದ ಮಾಡಿರುವುದರಿಂದ ವಿಶಿಷ್ಟ ಪ್ರಾಧಾನ್ಯ ಬಂದಿದೆ. ಇಲ್ಲದಿದ್ದರೆ 'ನಯಪರಾಕ್ರಮ'ವೆಂದೇ ಹೇಳಬೇಕಾಗಿತ್ತು.

[134] ಇದು ಸಂಸ್ಕೃತ ವ್ಯಾಕರಣದ ನಿಯಮಾನುಸಾರ. 'ಅಪವರ್ಗೇ ತೃತೀಯಾ'—ಪಾಣಿನಿ I. iii, ೬.

ಸಾಕ್ಷಾತ್ಕಾಮಂ ನವಮಿವ ರತಿರ್ಮಾಲತೀ ಮಾಧವಂ ಯತ್
ಗಾಢೋತ್ಕಂಠಾಲುಲಿತಲುಲಿತೈರಂಗಕೈಸ್ತಾಮ್ಯತೀತಿ ‖[185]

ಮತ್ತಂ ಮತ್ತಂ ಕೆಲದ ನಗರೀಮಾರ್ಗಸಂಚಾರಿಯಂ ತಾಂ
ಕಂಡುಂ ಕಂಡುಂ ಭವನವಲಭೀತುಂಗವಾತಾಯನಸ್ಥಳ್ ।
ಸಾಕ್ಷಾತ್ ಕಾಮಂ ನವನೆನೆ ರತಿವೋಲ್ ಕನ್ನೆಯುಂ ಕಾಂತನಂ ಮೇಣ್[186]
ಗಾಢೋತ್ಕಂಠಾವಶದೆ ಧರಿಪಳ್ ಅಂಗಕೋತ್ಪೀಡೆಯಂ ದಲ್ ‖[187]

ಇಲ್ಲಿ ('ಅಂಗಕ'ವೆಂಬ ಪದದಲ್ಲಿ) ಅನುಕಂಪಾರ್ಥದ 'ಕ' ಎಂಬ ತದ್ಧಿತ ಪ್ರತ್ಯಯವು ವ್ಯಂಜಕ.

ಪರಿಚ್ಛೇದಾತೀತಃ ಸಕಲವಚನಾನಾಮವಿಷಯಃ
ಪುನರ್ಜನ್ಮನ್ಯಸ್ಮಿನ್ ಅನುಭವಪಥಂ ಯೋ ನ ಗತವಾನ್ ।
ವಿವೇಕಪ್ರಧ್ವಂಸಾದುಪಚಿತಮಹಾಮೋಹಗಹನೋ
ವಿಕಾರಃ ಕೋಽಪ್ಯಂತರ್ಜಡಯತಿ ಚ ತಾಪಂ ಚ ಕುರುತೇ ‖[188]

ಪರಿಚ್ಛೇದಾತೀತಂ ಸಕಲವಚಸಂಗಳ್ಗವಿಷಯಂ
ಅದೆಂತುಂ ಮೇಣ್ ಬಾಳೊಳ್ ಅನುಭವಕಣಂ ಬಾರದನಿಶಂ ।
ವಿವೇಕಪ್ರಧ್ವಂಸಂ ಜನಿಯಿಪ ಮಹಾಮೋಹಗಹನಂ
ವಿಕಾರಂ ಮೇಣಂತರ್ಜಡಕರಮಣಂ ಪೀಡನಕರಂ ‖[189]

ಇಲ್ಲಿ ('ಪ್ರಧ್ವಂಸ'ವೆಂಬ ಪದದಲ್ಲಿ) 'ಪ್ರ' ಎಂಬ ಉಪಸರ್ಗವು ವ್ಯಂಜಕ.

ಕೃತಂ ಚ ಗರ್ವಾಭಿಮುಖಂ ಮನಸ್ತ್ವಯಾ
ಕಿಮನ್ಯದೇವಂ ನಿಹತಾಶ್ಚ ನೋ ದ್ವಿಷಃ ।
ತಮಾಂಸಿ ತಿಷ್ಠನ್ತಿ ಹಿ ತಾವದಂಶುಮಾನ್
ನ ಯಾವದಾಯಾತ್ಯುದಯಾದ್ರಿಮೌಲಿತಾಮ್ ‖

185 ಮಾಲತೀಮಾಧವಪ್ರಕರಣ I, ಕಾಮಂದಕಿಯ ವಾಕ್ಯ.

186 ಕನ್ನೆ—ಮಾಲತಿ ; ಕಾಂತ—ಮಾಧವ.

187 ಮಂದಾಕ್ರಾಂತಾ ವೃತ್ತ.

188 ಮಾಲತೀಮಾಧವಪ್ರಕರಣ I, ಮಕರಂದನನ್ನು ಕುರಿತು ಮಾಧವನ ವಾಕ್ಯ.

189 ಶಿಖರಿಣೀವೃತ್ತ.

ಮನದೊಳ್ ಮೂಡಿರೆ ಗರ್ವಂ[140]
ನಿನಗಂ ನುಡಿಯಲ್ಕದೇಕೆ ಪಗೆಯುಂ ನಿಹತಂ |
ರವಿಯುದಯಾಚಲಶಿಖರಮ
ನಡರ್ವನ್ನಮೆ ನಿಲ್ಪುದಲ್ತೆ ಸಂತಮಸಚಯಂ ||

ಇಲ್ಲಿ ತುಲ್ಯಯೋಗಿತಾಲಂಕಾರವನ್ನು ಧ್ವನಿಸುವ ನಿಪಾತ (ಕನ್ನಡ 'ಪಗೆಯುಂ' ಎಂಬಲ್ಲಿನ 'ಉಂ') ವ್ಯಂಜಕ.

ರಾಮೋಽಸೌ ಭುವನೇಷು ವಿಕ್ರಮಗುಣೈಃ ಪ್ರಾಪ್ತಃ ಪ್ರಸಿದ್ಧಿಂ ಪರಾಂ
ಅಸ್ಮದ್ಭಾಗ್ಯವಿಪರ್ಯಯಾದ್ಯದಿ ಪರಂ ದೇವೋ ನ ಜಾನಾತಿ ತಮ್ |
ಬಂದೀವೈಷ ಯಶಾಂಸಿ ಗಾಯತಿ ಮರುದ್ಯಸ್ಯೈಕಬಾಣಾಹತಿ-
ಶ್ರೇಣೀಭೂತವಿಶಾಲತಾಲವಿವರೋದ್ಗೀರ್ಣೈಃ ಸ್ವರೈಃ ಸಪ್ತಭಿಃ ||[141]

ಈ ರಾಮಂ ತ್ರಿಜಗಂಗಳೊಳ್ ಬಲಯುತಂ ತಾನೆಂದು ಕೊಂಡಾಡುವರ್
ದೌರ್ಭಾಗ್ಯಂ ನಮಗಿಂದು ತೀವಿ ತಿಳಿಯಲ್ಕಾರಯ್ ಮಹಾರಾಜನೇ |
ಬಾಣೈಕಾಹತಿಯಿಂದೆ ಬಿಳ್ದ ಮರನೇಳುಂ ಮೇಣ್ ಮಹಾರಂಧ್ರದಿಂ-
ದೇಳುಂ ಸುಸ್ವರದಿಂದೆ ವಾಯುವೊರೆವಂ ತತ್ಕೀರ್ತಿಯಂ ಬಂದಿವೋಲ್ ||

ಇಲ್ಲಿ 'ಈ' ಎಂಬ ಸರ್ವನಾಮ, 'ತ್ರಿಜಂಗಗಳೊಳ್' ಎಂಬ ಪ್ರಾತಿಪದಿಕ, (ಮೂಲದ) 'ಗುಣೈಃ' ಎಂಬ ಬಹುವಚನ—ಎಲ್ಲವೂ ವ್ಯಂಜಕಗಳು. 'ದೌರ್ಭಾಗ್ಯ'ವು 'ನಿನ್ನದು' ಎಂದಾಗಲಿ 'ನನ್ನದು' ಎಂದಾಗಲಿ ಹೇಳದೆ 'ನಮ್ಮದು' ಎಂದು ಎಲ್ಲರನ್ನೂ ಕೂಡಿಸಿ ಹೇಳುವುದೂ ವ್ಯಂಜಕವಾಗಿದೆ. ಹಾಗೆಯೇ ಭಾಗ್ಯವಿಲ್ಲವೆನ್ನುವ ಬದಲು, ಅದರ ವಿಪರ್ಯಯವಾದ ದೌರ್ಭಾಗ್ಯವೇ ಬಂದಾಗಿದೆ ಯೆನ್ನುವುದಾದರೂ.

ತರುಣಿಮನಿ ಕಲಯತಿ ಕಲಾಮನುಮದನಧನುರ್ಭ್ರುವೋಃ ಪಠತ್ಯಗ್ರೇ |
ಅಧಿವಸತಿ ಸಕಲಲಲನಾಮೌಲಿಮಿಯಂ ಚಕಿತಹರಿಣಚಲನಯನಾ ||

ಕಲೆಯಂ ತರುಣಿಮೆಯೊದಗಿಸೆ
ಕಲಿಯಲ್ಕನುಮದನಧನುಷಮಂತೆಯೆ ಪುರ್ವಂ |

---

[140] ಗರ್ವ = ವಿಜಯಾಸಕ್ತಿ.

[141] ರಾಘವಾನಂದನಾಟಕದಲ್ಲಿ ರಾವಣನನ್ನು ಕುರಿತು ವಿಭೀಷಣನ ವಾಕ್ಯವೆಂದು ಟೀಕಾಕಾರರು ಸಂದರ್ಭಸೂಚನೆ ಮಾಡಿದ್ದಾರೆ.

ಲಲನಾಗಣಮೌಲಿಯನೇ
ನೆಲೆಗೊಳ್ವಳ್ ರಮಣಿಯೀಕೆ ಚಂಚಲನಯನಳ್ ||

ಇಲ್ಲಿ 'ಇಮನಿಚ್' ಪ್ರತ್ಯಯ ('ತರುಣಿಮಾ' ಎಂಬಲ್ಲಿ), ಅವ್ಯಯೀಭಾವ ('ಅನುಮದನ ಧನುಷಂ' ಎಂಬಲ್ಲಿ) ಮತ್ತು ಕರ್ಮಭೂತ ಆಧಾರ[142] ('ಮೌಲಿಯನೇ ನೆಲೆಗೊಳ್ವಳ್' ಎಂಬಲ್ಲಿ)ಗಳ ಪ್ರಯೋಗದಲ್ಲಿ ವ್ಯಂಜಕತ್ವವಿದೆ. ಯದ್ಯಪಿ, 'ತರುಣತ್ವವು,' 'ಧನುಸ್ಸಿನ ಸಮೀಪದಲ್ಲಿ,' 'ಮೌಲಿಯಲ್ಲಿ ನಿಲ್ಲುವಳು' ಎಂಬ ಪ್ರಯೋಗಗಳಿಗೂ ಉಕ್ತಪ್ರಯೋಗಗಳಿಗೂ ವಾಚಕತ್ವದಲ್ಲಿ ಏನೂ ವ್ಯತ್ಯಾಸವಿಲ್ಲವಾದರೂ, ಉಕ್ತಪ್ರಯೋಗ ರೂಪಗಳಲ್ಲಿಯೇ ಅನ್ಯಾದೃಶವಾದ ಒಂದು ಚಮತ್ಕಾರವಿಶೇಷವುಂಟು. ಅದೇ ವ್ಯಂಜಕತ್ವವನ್ನು ತಳೆಯುತ್ತದೆ.

ಹೀಗೆಯೇ ಉಳಿದುವುಗಳ ಮರ್ಮವನ್ನೂ ತಿಳಿಯಬೇಕು.

ಅಕ್ಷರ ಮತ್ತು ರಚನೆಗಳ ವ್ಯಂಜಕತ್ವವನ್ನು ಗುಣನಿರೂಪಣೆಯ ಪ್ರಕರಣದಲ್ಲಿ ಉದಾಹರಿಸಲಾಗುತ್ತದೆ. ಕಾರಿಕೆಯಲ್ಲಿ 'ಅಪಿ' ಎಂದಿರುವುದರಿಂದ ಪ್ರಬಂಧಗಳಲ್ಲಿಯೂ ನಾಟಕಾದಿಗಳಲ್ಲಿಯೂ ವ್ಯಂಜಕತ್ವವುಂಟೆಂದರಿಯುವುದು.

ಹಿಂದೆ ಗಣಿಸಿದ ಭೇದಗಳನ್ನೂ ಕೂಡಿಸಿದರೆ ಒಟ್ಟು ರಸಾದಿಗಳ ಧ್ವನಿಯ ಭೇದಗಳು ಆರಾಗುತ್ತವೆ.[143]

ಭೇದಾಸ್ತದೇಕಪಂಚಾಶತ್ || ೨೦೮ ||

ಹೀಗೆ ಎಲ್ಲ ಭೇದಗಳ ಒಟ್ಟು ಸಂಖ್ಯೆ ೫೧.[144] ಅವುಗಳ ಸ್ವರೂಪವನ್ನು ಹಿಂದೆಯೇ ವಿವರಿಸಲಾಗಿದೆ.

---

142 ಸಪ್ತಮ್ಯರ್ಥದಲ್ಲಿ ದ್ವಿತೀಯಾ ಪ್ರಯೋಗ.

143 ವ್ಯಂಗ್ಯದೃಷ್ಟಿಯಿಂದ ರಸಾದಿಗಳು ಒಂದೇ ವಿಧವೆಂದು ಹೇಳಿದ್ದರೂ ವ್ಯಂಜಕದೃಷ್ಟಿಯಿಂದ ಆರು ವಿಧವೆಂಬುದನ್ನೀಗ ಮಮ್ಮಟನು ತೋರಿಸುತ್ತಿದ್ದಾನೆ :—

ರಸಾದಿಧ್ವನಿ

೧. ವಾಕ್ಯ ೨. ಪದ ೩. ಪದಾಂಶ ೪. ರಚನೆ ೫. ಅಕ್ಷರ ೬. ಪ್ರಬಂಧ

144 ಈಗ ವ್ಯಂಗ್ಯ-ವ್ಯಂಜಕಗಳೆರಡರ ದೃಷ್ಟಿಯನ್ನೂ ಕೂಡಿಸಿಕೊಂಡು ಧ್ವನಿವಿಭಾಗವನ್ನು ಹೊಸದಾಗಿ ಮಮ್ಮಟನು ಸೂಚಿಸುತ್ತಿದ್ದಾನೆ. ೧೨೦ ನೆ ಅಡಿ ಟಿಪ್ಪಣಿಯ ವಿಭಾಗಕ್ರಮವನ್ನು ಹೀಗೆ ಮುಂದುವರಿಸಬೇಕು.

(೧೨೯ ನೆಯ ಪುಟದ ಅಡಿಟಿಪ್ಪಣಿ ನೋಡಿ)

**ತೇಷಾಂ ಚಾನ್ಯೋನ್ಯಯೋಜನೇ ॥ ೨೦*d* ॥**

**ಸಂಕರೇಣ ತ್ರಿರೂಪೇಣ ಸಂಸೃಷ್ಟ್ಯಾ ಚೈಕರೂಪಯಾ ॥ ೨೧*ab* ॥**

ಈ ಮೂಲಭೇದಗಳು ಮೂರೆರಸಾದ ಸಂಕರದಿಂದಲೂ ಏಕವಿಧವಾದ ಸಂಸೃಷ್ಟಿಯಿಂದಲೂ ಪರಸ್ಪರ ಸಂಯೋಗಗೊಳ್ಳುವುದನ್ನು ಲೆಕ್ಕಮಾಡುವುದಾದರೆ—

ಶುದ್ಧವಾದ ಭೇದಗಳು ಐವತ್ತೊಂದಾಗುವುದಷ್ಟೇ ಅಲ್ಲ, ಅವುಗಳನ್ನು ಮತ್ತೆ ಅದೇ ಸಂಖ್ಯೆಯಿಂದ ಗುಣಿಸಿ, ಮತ್ತೆ ಅದನ್ನು 'ಸಂಶಯಾಸ್ಪದ', 'ಅನುಗ್ರಾಹ್ಯಾನುಗ್ರಾಹಕ', 'ಏಕ—ವ್ಯಂಜಕಾನುಪ್ರವೇಶ'ವೆಂಬ ಮೂರು ಸಂಕರಪ್ರಕಾರಗಳ[145] ಮತ್ತು ಪರಸ್ಪರ ನಿರಪೇಕ್ಷವಾದ ಒಂದು ಸಂಸೃಷ್ಟಿಪ್ರಕಾರದ ಸಂಖ್ಯೆಯಿಂದ ಎಂದರೆ ನಾಲ್ಕರಿಂದ ಗುಣಿಸಿದರೆ—

**ವೇದಖಾಬ್ಧಿವಿಯಚ್ಚಂದ್ರಾಃ ॥ ೨೧*c* ॥**

ಮಿಶ್ರಧ್ವನಿಭೇದಗಳ ಸಂಖ್ಯೆ—೧೦,೪೦೪ ಆಗುತ್ತದೆ.

ಅದನ್ನು ಶುದ್ಧಭೇದಗಳೊಡನೆ ಕೂಡಿಸಿದರೆ—

(೧೦೮ ನೆಯ ಪುಟದಿಂದ ಮುಂದುವರಿದುದು)

(೧) ಅರ್ಥಾಂತರಸಂ — (೧) ಪದ, (೨) ವಾಕ್ಯ
(೨) ಅತ್ಯಂತತಿರ — (೩) ಪದ, (೪) ವಾಕ್ಯ
(೩) ಅಸಂಲಕ್ಷ್ಯ — ೫ ೬ ೭ ೮ ೯ ೧೦ (ಮೇಲೆ ೧೪೩ ನೆ ಟಿಪ್ಪಣಿ ನೋಡಿ)

ಸಂಲಕ್ಷ್ಯಕ್ರಮ
- ಶಬ್ದಶಕ್ತಿಮೂಲ
  - (೪) ಅಲಂಕಾರ — (೧೧) ಪದ, (೧೨) ವಾಕ್ಯ
  - (೫) ವಸ್ತು — (೧೩) ಪದ, (೧೪) ವಾಕ್ಯ
- ಅರ್ಥಶಕ್ತಿಮೂಲ
  - ಪದ ೬-೧೭ = ೧೨ ಬಗೆ (೧೫-೨೬)
  - ವಾಕ್ಯ ೬-೧೭ = ೧೨ ಬಗೆ (೨೭-೩೮)
  - ಪ್ರಬಂಧ ೬-೧೭ = ೧೨ ಬಗೆ (೩೯-೫೦)
- ಉಭಯಶಕ್ತಿಮೂಲ
  - ವಾಕ್ಯ (ಒಂದು ಬಗೆ ೫೧)

[145] ಇವುಗಳ ವಿವರಣೆಗೆ ಕನ್ನಡ ಧ್ವನ್ಯಾಲೋಕ, ಪು. ೧೬೦-೧೬೫ ನೋಡಿ.

ಶರೇಷುಯುಗಖೇಂದವಃ ॥ ೨೧*d* ॥

ಒಟ್ಟು ಎಲ್ಲ ಧ್ವನಿಭೇದಗಳ ಸಂಖ್ಯೆ ೧೦,೪೫೫ ಆಗುತ್ತದೆ.[146]
ಕೇವಲ ದಿಕ್ಸೂಚನೆಗಾಗಿ ಒಂದೆರಡನ್ನು ಮಾತ್ರ ಉದಾಹರಿಸಲಾಗುತ್ತದೆ.[147]

ಧಣಪಾಹುಣಿಆ ದೇಅರ ಜಾಆಏ ಸುಹಅ ಕಿಂಪಿ ದೇ ಭಣಿಆ।
ರುಅಇ ಪಡೋಹರವಲಹೀಘರಮ್ಮಿ ಅಣುಣಿಜ್ಜಉ ವರಾಈ ॥

ಉತ್ಸವವಸರೆಗಳಿಗೆ ನೋಡಲೋಸುಗ ಬಂದ
ಈಕೆಗೇನಸೊ ನಿನ್ನ ಮಡದಿ ಪೇಳೆ।
ಮೈದುನನೆ, ಮಿಡಿಯುವಳು ಕಣ್ಣೀರನೀ ಮುಗುದೆ
ನೀನವಳನನುನಯಿಸು ಶೂನ್ಯಗೃಹದೆ ॥

ಇಲ್ಲಿ 'ಅನುನಯ'ವೆಂಬುದು 'ಉಪಭೋಗ'ವೆಂಬ ಅರ್ಥಾಂತರದಲ್ಲಿ ಸಂಕ್ರಮಿತವಾಗಿದೆಯೋ ಇಲ್ಲವೆ, ಅನುರಣನರೂಪವಾಗಿ ಉಪಭೋಗವೆಂಬ ವ್ಯಂಗ್ಯಾರ್ಥಕ್ಕೆ ವ್ಯಂಜಕವಾಗಿದೆಯೋ ಎಂದು ಸಂದೇಹಬರುತ್ತದೆ.

ಸ್ನಿಗ್ಧಶ್ಯಾಮಲಕಾಂತಿಲಿಪ್ತವಿಯತೋ ವೇಲ್ಲದ್ಬಲಾಕಾ ಘನಾಃ
ವಾತಾಃ ಶೀಕರಿಣಃ, ಪಯೋದಸುಹೃದಾಮಾನಂದಕೇಕಾಃ ಕಲಾಃ।
ಕಾಮಂ ಸಂತು ದೃಢಂ ಕಠೋರಹೃದಯೋ ರಾಮೋಽಸ್ಮಿ ಸರ್ವಂ ಸಹೇ
ವೈದೇಹೀ ತು ಕಥಂ ಭವಿಷ್ಯತಿ, ಹಹಾ ಹಾ ದೇವಿ ಧೀರಾ ಭವ ॥

ದೆಸೆಯಂ ತಮ್ಮೆಣ್ಣೆಗಪ್ಪಿಂ ಬಳಿದು ತವೆ ಬಲಾಕಾಗಣೋದ್ರೇಕಮಂ ಮಾ-
ಡಿಸಿ ನಿಂದಾ ಮೇಘಗಳ್, ಶೀತಲಪವನಚಯಂ ಸಂತಸಂ ಪೆರ್ಚಲಿಂಪಿಂ-।
ದೆಸೆವಾ ಬರ್ಹಿಸ್ವನಂ ತಾಮಿರಲಿರಲೆನಿಸುಂ, ಸರ್ವಮಂ ತಾಳ್ದಪಂ ಕ—
ರ್ಕಶಚಿತ್ತಾತ್ಮಂ ಗಡಾ ರಾಮನೆನಲಬಲೆಯಾ ಸೀತೆಯೆಂತಿರ್ಪಳೋ ಮೇಣ್ ॥

[146] ಮಮ್ಮಟನ ನಿಷ್ಕರ್ಷದೃಷ್ಟಿಯ ಪರಾಕಾಷ್ಠೆಯನ್ನಿಲ್ಲಿ ಕಾಣಬಹುದು. ಅಸಂಖ್ಯವೆಂದು ಆನಂದವರ್ಧನನೇ ಕೈಬಿಟ್ಟಿದ್ದರೂ, ಮಮ್ಮಟನು ಧ್ವನಿಪ್ರಕಾರಗಳ ಸಂಖ್ಯೆಯಿಷ್ಟೇ ಎಂದು ಲೆಕ್ಕ ಮಾಡಿ ನಿರ್ಣಯಿಸುತ್ತಿದ್ದಾನೆ. ಈ ಪ್ರವೃತ್ತಿಯು ಮಧ್ಯಯುಗದ ಸಂಸ್ಕೃತ ಶಾಸ್ತ್ರಕಾರರಲ್ಲಿಲ್ಲ ವ್ಯಕ್ತವಾಗುತ್ತದೆ; ಸಂಸ್ಕೃತ ಶಾಸ್ತ್ರಗಳ ಆರಂಭಯುಗದಲ್ಲಿ ಇದು ಕಾಣಬರುವುದಿಲ್ಲ.

[147] ಈ ಉದಾಹರಣೆಗಳು ಧ್ವನ್ಯಾಲೋಕದಲ್ಲೂ ಬಂದಿವೆ. ಹೋಲಿಸಿ—**ಕನ್ನಡ ಧ್ವನ್ಯಾಲೋಕ**, ಪು. ೧೬೧ ಮತ್ತು ೨೬.

ಇಲ್ಲಿ (ಮೂಲದ 'ಲಿಪ್ತ' ಮತ್ತು 'ಪಯೋದಸುಹೃದಾಂ' ಎಂಬೆರಡು ಅತ್ಯಂತ ತಿರಸ್ಕೃತ ವಾಚ್ಯಗಳ ಸಂಸೃಷ್ಟಿಯಿದೆ. ಅವುಗಳೊಡನೆ 'ರಾಮೋಽಸ್ಮಿ' ಎಂಬ ಅರ್ಥಾಂತರ ಸಂಕ್ರಮಿತ ವಾಚ್ಯದ ಅನುಗ್ರಾಹ್ಯಾನುಗ್ರಾಹಕಭಾವ-ಸಂಬಂಧದ ಸಂಕರವೂ, 'ರಾಮ' ಶಬ್ದದ ವ್ಯಂಜಕಾನುಪ್ರವೇಶದಿಂದ ಅರ್ಥಾಂತರಸಂಕ್ರಮಿತ ವಾಚ್ಯಧ್ವನಿಯ ಸಂಕರವೂ ಎರಡೂ ಸಂಮಿಶ್ರವಾಗಿವೆ. ಹೀಗೆ ಉಳಿದ ಉದಾಹರಣೆಗಳನ್ನೂ ಊಹಿಸಿಕೊಳ್ಳುವುದು.

ಇಲ್ಲಿಗೆ ಕಾವ್ಯಪ್ರಕಾಶದಲ್ಲಿ 'ಧ್ವನಿನಿರ್ಣಯ'ವೆಂಬ ನಾಲ್ಕನೆಯ ಉಲ್ಲಾಸ ಮುಗಿದುದು.

ಕವಿತಾತರಂಗರಂಗದೊ-
ಳವಿರತಮೆನೆ ಮುಳುಗಿ ಮೆರೆವ ರಸಿಕಜನರ್ಕಳ್ ।
ನವರಸಭಾವವಿಚಾರಮ-
ನವಧಾರಿಸಿ ಸವಿಗೆ ಮಮ್ಮಟೋಕ್ತಕ್ರಮದಿಂ ॥

# ಐದನೆಯ ಉಲ್ಲಾಸ

ಕಳೆದ 'ಉಲ್ಲಾಸ'ದಲ್ಲಿ 'ಧ್ವನಿ'ಯನ್ನು ನಿರ್ಣಯಿಸಲಾಯಿತು; ಈಗ ಗುಣೀಭೂತವ್ಯಂಗ್ಯದ[1] ಪ್ರಭೇದಗಳನ್ನು ಹೇಳುತ್ತಾನೆ:

**ಅಗೂಢಮಪರಸ್ಯಾಂಗಂ ವಾಚ್ಯಸಿದ್ಧ್ಯಂಗಮಸ್ಫುಟಮ್ ।**
**ಸಂದಿಗ್ಧತುಲ್ಯಪ್ರಾಧಾನ್ಯೇ ಕಾಕ್ವಾಕ್ಷಿಪ್ತಮಸುಂದರಮ್ ॥ ೧ ॥**

**ವ್ಯಂಗ್ಯಮೇವಂ ಗುಣೀಭೂತವ್ಯಂಗ್ಯಸ್ಯಾಷ್ಟೌ ಭಿದಾಃ ಸ್ಮೃತಾಃ । ೨ *ab* ।**

(೧) 'ಅಗೂಢ,'[2] (೨) 'ಅಪರಾಂಗ,'[3] (೩) 'ವಾಚ್ಯಸಿದ್ಧ್ಯಂಗ,'[4] (೪) 'ಅಸ್ಫುಟ,'[5] (೫) 'ಸಂದಿಗ್ಧಪ್ರಾಧಾನ್ಯ,'[6] (೬) 'ತುಲ್ಯಪ್ರಾಧಾನ್ಯ,'[7] (೭) 'ಕಾಕ್ವಾಕ್ಷಿಪ್ತ,'[8] (೮) 'ಅಸುಂದರ'[9]—ಈ ಎಂಟು ಬಗೆಯ ವ್ಯಂಗ್ಯಗಳೂ ಗುಣೀಭೂತವ್ಯಂಗ್ಯದ ಭಿನ್ನಪ್ರಕಾರಗಳು.

---

1 ಮೊದಲನೆಯ ಉಲ್ಲಾಸದಲ್ಲಿಯೇ ಗುಣೀಭೂತವ್ಯಂಗ್ಯವನ್ನು 'ಮಧ್ಯಮಕಾವ್ಯ'ವೆಂದು ಉಲ್ಲೇಖಿಸಿದೆ. ಈ ಉಲ್ಲಾಸದಲ್ಲಿ ಅದರ ಪ್ರಭೇದಗಳನ್ನು ವಿವರಿಸಲಾಗುತ್ತದೆ. ಈ ಉಲ್ಲಾಸದ ಉದ್ದಕ್ಕೂ ಮಮ್ಮಟನು ಆನಂದವರ್ಧನ ಮತ್ತು ಅಭಿನವಗುಪ್ತರ ವಿಚಾರಸರಣಿಯನ್ನು ಅನುಸರಿಸಿದ್ದಾನೆ.

2 ಅಗೂಢ=ಅತಿಸ್ಫುಟ. ವ್ಯಂಗ್ಯವು 'ಧ್ವನಿ'ಯೆನಿಸಬೇಕಾದರೆ ಅತಿಸ್ಫುಟವಾಗಿಯೂ ಇರಬಾರದು, ಅಸ್ಫುಟವಾಗಿಯೂ ಇರಬಾರದು. ಅನತಿಸ್ಫುಟವಾಗಿರಬೇಕು. ಮೊದಲ ಎರಡು ವಿಕಲ್ಪಗಳೂ ಗುಣೀಭೂತವ್ಯಂಗ್ಯದಲ್ಲೇ ಸೇರುತ್ತವೆ.

3 'ಅಪರ'ವೆಂದರೆ ವಾಕ್ಯದ ತಾತ್ಪರ್ಯ. ಅದು ಬೇರೆಯಾಗಿದ್ದು ಅದಕ್ಕೆ ವ್ಯಂಗ್ಯವು ಅಂಗವಾದರೆ 'ಅಪರಾಂಗ'ವೆನಿಸುತ್ತದೆ.

4 ವಾಚ್ಯಾರ್ಥವು ಉಪಪನ್ನವೆನಿಸುವುದಕ್ಕೆ ವ್ಯಂಗ್ಯದ ಸಹಾಯ ಅಗತ್ಯವಿದ್ದಾಗ ಈ ಹೆಸರು.

5 ಮೇಲೆ 2ನೆಯ ಅಡಿಟಿಪ್ಪಣಿಯನ್ನು ನೋಡಿ.

6 ವಾಚ್ಯಾರ್ಥವು ಪ್ರಧಾನವೋ ವ್ಯಂಗ್ಯಾರ್ಥವು ಪ್ರಧಾನವೋ ಸಂಶಯಾಸ್ಪದವಾಗಿರುವುದು. ಇಲ್ಲಿ ಪ್ರಧಾನವೆಂದರೆ ಕವಿಯ ವಿವಕ್ಷಿತಾರ್ಥ, ತಾತ್ಪರ್ಯವೆಂದಭಿಪ್ರಾಯ.

7 ಎರಡಕ್ಕೂ ಸಮಾನವಾದ ಪ್ರಾಧಾನ್ಯವಿರುವುದು ವ್ಯಕ್ತವಾದಾಗ ಈ ಹೆಸರು.

8 'ಕಾಕು' ಅಥವಾ ಧ್ವನಿವಿಕಾರದಿಂದ ಪ್ರಕಟವಾಗುವ ವ್ಯಂಗ್ಯಾರ್ಥ. ಇದಕ್ಕೂ ಕಾಕುವಿನಿಂದಲೇ ಬರುವ 'ಧ್ವನಿ'ಗೂ ವ್ಯತ್ಯಾಸವುಂಟು. ಇದನ್ನು ತಿಳಿಯಲು ಹಿಂದೆ ಮೂರನೆಯ ಉಲ್ಲಾಸ, 'ತಥಾಭೂತಾಂ ದೃಷ್ಟ್ವಾ . . .' ಎಂಬ ಉದಾಹರಣೆ ಮತ್ತು ಅದರ ಮುಂದಿನ ವಿವರಣೆಗಳನ್ನೋದಿ.

9 ವಸ್ತುವು ಗ್ರಾಮ್ಯವಾಗಿದ್ದರೆ 'ಅಸುಂದರ'ವೆನಿಸುತ್ತದೆ.

ಕಾಮಿನಿಯ ಕುಚಕಲಶದಂತೆ ಗೂಢವ್ಯಂಗ್ಯವು ಚಮತ್ಕಾರವನ್ನುಂಟುಮಾಡುತ್ತದೆ;[10] ಆದರೆ ಅಗೂಢವ್ಯಂಗ್ಯವು ತನ್ನ ಅತಿಸ್ಫುಟತೆಯಿಂದಲೇ ವಾಚ್ಯಕ್ಕೆ ಸಮಾನವಾಗಿ ಬಿಡುವುದರಿಂದ ಅದು (ಧ್ವನಿಯಲ್ಲ;) ಗುಣೀಭೂತವ್ಯಂಗ್ಯವೇ.

೧. ಅಗೂಢವ್ಯಂಗ್ಯಕ್ಕೆ ಉದಾಹರಣೆ :—

ಯಸ್ಯಾಸುಹೃತ್ಕೃತತಿರಸ್ಕೃತಿರೇತ್ಯ ತಪ್ತ-
ಸೂಚೀವ್ಯಧವ್ಯತಿಕರೇಣ ಯುನಕ್ತಿ ಕರ್ಣೌ ।
ಕಾಂಚೀಗುಣಪ್ರಥನಭಾಜನಮೇಷ ಸೋऽಸ್ಮಿ
ಜೀವನ್ನ ಸಂಪ್ರತಿ ಭವಾಮಿ ಕಿಮಾವಹಾಮಿ ॥[11]

ಅವಮಾನಂಗೊಂಡಾರಿಂ
ಕಿವಿಯಂ ಗಡ ಸೂಜಿಯಿಂದೆ ಚುಚ್ಚಿದರರಿಗಳ್ ।
ಅವನೇ ನಾಂ ಗತಜೀವಂ
ಪವಣಿಸುವೆಂ ಗೆಜ್ಜೆಮಣಿಯನೀಸಂ ಪಡೆದೆಂ ॥

ಇಲ್ಲಿ (ಬದುಕಿರುವವನೇ ಹೇಳುವ) 'ಗತಜೀವ'ನೆಂಬ ಮಾತು ಅರ್ಥಾಂತರದಲ್ಲಿ (ಎಂದರೆ ಗತಸತ್ವನೆಂಬರ್ಥದಲ್ಲಿ) ಪರ್ಯವಸನ್ನವಾಗುತ್ತದೆ.[12] ಹಾಗೆಯೇ—

ಉನ್ನಿದ್ರಕೋಕನದ ರೇಣು ಪಿಶಂಗಿತಾಂಗಾ
ಗಾಯನ್ತಿ ಮಂಜು ಮಧುಪಾ ಗೃಹದೀರ್ಘಿಕಾಸು ।
ಏತಚ್ಚಕಾಸ್ತಿ ಚ ರವೇರ್ನವಬಂಧುಜೀವ-
ಪುಷ್ಪಚ್ಛದಾಭಮುದಯಾಚಲ ಚುಂಬಿ ಬಿಂಬಮ್ ॥[13]

ಅರಳಿದ ಪದ್ಮದ ರಜದಿಂ
ದರುಣಿಸೆ ಮೈ ಗಾನಗೈವುವಲರುಣಿ ಕೊಳದೊಳ್ ।

---

10 ಇದು 'ಧ್ವನಿ' ಅಥವಾ ಉತ್ತಮಕಾವ್ಯದ ವರ್ಣನೆ.

11 ಕೀಚಕನಿಂದ ಪರಾಭವಗೊಂಡ ದ್ರೌಪದಿಗೆ ಬೃಹನ್ನಳೆಯ ವೇಷದಲ್ಲಿರುವ ಅರ್ಜುನನು ಹೇಳುವ ಮಾತೆಂದು 'ಸುಧಾಸಾಗರ' ಟೀಕೆಯಲ್ಲಿ ಹೇಳಿದೆ; ಮೂಲ ಗೊತ್ತಿಲ್ಲ.

12 ಇಲ್ಲಿ ಹೇಳುವವನು ನಷ್ಟಪರಾಕ್ರಮನೆಂಬ ವ್ಯಂಗ್ಯಾಂಶವು ಅತಿಸ್ಫುಟವಾಗಿಯೇ ಎದ್ದು ತೋರುವುದರಿಂದ ಅಗೂಢ; ಅದಕ್ಕೆ 'ಧ್ವನಿ'ಯ ಪ್ರಾಶಸ್ತ್ಯವೂ ಇಲ್ಲ.

13 ಮಲಗಿದ ರಾಜದಂಪತಿಗಳನ್ನು ಪ್ರಭಾತದಲ್ಲಿ ಎಬ್ಬಿಸಲು ಹಾಡುವ ಒಂದು ಮಂಗಳಗೀತ.

ಅರಳಿದ ಕೆಂಪಿನ ಪೂಗೊಂ
ಚಲೆನಲ್ ಪೂರ್ವಾದ್ರಿಚುಂಬಿಯೀ ರವಿಬಿಂಬಂ ||[14]

ಇಲ್ಲಿ 'ಚುಂಬಿ'ಯೆಂಬ ಪದವು ತನ್ನ ಮೂಲಾರ್ಥವನ್ನು ಸಂಪೂರ್ಣವಾಗಿ ಪರಿತ್ಯಜಿಸಿ 'ಸಂಯುಕ್ತ'ವೆಂಬ ಅರ್ಥಾಂತರದಲ್ಲಿ ಮಾತ್ರ ನಿರತವಾಗಿರುವುದರಿಂದ ಇದು 'ಅತ್ಯಂತ ತಿರಸ್ಕೃತವಾಚ್ಯ'ವಾದ ಗುಣೀಭೂತವ್ಯಂಗ್ಯಕ್ಕೆ ಉದಾಹರಣೆ. ಮತ್ತು—

ಅತ್ರಾಸೀತ್ ಫಣಿಪಾಶಬಂಧನವಿಧಿಃ ಶಕ್ತ್ಯಾ ಭವದ್ದೇವರೇ
ಗಾಢಂ ವಕ್ಷಸಿ ತಾಡಿತೇ ಹನುಮತಾ ದ್ರೋಣಾದ್ರಿರತ್ರಾಹೃತಃ |
ದಿವ್ಯೈರಿಂದ್ರಜಿದತ್ರ ಲಕ್ಷ್ಮಣಶರೈರ್ಲೋಕಾಂತರಂ ಪ್ರಾಪಿತಃ
ಕೇನಾಪ್ಯತ್ರ ಮೃಗಾಕ್ಷಿ ರಾಕ್ಷಸಪತೇಃ ಕೃತ್ತಾ ಚ ಕಂಠಾಟವೀ ||[15]

ಇದೆ ತಾಣಂ ಫಣಿಪಾಶಬಂಧನಕಿದೇ ತಾಣಂ ಗಡಾ ಮೈದುನಂ-
ಗೆರ್ದೆಯೊಳ್ ಗಾಸಿಯದಾಗಿರಲ್ ಹನುಮನಾ ದ್ರೋಣಾದ್ರಿಯಂ ತಂದನೌ |
ಇದೆ ಕೊಳ್ ಸಗ್ಗಕೆ ತಮ್ಮನಟ್ಟಿದ ನೆಲಂ ಶಕ್ರಾರಿಯಂ ಬಾಣದಿಂ-
ದಿದರೊಳ್ ರಾಕ್ಷಸರಾಜಕಂಠವನಮುಂ ಛಿನ್ನಂ ಸಮಂತೊರ್ವನಿಂ ||

ಇಲ್ಲಿ 'ಒರ್ವನಿಂ' ಎಂಬುದು ಅರ್ಥಶಕ್ತಿಮೂಲವಾದ ಅನುರಣನದಿಂದ 'ನನ್ನಿಂದ' ಎಂಬರ್ಥವನ್ನು ಧ್ವನಿಸುವುದು ಅತಿಸ್ಫುಟವಾಗಿರುವ ಕಾರಣ ಗುಣೀಭೂತ ವ್ಯಂಗ್ಯವೇ. ಅದರ ಬದಲು 'ಅಂತಹಾ' ಎಂಬ ಪಾಠಾಂತರ ಮಾಡಿಕೊಂಡು ರಾವಣನಿಗೆ ವಿಶೇಷಣವಾಗಿಸಿದರೆ ಆಗ ಗೂಢವ್ಯಂಗ್ಯವಾಗಿ ಕಾವ್ಯದ ಸೊಬಗು ಹೆಚ್ಚುವುದು.[16]

---

[14] ಇಲ್ಲಿ 'ಬೆಳಗಾಯಿತು' ಎಂಬ ವ್ಯಂಗ್ಯವು ಅತಿಸ್ಫುಟವಾಗಿಯೇ ಇದೆ.

[15] ರಾಜಶೇಖರನ ಬಾಲರಾಮಾಯಣ ನಾಟಕ, X. ರಾವಣನ ಸಂಹಾರವಾದಮೇಲೆ ಅಯೋಧ್ಯೆಗೆ ಬರುತ್ತಿರುವಾಗ ರಾಮನು ಸೀತೆಗೆ ಹೇಳುವ ವಾಕ್ಯ.

[16] ಧ್ವನಿದೃಷ್ಟಿಯಿಂದ ಒಂದೊಂದು ಪದದಲ್ಲಿಯೂ ಹೇಗೆ ಸ್ವಾರಸ್ಯವನ್ನು ಹುಡುಕಬಹುದೆಂಬುದಕ್ಕೆ ಇದು ನಿದರ್ಶನ. ಕೇವಲ ಅಲಂಕಾರದೃಷ್ಟಿಯಿಂದ ಇದು ಸಾಧ್ಯವಾಗಲಾರದು. ಮಮ್ಮಟನು ಸೂಚಿಸುವ ಪಾಠಾಂತರವು ನಿಜಕ್ಕೂ ಶ್ಲೋಕದ ಭಾವಕ್ಕೆ ಹೆಚ್ಚು ಪೋಷಕವಾಗುತ್ತದೆ.

೨. 'ಅಪರಾಂಗ' ವೆಂದರೆ ತಾತ್ಪರ್ಯ ಇಷ್ಟೆ:—ಬೇರೊಂದು ರಸಾದಿ ಇಲ್ಲವೆ ವಾಚ್ಯವಸ್ತು ವಾಕ್ಯದ ಮುಖ್ಯಾರ್ಥ[17]ವಾಗಿರುವಾಗ ಅದಕ್ಕೆ ಅಂಗವಾಗಿ ಬರುವ ರಸಾದಿ ಇಲ್ಲವೆ ಅನುರಣನರೂಪವಾದ ಧ್ವನಿಯೆಂದು.

ಅಯಂ ಸ ರಶನೋತ್ಕರ್ಷೀ ಪೀನಸ್ತನವಿಮರ್ದನಃ।
ನಾಭ್ಯೂರುಜಘನಸ್ಪರ್ಶೀ ನೀವೀವಿಸ್ರಂಸನಃ ಕರಃ ‖[18]

ಇದೆ ರಶನೋತ್ಕರ್ಷಣಪಟು
ವಿದೆ ಪೀವರಕುಚವಿಮರ್ದಕಂ ವರಹಸ್ತಂ।
ಪದೆಪಿಂ ನೀವಿಯ ಸೆಳೆದ
ತ್ತಿದೆ ತಾಂ ನಾಭ್ಯೂರುಜಘನಸಂಸ್ಪರ್ಶನದಿಂ ‖

ಇಲ್ಲಿ ಶೃಂಗಾರರಸವು ಕರುಣರಸಕ್ಕೆ ಅಂಗವಾಗಿರುವುದರಿಂದ ಗುಣೀಭೂತ ವ್ಯಂಗ್ಯ.[19] ಹಾಗೆಯೇ—

ಕೈಲಾಸಾಲಯಭಾಲಲೋಚನರುಚಾ ನಿರ್ವರ್ತಿತಾಲಕ್ತಕ-
ವ್ಯಕ್ತಿಃ ಪಾದನಖದ್ಯುತಿರ್ಗಿರಿಭುವಃ ಸಾ ವಃ ಸದಾ ತ್ರಾಯತಾಮ್ ।
ಸ್ಪರ್ಧಾಬಂಧಸಮೃದ್ಧಯೇವ ಸುದೃಢಂ ರೂಢಾ ಯಯಾ ನೇತ್ರಯೋಃ
ಕಾಂತಿಃ ಕೋಕನದಾನುಕಾರಸರಸಾ ಸದ್ಯಃ ಸಮುತ್ಸಾರ್ಯತೇ ‖

ಕೈಲಾಸೇಶ್ವರ ಭಾಲಲೋಚನರುಚಿಪ್ರೋದ್ರಂಜಿತಾಲಕ್ತಕಂ
ಗೌರೀಪಾದನಖಪ್ರಭಾಪಟಲಮೇ ಕಾಯ್ಗೆಮ್ಮನೆಂದೆಂದಿಗುಂ।
ಸ್ಪರ್ಧಾಬಂಧಸಮೃದ್ಧಿಯಿಂದೆನೆ ದೃಢಂ ರೂಢಂ ಗಡಾ ಕಣ್ಗಳೊಳ್
ಕೆಂಪೆಲ್ಲಂ ಪರಿದೋಡುತಿರ್ಪುದದರಾ ಪ್ರಾಬಲ್ಯದಿಂ ಪೇಳ್ವುದೇಂ ‖

---

17 ಮುಖ್ಯಾರ್ಥ=ಮುಖ್ಯತಾತ್ಪರ್ಯ ಅಥವಾ ಕವಿಯಿಂದ ವಿವಕ್ಷಿತವಾದ ಅರ್ಥ.

18 ಮಹಾಭಾರತ, ಸ್ತ್ರೀಪರ್ವ, XXIV. ರಣಾಂಗಣದಲ್ಲಿ ಭೂರಿಶ್ರವನ ಛಿನ್ನಹಸ್ತವನ್ನು ಅಪ್ಪಿಕೊಂಡು ಅವನ ಹೆಂಡಿರು ಮಾಡುವ ಪ್ರಲಾಪ. ಇಲ್ಲಿ 'ರಸವತ್' ಎಂಬ ಅಲಂಕಾರವುಂಟು ಮುಂದೆ ನೋಡಿ.

19 ಈ ಸಂದರ್ಭದಲ್ಲಿ ಕವಿಗೆ ಕರುಣರಸ ಮಾತ್ರವೇ ಮುಖ್ಯವಾಗಿ ವಿವಕ್ಷಿತಾರ್ಥವೆನ್ನುವುದರಲ್ಲಿ ಸಂದೇಹಕ್ಕೆಡೆಯಿಲ್ಲ. ವ್ಯಂಗ್ಯವಾದ ಶೃಂಗಾರವು ಆದ್ದರಿಂದಲೇ ಗುಣೀಭೂತವೆನಿಸುತ್ತದೆ.

ಇಲ್ಲಿಯ ಶೃಂಗಾರರಸವು ಕವಿಯ (ಭಕ್ತಿ) ಭಾವಕ್ಕೆ ಅಂಗವಾಗಿರುವುದರಿಂದ ಗುಣೀಭೂತವ್ಯಂಗ್ಯ.[20]

ಅತ್ಯುಚ್ಚಾಃ ಪರಿತಃ ಸ್ಫುರನ್ತಿ ಗಿರಯಃ, ಸ್ಫಾರಾಸ್ತಥಾಂಭೋಧಯಃ
ತಾನೇತಾನಪಿ ಬಿಭ್ರತೀ ಕಿಮಪಿ ನ ಕ್ಲಾಂತಾಸಿ ತುಭ್ಯಂ ನಮಃ।
ಆಶ್ಚರ್ಯೇಣ ಮುಹುರ್ಮುಹುಃ ಸ್ತುತಿಮಿತಿ ಪ್ರಸ್ತೌಮಿ ಯಾವದ್ಭುವಃ
ತಾವದ್ ಬಿಭ್ರದಿಮಾಂ ಸ್ಮೃತಸ್ತವ ಭುಜೋ ವಾಚಸ್ತತೋ ಮುದ್ರಿತಾಃ ॥

ಅತ್ಯುಚ್ಚಂಗಳಿವೀ ಪ್ರಭೂತಗಿರಿಗಳ್ ಸ್ಫೀತಂಗಳಂಭೋಧಿಗಳ್
ಪೊತ್ತಿರ್ದುಂ ಗಡಮೆಲ್ಲಮಾ ನಿನಗನಾಯಾಸಂ ಸಮುಸ್ಕಾರಮೆಂ-
ದಾಂ ಭೂದೇವಿಯಸುದ್ದಮಾಗಿ ನುತಿಸಲ್ ಪ್ರಾರಂಭಿಪನ್ನಂ ಗಡಾ
ಭಾರಂ ನಿಂದಿಹ ನಿನ್ನ ತೋಳ ನೆನೆದೆಂ, ಮಾತಲ್ಲಿಗೇ ನಿಂತುದಯ್ ॥

ಇಲ್ಲಿ ಭೂದೇವಿಯನ್ನು ಕುರಿತ ರತಿಭಾವವು (=ಭಕ್ತಿ) ರಾಜನನ್ನು ಕುರಿತ ರತಿಭಾವಕ್ಕೆ ಅಂಗವಾಗಿದೆ.[21]

ಬಂದೀಕೃತ್ಯ ನೃಪದ್ವಿಷಾಂ ಮೃಗದೃಶಸ್ತಾಃ ಪಶ್ಯತಾಂ ಪ್ರೇಯಸಾಂ
ಶ್ಲಿಷ್ಯನ್ತಿ ಪ್ರಣಮನ್ತಿ ಲಾನ್ತಿ ಪರಿತಶ್ಚುಂಬಂತಿ ತೇ ಸೈನಿಕಾಃ।
ಅಸ್ಮಾಕಂ ಸುಕೃತೈರ್ದೃಶೋರ್ನಿಪತಿತೋಽಸ್ಯೌಚಿತ್ಯವಾರಾಂನಿಧೇ
ವಿಧ್ವಸ್ತಾ ವಿಪದೋಽಖಿಲಾಸ್ತದಿತಿ ತೈಃ ಪ್ರತ್ಯರ್ಥಿಭಿಃ ಸ್ತೂಯಸೇ ॥

ಸೆರೆಗೊಂಡೂರ್ಜಿತವೈರಿನಾರಿಯರನಾ ಕಾಂತರ್ ವಲಂ ನೋಳ್ಪಿನಂ
ಸೆಳೆವರ್ ಬಾಗುವರಪ್ಪುವರ್ ಪರಿಗಳಿಂ ನಿನ್ನಾಳ್ಗಳಾಚುಂಬಿಪರ್ ।
ಎಮಗೀಗಳ್ ತವ ದರ್ಶನಂ ಸುಕೃತದಿಂದೌಚಿತ್ಯವಾರಾಂಬುಧೀ
ದೊರೆಕೊಂಡತ್ತು ವಿಪತ್ತು ಪೋದುದೆನುತುಂ ಬಣ್ಣಿಪ್ಪರಾ ವೈರಿಗಳ್ ॥

---

20 ಮಮ್ಮಟನ ಪ್ರಕಾರ ಭಕ್ತಿಯು ರಸವಲ್ಲ ; ರತಿಯೆಂಬ ಸ್ಥಾಯಿಭಾವವೇ ದೇವಾದಿಗಳಿಗೆ ಸಂಬಂಧಿಸಿದಾಗ ಆ ಹೆಸರಿಗೆ ಪಾತ್ರವಾಗುತ್ತದೆ. ಹಿಂದಿನ ಉದಾಹರಣೆಯಲ್ಲಿ ಒಂದು ರಸವು ಮತ್ತೊಂದು ರಸಕ್ಕೆ ಅಂಗವಾಗಿದ್ದರೆ ಇಲ್ಲಿ ಭಾವಕ್ಕೆ (=ಸ್ಥಾಯಿಭಾವಕ್ಕೆ) ಅಂಗವಾಗಿದೆ.

21 ಇದು ಒಂದು ಭಾವವು ಮತ್ತೊಂದು ಭಾವದ ಅಂಗವಾಗುವುದಕ್ಕೆ ಉದಾಹರಣೆ. ಇಲ್ಲಿ 'ಪ್ರೇಯಸ್' ಎಂಬ ಅಲಂಕಾರವನ್ನು ಹೇಳಬಹುದು.

ಇಲ್ಲಿ ಪೂರ್ವಾರ್ಧದ ರಸಾಭಾಸವೂ ಉತ್ತರಾರ್ಧದ ಭಾವಾಭಾಸವೂ ಪ್ರಕೃತ ರಾಜನನ್ನು ಕುರಿತ (ರತಿ)ಭಾವಕ್ಕೆ ಅಂಗವಾಗಿವೆ.[22]

ಅವಿರಲಕರವಾಲಕಂಪನೈರ್ಭ್ರುಕುಟೀತರ್ಜನಗರ್ಜನೈರ್ಮುಹುಃ ।
ದದೃಶೇ ತವ ವೈರಿಣಾಂ ಮದಃ ಸ ಗತಃ ಕ್ವಾಪಿ ತವೇಕ್ಷಣೇ ಕ್ಷಣಾತ್ ॥

ಅಸಿಯಂ ಜಡಿಯುವ, ಪುರ್ವಿನ
ದೆಸೆಯಂ ಗಂಟಿಕ್ಕಿ ಮುಳಿವ, ಬೊಬ್ಬಿರಿವದಟುಂ ।
ವಸುಧೇಶನೆ ಪರಿದುದು ನಿ
ನ್ನ ಸುಹೃಜ್ಜನರಲ್ಲಿ ನಿನ್ನ ನೀಕ್ಷಿಪ ಚಣದೊಳ್ ॥

ಇಲ್ಲಿ ಭಾವಶಾಂತಿಯು (ರತಿ)ಭಾವಕ್ಕೆ ಅಂಗವಾಗಿದೆ.[23]

ಸಾಕಂ ಕುರಂಗಕದೃಶಾ ಮಧುಪಾನಲೀಲಾಂ
ಕರ್ತುಂ ಸುಹೃದ್ಭಿರಪಿ ವೈರಿಣಿ ತೇ ಪ್ರವೃತ್ತೇ ।
ಅನ್ಯಾಭಿಧಾಯಿ ತವ ನಾಮ ವಿಭೋ ಗೃಹೀತಂ
ಕೇನಾಪಿ ತತ್ರ ವಿಷಮಾಮಕರೋದವಸ್ಥಾಮ್ ॥

ಸತಿಯರ ಮೇಣ್ ಕೆಳೆಯರ ಸಂ-
ಗತಿಯೊಳ್ ಮಧುಪಾನಸುಖದೊಳರಿಯಿರ್ಪಾಗಳ್ ।
ಮತಿ ಪೆರತೊಂದಿರಲೊರ್ವಂ
ನುತಿಸಿದ ಭವದೀಯನಾಮಮೆಂತಂಜಿಸಿತೋ ॥

ಇಲ್ಲಿ ಕೋಪವೆಂಬ ಭಾವದ ಉದಯವು ರಾಜನನ್ನು ಕುರಿತ ರತಿಭಾವಕ್ಕೆ ಅಂಗ.[24]

---

[22] ಇಲ್ಲಿ ವೈರಿನಾರಿಯರಿಗೆ ಸೈನಿಕರ ವಿಷಯದಲ್ಲಿ ರತಿಯಿಲ್ಲದಿದ್ದರೂ ಸೈನಿಕರು ಬಲಾತ್ಕರಿಸುತ್ತಿದ್ದಾರೆ. ಹೀಗೆ ಏಕಮುಖವಾದ ರತಿಕ್ರಿಯೆಯ ವರ್ಣನೆ ಬಂದರೆ ಅದು ಶೃಂಗಾರರಸವಲ್ಲ; ಶೃಂಗಾರ ರಸಾಭಾಸ. ಹಾಗೆಯೇ ಶತ್ರುರಾಜರು ಪ್ರೀತಿಯಿಲ್ಲದಿದ್ದರೂ ಜೀವವನ್ನುಳಿಸಿಕೊಳ್ಳುವುದಕ್ಕೋಸ್ಕರ ಇವನ ಸ್ತುತಿಪಾಠಕರಾಗಿರುವುದರಿಂದ ಅಲ್ಲಿಯೂ ರತಿಭಾವವಿಲ್ಲ; ರತಿಭಾವಾಭಾಸ ಮಾತ್ರ ಉಂಟು. ಇಲ್ಲಿ 'ಊರ್ಜಸ್ವಿ'ಯೆಂಬ ಅಲಂಕಾರವನ್ನು ಗುರುತಿಸಬಹುದು.

[23] ಇಲ್ಲಿ 'ಮದ'ವೆಂಬ ಭಾವವು ಪ್ರಶಮಗೊಂಡುದನ್ನು ವರ್ಣಿಸಿರುವುದರಿಂದ 'ಭಾವಶಾಂತಿ' ಯಿದೆ. ಅಲಂಕಾರವು 'ಸಮಾಹಿತ'.

[24] ಇಲ್ಲಿ ಅಲಂಕಾರ 'ಭಾವೋದಯ'ವೆನ್ನಬಹುದು.

ಅಸೋಢಾ ತತ್ಕಾಲೋಲ್ಲಸದಸಹಭಾವಸ್ಯ ತಪಸಃ
ಕಥಾನಾಂ ವಿಶ್ರಂಭೇಷ್ವಥ ಚ ರಸಿಕಶ್ಶೈಲದುಹಿತುಃ।
ಪ್ರಮೋದಂ ವೋ ದಿಶ್ಯಾತ್ ಕಪಟವಟುವೇಷಾಪನಯನೇ
ತ್ವರಾಶೈಥಿಲ್ಯಾಭ್ಯಾಂ ಯುಗಪದಭಿಯುಕ್ತಃ ಸ್ಮರಹರಃ ॥

ತಡೆಯಲ್ಕಾರದೆ ಕಷ್ಟಸಾಧ್ಯತಪಮಂ ತತ್ಕಾಲದೊಳ್ ಗೌರಿಯಾ,
ನುಡಿವಳ್ ತನ್ನ ಸಖೀಜನಂಗಳೆಡೆಯೊಳ್ ಮೇಣೇನಸೆಂದಾರಯಲ್।
ಗಡ ಕೌತೂಹಲಮುಳ್ಳ, ಛದ್ಮವಟುತಾವೇಷಂಬಿಡಲ್ಕೊರ್ಮೆಯೇ
ಮೃಡನೊಳ್ ಬಂದೆರಡುಂ ತ್ವರಾಶಿಥಿಲತಾಭಾವಂಗಳೀಗಿಷ್ಟಮಂ ॥

ಎಂಬಲ್ಲಿ ಆವೇಗ ಮತ್ತು ಧೈರ್ಯವೆಂಬ ಎರಡು ಭಾವಗಳ ಸಂಧಿ ಶಿವನನ್ನು ಕುರಿತ ರತಿಭಾವಕ್ಕೆ ಅಂಗ.[25]

ಪಶ್ಯೇತ್ ಕಶ್ಚಿಚ್ಚಲ ಚಪಲ ರೇ ಕಾ ತ್ವರಾಹಂ ಕುಮಾರೀ
ಹಸ್ತಾಲಂಬಂ ವಿತರ ಹಹಹಾ ವ್ಯುತ್ಕ್ರಮಃ ಕ್ವಾಸಿ ಯಾಸಿ।
ಇತ್ಥಂ ಪೃಥ್ವೀಪರಿವೃಢ ಭವದ್ವಿದ್ವಿಷೋಽರಣ್ಯವೃತ್ತೇಃ
ಕನ್ಯಾ ಕಂಚಿತ್ ಫಲಕಿಸಲಯಾನ್ಯಾದದಾನಾಭಿಧತ್ತೇ ॥

ನೋಡುವರಯ್ಯೊ ! ಪೋ ಚಪಲನೇ ! ತ್ವರೆಯೇವುದು ! ಕನ್ಯೆಯಾನಣಂ !
ನೀಡು ಕರಾವಲಂಬಮನೆ ! ಹಾ ! ಗತಿಯೇಂ ! ಬಿಸುಟೆಲ್ಲಿಗೈದಿದಯ್ !
ನಾಡೆಯುಮಿಂತು ಭೂಮಿಪತಿಯೇ, ವನವಾಸದೊಳಿರ್ಪ ವೈರಿಯಾ
ಗಾಡಿಯ ಕನ್ನೆ ಗೋಳಿಡುವಳಯ್ ತಳಿರ್ವಣ್ಗಳನೆತ್ತುತಾವಗಂ ॥[26]

ಎಂಬಲ್ಲಿ ಶಂಕೆ, ಅಸೂಯೆ, ಧೃತಿ, ಸ್ಮೃತಿ, ಶ್ರಮ, ದೈನ್ಯ, ವಿಬೋಧ, ಔತ್ಸುಕ್ಯವೆಂಬೀ ಭಾವಗಳ ಶಬಲತೆ ರಾಜನನ್ನು ಕುರಿತ ರತಿಭಾವಕ್ಕೆ ಅಂಗ.

---

[25] 'ತ್ವರಾ' ಶಬ್ದದಿಂದ ಆವೇಗವೆಂಬ ಭಾವವೂ 'ಶಿಥಿಲತಾ' ಶಬ್ದದಿಂದ 'ಧೈರ್ಯ'ವೆಂಬ ಭಾವವೂ ವ್ಯಂಗ್ಯ.

[26] ಕಾಡಿನಲ್ಲಿ ಕನ್ನೆಯೊಬ್ಬಳು ರತಾರ್ಥಿಯಾದ ಪಾಂಥನಿಗೆ ಹೀಗೆ ಹೇಳುವಳೆಂದು ಮಾಣಿಕ್ಯಚಂದ್ರನು ಸಂದರ್ಭಸೂಚನೆ ಮಾಡಿದ್ದಾನೆ. ಇಲ್ಲಿ ಒಂದೊಂದು ವಾಕ್ಯವೂ ಒಂದೊಂದು ಭಾವಸೂಚಕವಾಗಿದೆ. 'ಶಬಲತೆ'ಯೆಂದರೆ ಸಂಮಿಶ್ರಣ.

ಇವೇ ರಸವತ್, ಮುಂತಾದ ಅಲಂಕಾರಗಳೆಂದೂ ಎನಿಸುತ್ತವೆ.[27] ಯದ್ಯಪಿ ಪೂರ್ವದ ಆಲಂಕಾರಿಕರಾರೂ ಭಾವೋದಯ, ಭಾವಸಂಧಿ, ಭಾವಶಬಲತೆಗಳನ್ನು ಅಲಂಕಾರಗಳೆಂದು ಹೇಳಿಲ್ಲವಾದರೂ, ಯಾರಾದರೂ ಹೊಸದಾಗಿ ಹೇಳಬಹುದೆಂಬ ಅಭಿಪ್ರಾಯದಿಂದ ಹೀಗೆ ಹೇಳಿದೆ.[28] ಹಾಗೆಯೇ ಧ್ವನಿ, ಗುಣೀಭೂತವ್ಯಂಗ್ಯಗಳಿಗೆ ಕೂಡ ಅವುಗಳ ಪ್ರಭೇದಗಳೊಂದಿಗೆ 'ಸಂಕರ' ಇಲ್ಲವೆ 'ಸಂಸೃಷ್ಟಿ'ಯಿಲ್ಲದ ಲಕ್ಷ್ಯವೇ ದುರ್ಲಭವೆಂಬಂತಿದ್ದರೂ, "ಯಾವುದು ಪ್ರಧಾನವೋ ಅದರ ಮೇಲಿಂದ ಹೆಸರನ್ನು ಕೊಡುವುದು ರೂಢಿ"[29]ಯೆಂಬ ನ್ಯಾಯವನ್ನನುಸರಿಸಿ ಕೆಲವು ಕಡೆ 'ಧ್ವನಿ'ಯೆಂದೂ ಕೆಲವು ಕಡೆ 'ಗುಣೀಭೂತ ವ್ಯಂಗ್ಯ'ವೆಂದೂ ವ್ಯವಹರಿಸಿದೆ.[30]

---

[27] ಪ್ರಾಚೀನ ಆಲಂಕಾರಿಕರು ರಸವು ಪ್ರತೀತವಾಗುವೆಡೆಗಳನ್ನೆಲ್ಲ ರಸವದಲಂಕಾರಕ್ಕೆ ಲಕ್ಷ್ಯಗಳೆಂದೇ ಭಾವಿಸುತ್ತಿದ್ದರು. ಅವರು ಸ್ಥೂಲವಾಗಿ ನಿರೂಪಣೆ ಮಾಡಿದ್ದರೇ ಹೊರತು ರಸವು ಗುಣೀಭೂತವೂ ಆಗಬಹುದೆಂಬ ಸೂಕ್ಷ್ಮ ವಿವೇಕಕ್ಕೆ ಹೋಗಿಯೇ ಇರಲಿಲ್ಲ. ಈ ವಿಮರ್ಶೆಗೆ ಮೊದಲು ಕೈಹಾಕಿದವನೆಂದರೆ ಆನಂದವರ್ಧನನೇ. ಆ ವಿಮರ್ಶೆಯ ಫಲವಾಗಿ 'ರಸಗಳು ಪ್ರಧಾನವಾಗಿದ್ದರೆ ಎಲ್ಲ ಅಲಂಕಾರಗಳಂತೆ ಅವು ಬಾಹ್ಯಶೋಭಾವರ್ಧಕಗಳಾಗಿ ನಿಲ್ಲುವುದಿಲ್ಲ; ಕಾವ್ಯದ ಜೀವಜೀವಾಳವಾಗಿ ಎಂದರೆ ಅಲಂಕಾರ್ಯವಾಗಿ ಮಾತ್ರ ಉಳಿಯುತ್ತವೆ. ಅವನ್ನು ವಾಚ್ಯ-ವಾಚಕ ವೈಚಿತ್ರ್ಯಕಾರಿಗಳಾದ ಅಲಂಕಾರಗಳನ್ನುವುದು ತಪ್ಪು; ವ್ಯಂಗ್ಯ-ವ್ಯಂಜಕ ಭಾವವೇ ಅವುಗಳ ರಹಸ್ಯವಾದ್ದರಿಂದ 'ಧ್ವನಿ' ಅಥವಾ ಉತ್ತಮ ಕಾವ್ಯವೆನ್ನಬೇಕು. ಆದರೆ ಅವು ಗುಣೀಭೂತವಾಗಿ ಬಂದರೆ ಮಾತ್ರ ರಸವದಾದಿ ಅಲಂಕಾರವೆನ್ನಬಹುದು,' ಎಂಬ ಸಿದ್ಧಾಂತವು ಸ್ಥಾಪಿತವಾಯಿತು. ಮಮ್ಮಟನೂ ಇಲ್ಲಿ ಅದನ್ನೇ ಪ್ರಸ್ತಾಪಿಸುತ್ತಿದ್ದಾನೆ. 'ರಸವದಾದಿ' ಅಲಂಕಾರಗಳೆಂದರೆ ಪ್ರಾಚೀನರು ಒಪ್ಪಿರುವ ರಸವತ್, ಪ್ರೇಯಸ್, ಊರ್ಜಸ್ವಿ, ಮತ್ತು ಸಮಾಹಿತ. ಇಲ್ಲಿಯೇ ಇವುಗಳನ್ನು ಮಮ್ಮಟನು ಪ್ರತಿಪಾದಿಸಿರುವುದರಿಂದ ಮತ್ತೆ ಅಲಂಕಾರಪ್ರಕರಣದಲ್ಲಿ ಇವುಗಳ ಹೆಸರನ್ನೆತ್ತುವುದಿಲ್ಲ.

[28] ಇಲ್ಲಿ ಮಮ್ಮಟನು ಆನಂದವರ್ಧನನಿಗಿಂತ ಒಂದು ಹೆಜ್ಜೆ ಮುಂದಿಟ್ಟಿರುವುದು ಕಾಣುತ್ತದೆ. ರಸಾದಿಗಳಲ್ಲಿ 'ರಸ', 'ಭಾವ', 'ರಸಾಭಾಸ' ಮತ್ತು 'ಭಾವಾಭಾಸ' ಮತ್ತು 'ಭಾವಶಾಂತಿ'ಗಳನ್ನು ಕ್ರಮವಾಗಿ ಪ್ರಾಚೀನಾಲಂಕಾರಿಕರು ರಸವತ್, ಪ್ರೇಯಸ್, ಊರ್ಜಸ್ವಿ, ಸಮಾಹಿತ, ಎಂಬ ಅಲಂಕಾರಗಳಲ್ಲಿ ಸೇರಿಸಿದ್ದರು. ರಸಾದಿಗಳಲ್ಲಿ ಉಳಿದ ಭಾವೋದಯ, ಭಾವಸಂಧಿ, ಭಾವಶಬಲತೆಗಳನ್ನು ನಿರ್ದಿಷ್ಟ ಹೆಸರಿನ ಅಲಂಕಾರಗಳೆಂದು ಪರಿಗಣಿಸಿರಲಿಲ್ಲ. ಆನಂದವರ್ಧನನು ಕೂಡ ಗುಣೀಭೂತವಾದ 'ರಸಾದಿ'ಗಳೆಲ್ಲಕ್ಕೂ ಸಾಮಾನ್ಯವಾಗಿ ರಸವದಾದ್ಯಲಂಕಾರತ್ವವನ್ನು ಹೇಳುತ್ತಾನೆಯೇ ಹೊರತು, ವಿಶೇಷ ವಿಮರ್ಶೆಗೆ ಕೈಹಾಕುವುದಿಲ್ಲ. ಇಲ್ಲಿ ಮಮ್ಮಟನು ಈ ಮಾತನ್ನೆತ್ತಿ ಇವಕ್ಕೂ ಅದೇ ಹೆಸರುಗಳ ಅಲಂಕಾರತ್ವವುಂಟೆಂದೊಪ್ಪಬೇಕೆಂದು ಖಚಿತವಾಗಿ ಹೇಳುತ್ತಿದ್ದಾನೆ. ಹಿಂದಿನವರು ಹಾಗೆ ಹೇಳಿರುವರೆಂದಲ್ಲ; ವಿಚಾರಶೀಲರು ಹಾಗೆ ಹೇಳಲೇಬೇಕಾಗುವ ಪ್ರಸಂಗ ತಪ್ಪಿದಲ್ಲವೆಂಬ ಅಭಿಪ್ರಾಯದಿಂದ.

[29] ಇದು ಸಂಸ್ಕೃತ ದಾರ್ಶನಿಕರೆಲ್ಲರೂ ಒಪ್ಪಿರುವ ನ್ಯಾಯ.

[30] ಯಾವುದೇ ನಿರ್ದಿಷ್ಟ ಲಕ್ಷ್ಯದಲ್ಲಿಯಾಗಲಿ ವ್ಯಂಗ್ಯಾರ್ಥವು ಧ್ವನಿಯೋ ಗುಣೀಭೂತವೋ

ಜನಸ್ಥಾನೇ ಭ್ರಾಂತಂ ಕನಕಮೃಗತೃಷ್ಣಾಂಧಿತಧಿಯಾ
ವಚೋ ವೈದೇಹೀತಿ ಪ್ರತಿಪದಮುದಶ್ರು ಪ್ರಲಪಿತಮ್ ।
ಕೃತಾಲಂಕಾಭರ್ತುರ್ವದನಪರಿಪಾಟೀಷುಘಟನಾ
ಮಯಾಪ್ತಂ ರಾಮತ್ವಂ ಕುಶಲವಸುತಾ ನ ತ್ವಧಿಗತಾ ॥[31]

ಅಲೆದೆಂ ಸ್ವರ್ಣಮೃಗಾಪ್ತಿಯೆಂಬ ಕುರುಡಿಂದಾನುಂ ಜನಸ್ಥಾನದೊಳ್
ತವೆ ವೈದೇಹಿಯೆನುತ್ತುಮಂತೊರಲಿದೆಂ ಕಣ್ಣೀರ್ಗಳಂ ಸೂಸುತುಂ ।
ಶರಸಂಧಾನಮನಂತೆ ಗೈದೆನೆನೆ (ಸ) ಲಂಕಾಭರ್ತನಾಸ್ಯಾಂತದೊಳ್
ಪಡೆದೆಂ ರಾಮತೆಯುಂ ಕರಂ ಕುಶಲವಸ್ವಾಸೂತಿಯುಂ ಕಾಣೆನಾಂ ॥

ಇಲ್ಲಿ ಶಬ್ದಶಕ್ತಿಮೂಲ ಹಾಗು ಅನುರಣನರೂಪವಾಗಿ[32] ಶ್ರೀರಾಮನೊಡನೆ ಉಪಮಾನೋಪಮೇಯಭಾವವು ಧ್ವನಿತವಾಗಿದೆ: ಆದರೆ ಇದು ವಾಚ್ಯವಾದ ಅರ್ಥಕ್ಕೆ ಕೇವಲ ಅಂಗವಾಗಿದೆ.

ಆಗತ್ಯ ಸಂಪ್ರತಿ ವಿಯೋಗವಿಸಂಷ್ಠುಲಾಂಗೀಂ
ಅಂಭೋಜಿನೀಂ ಕ್ವಚಿದಪಿ ಕ್ಷಪಿತತ್ರಿಯಾಮಃ ।

---

ಎಂಬ ಸಂದೇಹ ತಲೆದೋರುವಂತಿರುವುದೇ ಹೊರತು ಶಪಥಮಾಡಿ ಇದವಿತ್ಥಮೆನ್ನುವಂತಿರುವುದಿಲ್ಲ. ಇವೆರಡರ ಲಕ್ಷಣಗಳೂ ಸಂಕೀರ್ಣವಾಗಿ ತೋರುವ ಪ್ರಸಂಗಗಳೇ ಹೆಚ್ಚು. ಹಾಗಿದ್ದರೂ ಯುಕ್ತಿಯನ್ನಾಶ್ರಯಿಸಿ ಯಾವುದಕ್ಕೆ ಪ್ರಾಧಾನ್ಯವಿತ್ತರೆ ಶ್ಲೋಕದ ಚಮತ್ಕಾರವು ಹೆಚ್ಚುವುದೆನ್ನಿಸುವುದೋ ಅದನ್ನನುಲಕ್ಷಿಸಿ 'ಧ್ವನಿ' ಇಲ್ಲವೆ 'ಗುಣೀಭೂತವ್ಯಂಗ್ಯ'ವೆಂದು ನಿರ್ಣಯಿಸಬೇಕು.

[31] ಈ ಪದ್ಯವು ಹನುಮನ್ನಾಟಕದಲ್ಲಿ ಬರುತ್ತದೆ. ಭಟ್ಟವಾಚಸ್ಪತಿಯ ಪದ್ಯವೆಂದು ಕ್ಷೇಮೇಂದ್ರನ 'ಕವಿಕಂಠಾಭರಣ'ದಲ್ಲಿ ಹೇಳಿದೆ. ಇಲ್ಲಿ ಶ್ಲೇಷೆಯು ಬಹಳ ಹೃದಯಂಗಮವಾಗಿ ಬಂದಿದೆ. ರಾಮನು ಜನಸ್ಥಾನವೆಂಬ ಅರಣ್ಯದಲ್ಲಿ ಸುವರ್ಣಮೃಗಕ್ಕಾಗಿ ಬಗೆಗುರುಡನಾಗಿ ಅಲೆದಾಡಿದಂತೆಯೇ ನಿರ್ವಿಣ್ಣನಾದ ಕವಿಯೂ ಜನರೆಡೆಯಲ್ಲಿ ಹಣವೆಂಬ ಮರೀಚಿಕೆಯನ್ನರಸುತ್ತಾ ಕುರುಡನಂತಲೆಯುತ್ತಿದ್ದಾನೆ. ಹೆಜ್ಜೆಹೆಜ್ಜೆಗೂ ರಾಮನು 'ವೈದೇಹಿ', 'ವೈದೇಹಿ' ಎಂದು ಪ್ರಲಾಪಗೈದಂತೆಯೇ ಇವನಾದರೂ 'ದೇಹಿ, ದೇಹಿ' ಎಂದು ಅಡಿಗಡಿಗೂ ಒರಲಿಕೊಳ್ಳುತ್ತಿದ್ದಾನೆ. ರಾಮನು ಲಂಕಾಭರ್ತನ ವದನಗಣದಲ್ಲಿ ಬಾಣಪ್ರಯೋಗಮಾಡಿದರೆ ಇವನು 'ಕಾಭರ್ತ' ಅಥವಾ ಕೆಟ್ಟ ಒಡೆಯನ ಮುಖವನ್ನು ನೋಡುತ್ತಾ ಅನುಸರಿಸುತ್ತಾನೆ. ಹೀಗೆ ಈತನಿಗೂ ರಾಮತ್ವವೇನೋ ಬಂದಂತಾಯಿತೆಂದರೂ 'ಕುಶಲವಸುತೆ' (ಬಹುವ್ರೀಹಿ ಸಮಾಸ) ಅಥವಾ ಸೀತೆ ಮಾತ್ರ ಸಿಕ್ಕುವುದಿಲ್ಲ; ಕುಶಲ-ವಸುತೆಗಳೂ ದೊರೆಯುವುದಿಲ್ಲ. ಕನ್ನಡ ಅನುವಾದದಲ್ಲಿ ಒಂದೆರಡು ಶ್ಲೇಷೆಗಳು ಬಂದಿಲ್ಲ.

[32] ಇದಕ್ಕೇ ಸಂಲಕ್ಷ್ಯಕ್ರಮವ್ಯಂಗ್ಯವೆಂದೂ ಹೆಸರು. ಹಿಂದೆ ಬರೆದ ರಸಾದಿ ಉದಾಹರಣೆಗಳೆಲ್ಲವೂ ಅಸಂಲಕ್ಷ್ಯಕ್ರಮವ್ಯಂಗ್ಯಗಳು. ಇಲ್ಲಿ ಶ್ಲೇಷೆಯಿರುವುದರಿಂದ ಇದು ಶಬ್ದಶಕ್ತಿಮೂಲ.

ಏತಾಂ ಪ್ರಸಾದಯತಿ ಪಶ್ಯ ಶನೈಃ ಪ್ರಭಾತೇ
ತನ್ವಂಗಿ ಪಾದಪತನೇನ ಸಹಸ್ರರಶ್ಮಿಃ ॥[33]

ಇರುಳಂ ಕಳೆದೆಲ್ಲಿಯೊ ಬಂ
ದಿರಲಸುನಯಿಸಲ್ಕೆ ಪದ್ಮಿನೀವಿರಹಿಣಿಯಂ।
ತರಣಿಯೆ ಮೆಲ್ಲನಿವಂ ಪೊ
ಳ್ತರೆಯೊಳಿದೋ ಪಾದಪತಿತನಪ್ಪಂ ಸುದತೀ ॥

ಇಲ್ಲಿ ಅರ್ಥಶಕ್ತಿಯ ಮಹಿಮೆಯಿಂದ ಅಭಿವ್ಯಕ್ತವಾಗುವ 'ವಸ್ತು'ವೆಂದರೆ ನಾಯಕ—ನಾಯಿಕಾ ವ್ಯವಹಾರ. ಆದರೆ ಇದು ಪರ್ಯವಸಾನದಲ್ಲಿ ಏತನ್ನಿರಪೇಕ್ಷ ಹಾಗು ವಾಚ್ಯ ವಸ್ತುವಾದ ರವಿ-ಕಮಲಿನೀ ವೃತ್ತಾಂತದಲ್ಲಿ ಅಧ್ಯಾರೋಪಿತ ವಾಗುವುದರಿಂದ (ಧ್ವನಿಯಲ್ಲ;) 'ಅಪರಾಂಗ'ವೆಂಬ ಗುಣೀಭೂತವ್ಯಂಗ್ಯವೇ.[34]

೩. 'ವಾಚ್ಯಸಿದ್ಧ್ಯಂಗ'ವಾದ ವ್ಯಂಗ್ಯಕ್ಕೆ ಉದಾಹರಣೆ:—

ಭ್ರಮಿಮರತಿಮಲಸಹೃದಯತಾಂ ಪ್ರಲಯಂ ಮೂರ್ಛಾಂ
ತಮಃಶರೀರಸಾದಮ್।
ಮರಣಂ ಚ ಜಲದಭುಜಗಜಂ ಪ್ರಸಹ್ಯ ಕುರುತೇ ವಿಷಂ
ವಿಯೋಗಿನೀನಾಮ್ ॥

ಜಲದಭುಜಗಜವಿಷವು ವಿರಹಿಣಿಗೆ ಭ್ರಮೆಯನ್ನು,
ಹೃದಯದಲಿ ಅರತಿ ಆಲಸ್ಯಗಳನು।
ಪ್ರಲಯಮೂರ್ಛೆಗಳನ್ನು ತಮವನ್ನು ಕೃಶತೆಯನು
ಮರಣವನೆ ತಾ ಕಡೆಗೆ ಬಿಡದೆ ತಹುದು ॥

ಇಲ್ಲಿ 'ವಿಷ'ವೆಂಬ ಪದದಿಂದ ಹಾಲಾಹಲವೆಂಬರ್ಥ ವ್ಯಂಗ್ಯವಾಗಿದ್ದರೂ ಅದು ಧ್ವನಿಯಲ್ಲ; ಏಕೆಂದರೆ 'ಜಲದಭುಜಗ'ವೆಂಬ ವಾಚ್ಯ ರೂಪಕಾಲಂಕಾರದ ಸಿದ್ಧಿ ಅಥವಾ ನಿಷ್ಪತ್ತಿಗೆ ಅದು ನಿಮಿತ್ತವಾಗಿಬಿಟ್ಟಿದೆ.[35]

[33] ಇದೂ ಸಂಲಕ್ಷ್ಯಕ್ರಮವ್ಯಂಗ್ಯವೇ. ಆದರೆ ಇದು ಅರ್ಥಶಕ್ತಿಮೂಲ.

[34] 'ಸಮಾಸೋಕ್ತಿ'ಯೆಂಬ ಅಲಂಕಾರವೆಂದರೆ ಇದೇ. ಇದರ ವಿವರಣೆಗೆ ಮುಂದೆ ಹತ್ತನೆಯ ಉಲ್ಲಾಸವನ್ನು ನೋಡಿ.

[35] 'ವಿಷ'ವೆಂದರೆ ಸಂದರ್ಭೋಚಿತವಾಗಿ ಇಲ್ಲಿ 'ಜಲ'ವೆಂಬುದೇ ವಾಚ್ಯಾರ್ಥ; ಆದ್ದರಿಂದ 'ಹಾಲಾಹಲ'ವೆಂಬ ಅರ್ಥಾಂತರವನ್ನು ವ್ಯಂಗ್ಯವೆಂದೇ ತಿಳಿಯಬೇಕು. ಆದರೆ ಜಲದ (=ಮೋಡ) ವನ್ನು ಭುಜಗವೆಂದು ವಾಚ್ಯವಾಗಿ ರೂಪಿಸಿದೆ. ಅದರ ಸಮರ್ಥನೆಗೆ ವ್ಯಂಗ್ಯಾರ್ಥವೇ ಅಗತ್ಯವಾಗಿದೆ, ವಾಚ್ಯಾರ್ಥವಲ್ಲ. ಹೀಗೆ ವಾಚ್ಯಾರ್ಥಸಿದ್ಧಿಗೆ ವ್ಯಂಗ್ಯವು ಅಂಗವಾಗಿರುವುದರಿಂದ ಇಲ್ಲಿ ಗುಣೀಭೂತ.

ಗಚ್ಛಾಮ್ಯಚ್ಯುತ, ದರ್ಶನೇನ ಭವತಾ ಕಿಂ ತೃಪ್ತಿರುತ್ಪದ್ಯತೇ
ಕಿಂ ತ್ವೇವಂ ವಿಜನಸ್ಥಯೋರ್ಹತಜನಸ್ಸಂಭಾವಯತ್ಯನ್ಯಥಾ ।
ಇತ್ಯಾಮಂತ್ರಣಭಂಗಿಸೂಚಿತವೃಥಾವಸ್ಥಾನಖೇದಾಲಸಾಂ
ಆಶ್ಲಿಷ್ಯನ್ ಪುಲಕೋತ್ಕರಾಂಚಿತತನುರ್ಗೋಪೀಂ ಹರಿಃ ಪಾತು ವಃ ॥

ಪೋಪೆಂ, ಅಚ್ಯುತ, ಕೆಮ್ಮನೀಕ್ಷಣದಿನೇಂ ಸಂತೃಪ್ತಿಯೈತಪ್ಪುದೇ
ಮತ್ತೇಕಾಂತದೊಳಿರ್ಪುದಾಗೆ ಜನಗಳ್ ಬೇರೊಂದನಾಲೋಚಿಪರ್ ।
ಇಂತಾಮಂತ್ರಣಭಂಗಿಸೂಚಿತವೃಥಾವಸ್ಥಾನಖೇದಾಂಗಿಯಂ
ತಾನಾಲಿಂಗಿಸಿ ಗೋಪಿಯಂ ಪುಲಕಿತಂ ರಕ್ಷಿಕ್ಕೆ ಕೃಷ್ಣಂ ಸದಾ ॥

ಇಲ್ಲಿ 'ಅಚ್ಯುತ' (=ಕರಗದಿರುವವನು) ಎಂಬ ಪದದಿಂದ ವ್ಯಂಗ್ಯವಾದ ಅರ್ಥವು ಆಮಂತ್ರಣಭಂಗಿಯೆಂಬ ವಾಚ್ಯಾರ್ಥದ ಸಿದ್ಧಿಗೆ ಅಂಗವಾಗಿದೆ.[36] ಹಿಂದಿನ ಶ್ಲೋಕದಲ್ಲಿ ವಕ್ತೃ ಒಬ್ಬನೇ ; ಇಲ್ಲಿ ಮಾತ್ರ ಇಬ್ಬರು, ಎಂಬುದರ ಮೇಲಿಂದ ಈ ಲಕ್ಷ್ಯಗಳ ವೈಶಿಷ್ಟ್ಯವನ್ನರಿಯುವುದು.[37]

೪. 'ಅಸ್ಫುಟವ್ಯಂಗ್ಯ'ಕ್ಕೆ ಉದಾಹರಣೆ :—

ಅದೃಷ್ಟೇ ದರ್ಶನೋತ್ಕಂಠಾ ದೃಷ್ಟೇ ವಿಚ್ಛೇದಭೀರುತಾ ।
ನಾದೃಷ್ಟೇನ ನ ದೃಷ್ಟೇನ ಭವತಾ ಲಭ್ಯತೇ ಸುಖಮ್ ॥[38]

---

[36] 'ಅಚ್ಯುತ' ಎಂಬ ಶಬ್ದಕ್ಕೆ ವಾಚ್ಯಾರ್ಥ-ಕೃಷ್ಣ. ಆದರೆ ಚ್ಯುತನಲ್ಲದವನು, ದ್ರವಿಸದವನು, ಧೈರ್ಯಗುಂದದವನು ಇತ್ಯಾದಿ ಯೌಗಿಕಾರ್ಥಗಳೆಲ್ಲ ವ್ಯಂಗ್ಯಾರ್ಥಗಳು. ಶ್ಲೋಕದಲ್ಲಿ ಕೃಷ್ಣನ ಕಠಿನಹೃದಯತೆಯನ್ನೇ ಮುಂದೆ ವರ್ಣಿಸಿರುವುದರಿಂದ ಈ ವ್ಯಂಗ್ಯಾರ್ಥಗಳಿಗೆಲ್ಲ ಪ್ರಸಕ್ತಿಯುಂಟು. ಆದರೆ ಕವಿಯು 'ಆಮಂತ್ರಣಭಂಗಿ'ಯೆಂಬ ಶಬ್ದದಿಂದ ಇವಕ್ಕೆ ಪ್ರಾಧಾನ್ಯಬಾರದಂತೆ ಮಾಡಿದ್ದಾನೆ. 'ಆಮಂತ್ರಣ'ವೆಂದರೆ ಹೆಸರು ಹಿಡಿದು (ಸಂಬೋಧಿಸಿ) ಕರೆಯುವುದು. ಇದು ಉಪಪನ್ನವಾಗಬೇಕಾದರೆ 'ಅಚ್ಯುತ' ಎಂಬ ಶಬ್ದದ ವಾಚ್ಯಾರ್ಥವೇ ಮುಖ್ಯವಾಗಬೇಕಾಗುತ್ತದೆ ; ವ್ಯಂಗ್ಯಾರ್ಥಗಳು ಅಪ್ರಧಾನವಾಗಬೇಕಾಗುತ್ತದೆ. ಆದರೆ 'ಭಂಗಿ' ಎಂಬ ಶಬ್ದದಿಂದ ವ್ಯಂಗ್ಯಾರ್ಥಗಳೂ ಕವಿಗೆ ಅಭಿಪ್ರೇತವೆಂಬ ಅಂಶ ಕೂಡ ವ್ಯಕ್ತವಾಗುತ್ತದೆ.

[37] ಹಿಂದಿನ ಉದಾಹರಣೆಗೂ ಇದಕ್ಕೂ ಇರುವ ಅಂತರವನ್ನಿಲ್ಲಿ ಸ್ಪಷ್ಟಪಡಿಸಿದೆ. ಹಿಂದಿನ ಶ್ಲೋಕವಾಕ್ಯವು ಪೂರ್ಣವಾಗಿ ಕವಿಯದು ; ಇಲ್ಲಿ ಉತ್ತರಾರ್ಧ ಮಾತ್ರ ಕವಿಯ ಬಾಯಲ್ಲಿ ಬಂದಿದೆ ; ಪೂರ್ವಾರ್ಧವನ್ನು ಗೋಪಿಯ ಬಾಯಲ್ಲಿ ಆಡಿಸಿದ್ದಾನೆ.

[38] ಈ ಶ್ಲೋಕದ ವಾಚ್ಯಾಂಶವೇ ಹೃದಯಂಗಮವಾಗಿದೆ. ಯಾವ ವ್ಯಂಗ್ಯಾರ್ಥವನ್ನು ಹೇಳಿದರೂ ಈ ಸೌಂದರ್ಯಕ್ಕೆ ಕುಂದು ಬಂದಂತೆ ಭಾಸವಾಗುತ್ತದೆ. ಆದ್ದರಿಂದಲೇ ವ್ಯಂಗ್ಯವು ಗುಣೀಭೂತ.

ಕಾಣದಿರಲ್ ಕಾಂಬುಮ್ಮಳ
ಮೇವೇಳ್ಪುದು ಕಾಣೆ ವಿರಹದಂಜಿಕೆ ಬೆಳೆಗುಂ |
ಕಾಣದಿರಲ್ ಮೇಣ್ ಕಾಣಲ್
ತಾಣಮೆ ತಾಸಿಲ್ಲ ಸುಖಕೆ ನಿನ್ನಿಂದೆಂದುಂ ||

ಇಲ್ಲಿ 'ಪ್ರಿಯತಮನೆ, ನಿನ್ನ ದರ್ಶನವೂ ದೊರೆಯಬೇಕು, ವಿಯೋಗವೂ ಆಗಬಾರದು, ಹೀಗಾಗಲು ಏನು ಮಾಡಬೇಕೋ ಅದನ್ನು ಮಾಡು' ಎಂಬ ವ್ಯಂಗ್ಯಾರ್ಥವು ಕ್ಲಿಷ್ಟಕಲ್ಪನೆಯನ್ನೊಳಗೊಳ್ಳುವುದರಿಂದ 'ಅಸ್ಫುಟ'.

೫. 'ಸಂದಿಗ್ಧಪ್ರಾಧಾನ್ಯ' ವ್ಯಂಗ್ಯಕ್ಕೆ ಉದಾಹರಣೆ :—

ಹರಸ್ತು ಕಿಂಚತ್ ಪರಿವೃತ್ತಧೈರ್ಯಃ
ಚಂದ್ರೋದಯಾರಂಭ ಇವಾಂಬುರಾಶಿಃ |
ಉಮಾಮುಖೇ ಬಿಂಬಫಲಾಧರೋಷ್ಠೇ
ವ್ಯಾಪಾರಯಾಮಾಸ ವಿಲೋಚನಾನಿ ||[39]

ಹರನೆರ್ದೆಯದಿರಲ್ಕಿನಿಸುಂ
ವರಚಂದ್ರೋದಯದೊಳುಳ್ಕುವಂಬುಧಿಸದೃಶಂ |
ಗಿರಿಜಾಮುಖದೊಳ್ ಬಿಂಬಾ
ಧರಶೋಭಿಯೊಳೊಡನೆ ಕಣ್ಗಳಂ ತಿರುಗಿಸಿದಂ ||

ಇಲ್ಲಿ 'ಚುಂಬಿಸಲು ಇಚ್ಛಿಸಿದನು' ಎಂಬ ವ್ಯಂಗ್ಯಾರ್ಥ ಪ್ರಧಾನವೋ ಇಲ್ಲವೆ 'ಕಣ್ಣುಗಳನ್ನು ತಿರುಗಿಸಿದನು' ಎಂಬ ವಾಚ್ಯಾರ್ಥವೇ ಪ್ರಧಾನವೋ ಎಂಬುದು ಸಂಶಯಗ್ರಸ್ತ.

೬. 'ತುಲ್ಯ-ಪ್ರಾಧಾನ್ಯ' ವ್ಯಂಗ್ಯಕ್ಕೆ ಉದಾಹರಣೆ :—

ಬ್ರಾಹ್ಮಣಾತಿಕ್ರಮತ್ಯಾಗೋ ಭವತಾಮೇವ ಭೂತಯೇ |
ಜಾಮದಗ್ನ್ಯಸ್ತಥಾ ಮಿತ್ರಮನ್ಯಥಾ ದುರ್ಮನಾಯತೇ ||[40]

---

39 ಕಾಳಿದಾಸನ ಕುಮಾರಸಂಭವ, III. ವಸಂತನ ಆಗಮನದಿಂದ ಹರನ ಮೇಲಾದ ಪರಿಣಾಮದ ವರ್ಣನೆ. ಉಪಮೆಯು ಸುಂದರವಾಗಿದೆ; ಅದು ಶಿವನ ಶೃಂಗಾರಭಾವಕ್ಕೆ ಅಷ್ಟೊಂದು ಪರಿಪುಷ್ಟಿಯನ್ನೀಯುವುದರಿಂದ.

40 ಮಹಾವೀರಚರಿತನಾಟಕ, II. ರಾವಣನ ಅಮಾತ್ಯನಾದ ಮಾಲ್ಯವಂತನಿಗೆ ಪರಶುರಾಮನು ಕಳಿಸುವ ಸಂದೇಶವಿದು.

ತೊರೆವುದು ವಿಪ್ರರ ಪೀಡೆಯ
ನುರೆ ನಿಮ್ಮಯ ಮೇಲ್ಮೆಯನ್ನೆ ಸಾಧಿಪುದೆಂಬಿಂ|
ವರಸಖನೆಮಗೆನಿಸಿರ್ಪೀ
ಪರಶುಸಖಂ ತಾನೆ ಮುನಿವಸಂತಿರದಾಗಳ್ ||

ಇಲ್ಲಿ 'ಪರಶುರಾಮನು ಕ್ಷತ್ರಿಯರನ್ನೆಲ್ಲ ನಾಶಮಾಡಿದಂತೆಯೇ ಕ್ಷಣಾರ್ಧದಲ್ಲಿ ರಾಕ್ಷಸರೆಲ್ಲರನ್ನೂ ನಾಶಪಡಿಸುವನು' ಎಂಬ ವ್ಯಂಗ್ಯಾರ್ಥಕ್ಕೂ ವಾಚ್ಯಾರ್ಥಕ್ಕೂ[41] ಸಮವಾದ ಪ್ರಾಧಾನ್ಯವಿದೆ.

೭. 'ಕಾಕ್ವಾಕ್ಷಿಪ್ತ' ವ್ಯಂಗ್ಯಕ್ಕೆ ಉದಾಹರಣೆ—

ಮಥ್ನಾಮಿ ಕೌರವಶತಂ ಸಮರೇ ನ ಕೋಪಾತ್
ದುಶ್ಶಾಸನಸ್ಯ ರುಧಿರಂ ನ ಪಿಬಾಮ್ಯುರಸ್ತಃ।
ಸಂಚೂರ್ಣಯಾಮಿ ಗದಯಾ ನ ಸುಯೋಧನೋರೂ
ಸಂಧಿಂ ಕರೋತು ಭವತಾಂ ನೃಪತಿಃ ಪಣೇನ ||[42]

ಧುರದೊಳ್ ಕ್ರೋಧದಿನಾನದೇಂ ಕಡಿಯೆನೇ ಕೌರವ್ಯರಂ ನೂರ್ವರಂ
ಭರದಿಂದಂ ಬಿಸುನೆತ್ತರಂ ಕುಡಿಯೆನೇ ದುಶ್ಶಾಸನೋರಸ್ಸ್ಥಮಂ|
ಕುರುಪೋರುದ್ವಯಮಂ ಗದಾಪ್ರಹೃತಿಯಿಂ ಸಂಚೂರ್ಣಮಂಗೆಯ್ಯನೇ
ಅರರೇ ನಿಮ್ಮಯ ರಾಯನಿಂದು ಪಣದಿಂ ಸಂಧಾನಮಂ ಮಾಳ್ಕೆ ತಾಂ ||[43]

ಇಲ್ಲಿ ಕಾಕುವಿನಿಂದ ಬರುವ 'ಕೊಂದೇ ತೀರುವೆನು' ಎಂದು ಮುಂತಾದ ವ್ಯಂಗ್ಯಾರ್ಥವು ವಾಚ್ಯಾರ್ಥವಾದ 'ಕೊಲ್ಲುವುದಿಲ್ಲ' ಎಂದು ಮುಂತಾದವುಗಳ ಜತೆ ಜತೆಗೇ ಬರುತ್ತದೆ.[44]

---

[41] 'ನಿನಗೆ ಒಳ್ಳೆಯದಾಗುವುದು; ನಾನು ನಿನ್ನ ಮಿತ್ರ,' ಎಂಬ ಅಭಿಪ್ರಾಯಗಳು ವಾಚ್ಯ. ವಾಚ್ಯವು ಸಾಮೋಪಾಯವನ್ನು ಆಶ್ರಯಿಸಿದರೆ ವ್ಯಂಗ್ಯವು ದಂಡಭಯವನ್ನು ಬಿತ್ತುತ್ತಿದೆ. ಎರಡೂ ಪ್ರಕೃತೋಪಯೋಗಿಗಳಾದುದರಿಂದ ಎರಡಕ್ಕೂ ಸಮಪ್ರಾಧಾನ್ಯವುಂಟು. ಒಂದನ್ನು ಒಂದಕ್ಕಿಂತ ಮುಖ್ಯವೆನ್ನುವಂತಿಲ್ಲ.

[42] ವೇಣಿಸಂಹಾರನಾಟಕ, I. 17 ಯುಧಿಷ್ಠಿರನ ಸಂಧಿಪ್ರಯತ್ನವನ್ನು ಕೇಳಿ ಉರಿದೆದ್ದ ಭೀಮನು ಸಹದೇವನಿಗೆ ಹೇಳುವ ವಾಕ್ಯ.

[43] ಭಾಷಾಂತರ—ಮೈಸೂರು ಸೀತಾರಾಮಶಾಸ್ತ್ರಿಗಳದು. ಪು. ೧೦.

[44] ಇಲ್ಲಿ 'ಕೊಲ್ಲುವುದಿಲ್ಲ' ಎನ್ನುತ್ತಿರುವಾಗಲೇ ಭೀಮನ ಕಣ್ಣು, ಧ್ವನಿ, ಮತ್ತು ಮುಖಮುದ್ರೆಗಳಿಂದ 'ಕೊಲ್ಲುವೆನು' ಎಂಬರ್ಥ ಬರುವುದರಿಂದ ಮುಖ್ಯಾರ್ಥಬಾಧೆ, ತನ್ನಿವಾರಣೆಗಾಗಿ ಲಕ್ಷಣಾ

೮. 'ಅಸುಂದರ' ವ್ಯಂಗ್ಯಕ್ಕೆ ಉದಾಹರಣೆ—

ವಾಣೀರಕುಡಂಗುಡ್ಡೀಣಸಉಣಿಕೋಲಾಹಲಂ ಸುಣಂತೀಏ |
ಘರಕಮ್ಮವಾವಡಾಏ ಬಹುಏ ಸೀಅನ್ತಿ ಅಂಗಾಇಂ ||

ಒತ್ತಾಗಿ ತಾ ಬೆಳೆದ ಬೆತ್ತಗಳ ಹತ್ತಿರವೆ
ಹಕ್ಕಿಗಳ ಕೂಗಾಟ ಕೇಳಿಬರಲು |
ಮನೆಗೆಲಸದಲಿ ನಿರತಳಾಗಿದ್ದ ಹೆಂಗಸಿಗೆ
ತನ್ನಂಗಗಳ ಸತ್ವವುಡುಗುತಿಹುದು ||

ಇಲ್ಲಿ 'ದತ್ತಸಂಕೇತನಾದ ಪುರುಷನೊಬ್ಬನು ಲತಾಕುಂಜವನ್ನು ಸೇರಿದನು' ಎಂಬ ವ್ಯಂಗ್ಯಕ್ಕಿಂತಲೂ 'ತರುಣಿಯ ಅಂಗಗಳು ಬೆಂಡಾದುವು' ಎಂಬ ವಾಚ್ಯವೇ ಹೆಚ್ಚು ಸುಂದರವಾಗಿದೆ.[45]

ಏಷಾಂ ಭೇದಾ ಯಥಾಯೋಗಂ ವೇದಿತವ್ಯಾಶ್ಚ ಪೂರ್ವವತ್ || ೨ *cd* ||

ಇವುಗಳ ಭೇದಗಳನ್ನೂ ಪೂರ್ವೋಕ್ತ ಧ್ವನಿಭೇದಗಳ ರೀತಿಯಲ್ಲಿಯೇ ಯಥಾ ಸಂಭವವಾಗಿ ತಿಳಿದುಕೊಳ್ಳುವುದು.[46]

ಯಥಾಸಂಭವವಾಗಿ ಎಂದರೆ ತಾತ್ಪರ್ಯವಿಷ್ಟೆ:—

"ವ್ಯಜ್ಯನ್ತೇ ವಸ್ತುಮಾತ್ರೇಣ ಯದಾಲಂಕೃತಯಸ್ತದಾ |
ಧ್ರುವಂ ಧ್ವನ್ಯಂಗತಾ ತಾಸಾಂ ಕಾವ್ಯವೃತ್ತೇಸ್ತದಾಶ್ರಯಾತ್ ||"[47]

ಎಂದು ಧ್ವನಿಕಾರನು ಹೇಳಿರುವಂತೆ ವಸ್ತುವಿನಿಂದ ಎಲ್ಲೆಲ್ಲಿ ಅಲಂಕಾರವು ವ್ಯಂಗ್ಯವೋ ಅಲ್ಲೆಲ್ಲ 'ಧ್ವನಿ'ಯೆಂದೇ ತಿಳಿಯಬೇಕು; ಗುಣೀಭೂತವ್ಯಂಗ್ಯವೆನ್ನಲಾಗದು.[48]

ಪ್ರಸಕ್ತಿ ಮುಂತಾದುವೊಂದೂ ಇಲ್ಲ. ಆದುದರಿಂದ ಇದನ್ನು ವಿಪರೀತಲಕ್ಷಣೆಗೆ ಉದಾಹರಣೆಯೆಂದು ಪರಿಗಣಿಸಲಾಗದೆಂದು ಮಾಣಿಕ್ಯಚಂದ್ರನು ಬರೆದಿದ್ದಾನೆ.

45 ರಸಿಕರಿಗೆ ಇದನ್ನು ಬಿಡಿಸಿ ವಿವರಿಸಬೇಕಾಗಿಲ್ಲ. ವ್ಯಂಗ್ಯವಾದ ವಸ್ತು ಎಷ್ಟು ನೀರಸವೋ ವಾಚ್ಯವಾದ ಸ್ಥಿತಿಯು ಅಷ್ಟೇ ಸರಸವಾಗಿದೆ. ಅದರಿಂದಲೇ ಅದಕ್ಕೆ ಹೆಚ್ಚಿನ ಮಹತ್ವ.

46 ಶುದ್ಧಧ್ವನಿಯ ಭೇದಗಳು ಎಷ್ಟಿವೆಯೋ ಗುಣೀಭೂತವ್ಯಂಗ್ಯದ ಭೇದಗಳೂ ಅಸಂಭವವಾದ ಕೆಲವನ್ನು ಬಿಟ್ಟು ಅಷ್ಟೇ ಇವೆಯೆಂದು ತಾತ್ಪರ್ಯ.

47 ಧ್ವನ್ಯಾಲೋಕ, II. ೨೮ ನೋಡಿ—ಲೇಖಕನ ಕನ್ನಡ ಭಾಷಾಂತರ, ಪುಟ ೭೦.

48 ಶುದ್ಧಧ್ವನಿಯ ಮುಖ್ಯಭೇದಗಳು 51 ಎಂಬುದನ್ನು ಹಿಂದಿನ ಉಲ್ಲಾಸದಲ್ಲಿ ನೋಡಿದ್ದೇವೆ. ಆದರೆ ಗುಣೀಭೂತವ್ಯಂಗ್ಯದ ಭೇದಗಳು ಮಮ್ಮಟನ ಪ್ರಕಾರ 42. ಏಕೆಂದರೆ ಕೆಳಗಿನ 9 ಭೇದಗಳು ಇಲ್ಲಿ ಸಂಭವವೇ ಇಲ್ಲ :—

ಸಾಲಂಕಾರೈರ್ಧ್ವನೇಸ್ತೈಶ್ಚ ಯೋಗಸ್ಸಂಸೃಷ್ಟಿಸಂಕರೈಃ । ೩ *a* ।

ಸಾಲಂಕಾರಗಳಾದ ಈ ಗುಣೀಭೂತವ್ಯಂಗ್ಯಭೇದಗಳಿಗೆ ಪರಸ್ಪರ 'ಸಂಸೃಷ್ಟಿ' 'ಸಂಕರ'ಗಳೂ ಉಂಟು.

'ಸಾಲಂಕಾರಗಳಾದ' ಎಂದರೆ 'ಸ್ವಯಂ ಅಲಂಕಾರಸ್ವರೂಪವನ್ನುಳ್ಳ' ಮತ್ತು 'ಅನ್ಯಾಲಂಕಾರಸಹಿತವಾದ' ಎಂಬ ಎರಡರ್ಥಗಳನ್ನೂ ಮಾಡಿಕೊಳ್ಳಬೇಕು. ಅದರಿಂದಲೇ ಧ್ವನಿಕಾರನು ಕೂಡ—

"ಸ ಗುಣೀಭೂತವ್ಯಂಗ್ಯೈಃ ಸಾಲಂಕಾರೈಸ್ಸಹ ಪ್ರಭೇದೈಸ್ಸ್ವೈಃ ।
ಸಂಕರಸಂಸೃಷ್ಟಿಭ್ಯಾಂ ಪುನರಪ್ಯುದ್ಯೋತತೇ ಬಹುಧಾ ॥"[49]

ಎಂದಿದ್ದಾನೆ.

ಅನ್ಯೋನ್ಯಯೋಗಾದೇವಂ ಸ್ಯಾದ್ಭೇದಸಂಖ್ಯಾತಿಭೂಯಸೀ ॥ ೩ *cd* ॥

ಇವುಗಳ ಪರಸ್ಪರಸಂಯೋಗಪ್ರಕಾರಗಳನ್ನೆಲ್ಲ ಎಣಿಸಿದರೆ ಆ ಭೇದಗಳ ಸಂಖ್ಯೆ ಅತಿ ದೊಡ್ಡದಾಗುವುದು.

ಮೇಲೆ ಹೇಳಿದಂತೆ ಅವಾಂತರಭೇದಗಳೊಂದೊಂದನ್ನೂ ಲೆಕ್ಕಮಾಡಿದರೆ ಬರುವ ಸಂಖ್ಯೆ ಅತ್ಯಂತ ದೊಡ್ಡದಾಗುವುದು.[50] ಹೇಗೆಂದರೆ—ಶೃಂಗಾರರಸವೊಂದರ ಭೇದ

---

1. ಪದಗತ- ಸ್ವತಃಸಂಭವಿ- ವಸ್ತುವ್ಯಂಗ್ಯಾಲಂಕಾರರೂಪ
2. ವಾಕ್ಯಗತ ,, ,,
3. ಪ್ರಬಂಧಗತ , ,,
4. ಪದಗತ ಕವಿಪ್ರೌಢೋಕ್ತಿಸಿದ್ಧ ,,
5. ವಾಕ್ಯಗತ ,, ,,
6. ಪ್ರಬಂಧಗತ ,, ,,
7. ಪದಗತ ಕವಿನಿಬದ್ಧಪ್ರೌಢೋಕ್ತಿಸಿದ್ಧ ,,
8. ವಾಕ್ಯಗತ ,, ,,
9. ಪ್ರಬಂಧಗತ ,, ,,

ಈ ಎಲ್ಲ ಪ್ರಭೇದಗಳಲ್ಲಿಯೂ ವಸ್ತುವಿನಿಂದ ಅಲಂಕಾರಗಳು ವ್ಯಂಗ್ಯವಾಗುತ್ತಿರುವುದರಿಂದ ಇವೊಂದೂ ಗುಣೀಭೂತವ್ಯಂಗ್ಯಗಳೆನಿಸುವುದಿಲ್ಲ ; ಅವು ಕೇವಲ ಧ್ವನಿಭೇದಗಳು.

[49] ಧ್ವನ್ಯಾಲೋಕ, III. ೪೩. ಕನ್ನಡ ಭಾಷಾಂತರ, ಪುಟ ೧೬೦.

[50] ಯಾವ ಸಂಖ್ಯೆಯು ಗಣನಾತೀತವೆಂದು ಮಮ್ಮಟನೇ ಕೈಬಿಟ್ಟನೋ ಅದನ್ನು 'ಸುಧಾಸಾಗರ'ಕಾರನು ಲೆಕ್ಕಮಾಡಿ ತೋರಿಸಹೊರಟು 340623900 ಎಂಬ ಸಂಖ್ಯೆಯ ವರೆಗೆ ಮುಟ್ಟಿ ಅನಂತರ ಅಲಂಕಾರಜನಿತ ಸಂಕರಗಳನ್ನೂ ಲೆಕ್ಕಕ್ಕೆ ಹಿಡಿದರೆ ಸಂಖ್ಯೆಯು ಪರಾರ್ಧ (=infinity) ವನ್ನೂ ಮೀರುವುದೆಂದು ಸುಮ್ಮನಾಗುತ್ತಾನೆ.

ಪ್ರಭೇದಗಳನ್ನು ಎಣಿಸುತ್ತ ಹೊರಟರೂ ಆನಂತ್ಯ (=*infinity*) ಬಂದುಬಿಡುವಾಗ, ಎಲ್ಲವನ್ನೂ ಎಣಿಸಿ ಮುಗಿಸುವುದೆಂದರೇನು!

ಆದರೆ ಅದನ್ನೇ ಸ್ಥೂಲದೃಷ್ಟಿಯಿಂದ ಪರಿಗಣಿಸಿದರೆ ಧ್ವನಿಯ ಭೇದಗಳು ಮೂರೇ ಎನ್ನಬಹುದು! ಏಕೆಂದರೆ ವ್ಯಂಗ್ಯದ ಪ್ರಕಾರಗಳೇ ಮೂರು:—




ಯದ್ಯಪಿ ಎರಡನೆಯ ಬಗೆಯಾದ ಅಲಂಕಾರವನ್ನು ಪ್ರಾಧಾನ್ಯ ದೃಷ್ಟಿಯಿಂದ 'ಅಲಂಕಾರ್ಯ'ವೆನ್ನಬೇಕೇ ಹೊರತು 'ಅಲಂಕಾರ'ವೆನ್ನಲೇ ಬರುವುದಿಲ್ಲ; ಆದರೂ 'ಬ್ರಾಹ್ಮಣ-ಶ್ರಮಣ'ನೆಂಬ ಪ್ರಯೋಗದಂತೆ ಅಲಂಕಾರವೆಂಬ ಪ್ರಯೋಗವನ್ನು ಮಾಡಿದೆ.[51] ರಸಾದಿ ಅರ್ಥ ಮಾತ್ರ ಸ್ವಪ್ನದಲ್ಲಿಯೂ ವಾಚ್ಯವಾಗಲಾರದು. ಒಂದು ಪಕ್ಷ ಅದೂ ವಾಚ್ಯವೆನ್ನುವುದಾದರೆ ರಸಾದಿ-ಶಬ್ದ ಇಲ್ಲವೆ ಶೃಂಗಾರಾದಿ-ಶಬ್ದ ಅದಕ್ಕೆ ವಾಚಕವಾಗಬೇಕಾಗುತ್ತದೆ. ಆದರೆ ಈ ಶಬ್ದಗಳಿಂದ ಎಂದೂ ರಸಪ್ರತೀತಿಯುಂಟಾಗುವುದಿಲ್ಲ. ಏಕೆಂದರೆ ಈ ಶಬ್ದಪ್ರಯೋಗವಿದ್ದರೂ ವಿಭಾವಾದಿ ಪ್ರತಿಪಾದನೆಯಿಲ್ಲದಿದ್ದರೆ ರಸಪ್ರತೀತಿಯಿರುವುದಿಲ್ಲ; ಈ ಶಬ್ದಪ್ರಯೋಗವಿಲ್ಲದಿದ್ದರೂ ವಿಭಾವಾದಿ ಪ್ರತಿಪಾದನೆಯಿರುವಾಗ ರಸಪ್ರತೀತಿಯುಂಟಾಗುತ್ತದೆ. ಹೀಗೆ ಅನ್ವಯ, ವ್ಯತಿರೇಕಗಳೆರಡರಿಂದಲೂ ರಸಾದಿಯು ವಿಭಾವಾದಿ ಪ್ರತಿಪಾದನೆಯಿಂದ ಮಾತ್ರ ಪ್ರತೀತವಾಗುವುದೆಂದು ನಿಶ್ಚಯಿಸಲಾಗುತ್ತದೆ. ಅದು ವ್ಯಂಗ್ಯವೆಂದೇ ಹೇಳಬೇಕು;

---

[51] ವಾಚ್ಯವಾದ ಅಲಂಕಾರವು ವ್ಯಂಗ್ಯಾರ್ಥಕ್ಕೆ ಪುಷ್ಟಿಯನ್ನೀಯುವುದರಿಂದ ಅಲಂಕಾರವೆನಿಸುತ್ತದೆ. ವ್ಯಂಗ್ಯಾರ್ಥವು ಪುಷ್ಟಿಗೊಳ್ಳುವ ಜೀವವೇ ಹೊರತು ಪೋಷಕವಾದ ಪದಾರ್ಥವಲ್ಲ. ಆದಕಾರಣ ವ್ಯಂಗ್ಯವಾದ ಅಲಂಕಾರವು ಧ್ವನಿಯೆನಿಸಿದ ಮೇಲೆ ಪೋಷ್ಯ ಅಥವಾ ಅಲಂಕಾರ್ಯವಾಗುವುದೇ ಹೊರತು ಅದಕ್ಕೆ ಅಲಂಕಾರತ್ವವೇ ಉಳಿಯುವುದಿಲ್ಲ. ಆ ಅಲಂಕಾರಶಬ್ದದ ಪ್ರಯೋಗ ತಾನೆ ಏಕೆ ಎಂಬ ಪ್ರಶ್ನೆಗೆ ಮಮ್ಮಟನು ಸಮಾಧಾನ ಹೇಳುತ್ತಾನೆ. ಸನ್ಯಾಸಾಶ್ರಮವನ್ನು ಸ್ವೀಕರಿಸಿದ ಮೇಲೆ ಮನುಷ್ಯನಿಗೆ ಜಾತಿ, ಕುಲ, ಗೋತ್ರ ಮುಂತಾದುವೆಲ್ಲವೂ ಬಿಟ್ಟುಹೋಗುತ್ತವೆ. ಆದರೂ ಪೂರ್ವಾಶ್ರಮದಲ್ಲಿ ಅವನಿದ್ದ ಸ್ಥಿತಿಯನ್ನನುಲಕ್ಷಿಸಿ ಒಬ್ಬನನ್ನು 'ಬ್ರಾಹ್ಮಣ ಶ್ರಮಣ'ನೆಂದು ಹೇಳುವ ರೂಢಿಯಿದೆ (ಈಗ Brahmin Christian ಎನ್ನುವಂತೆ). ಆದರಂತೆಯೇ ಅಲಂಕಾರಧ್ವನಿಯೆಂಬ ಪ್ರಯೋಗವನ್ನಾದರೂ ಗೌಣಪ್ರಯೋಗವೆಂದು ಸಮರ್ಥಿಸಬೇಕಾಗಿದೆ.

ಮುಖ್ಯಾರ್ಥಬಾಧೆ, ಮುಂತಾದುವು ಇಲ್ಲದ ಪ್ರಯುಕ್ತ ಲಕ್ಷ್ಯಾರ್ಥವೆನ್ನುವಂತಿಲ್ಲ.

(ರಸಾದಿಗಳಿರಲಿ;) ಲಕ್ಷಣಾಮೂಲವ್ಯಂಗ್ಯಗಳೆನಿಸುವ 'ಅರ್ಥಾಂತರ ಸಂಕ್ರಮಿತ ವಾಚ್ಯ' ಮತ್ತು 'ಅತ್ಯಂತತಿರಸ್ಕೃತವಾಚ್ಯ'ಗಳಲ್ಲಿ ಕೂಡ ವಸ್ತುರೂಪವಾದ ವ್ಯಂಗ್ಯವಿಲ್ಲದೆ ಲಕ್ಷಣಾವ್ಯಾಪಾರವೇ ಹೊರಡಲಾರದು ಎಂದು ಹಿಂದೆಯೇ ಪ್ರತಿಪಾದಿಸಲಾಗಿದೆ.[52] ಅಭಿಧಾಮೂಲವಾದ 'ಅಲಂಕಾರಧ್ವನಿ'ಯಲ್ಲಿ ಕೂಡ ಅಭಿಧಾವ್ಯಾಪಾರದ

---

[52] ಎರಡನೆಯ ಉಲ್ಲಾಸದ ಆರಂಭದಲ್ಲಿಯೇ ಪದಾರ್ಥ-ವಾಕ್ಯಾರ್ಥಗಳ ವಿಷಯದಲ್ಲಿ ಮೀಮಾಂಸಕರಲ್ಲಿರುವ ಎರಡು ಸಿದ್ಧಾಂತಗಳನ್ನು ಪ್ರಸ್ತಾಪಿಸಲಾಯಿತು. ಈಗ ಅವುಗಳ ವಿಸ್ತಾರವಾದ ನಿರೂಪಣೆ ಬರುತ್ತದೆ.

ಸಂಸ್ಕೃತ ದರ್ಶನಗಳಲ್ಲಿ "ಶಬ್ದ"ವೆಂಬ ಪ್ರಮಾಣವನ್ನು ಒಪ್ಪುವುದರಿಂದ ಶಬ್ದ-ಶಬ್ದಾರ್ಥ, ವಾಕ್ಯ-ವಾಕ್ಯಾರ್ಥ ಇವುಗಳ ತತ್ವವನ್ನು ಆಳವಾಗಿ ಚರ್ಚಿಸಲಾಗಿದೆ. ಈ ವಿಷಯದಲ್ಲಿ ಹೆಚ್ಚಿನ ಭಾಗವಹಿಸಿರುವವರೆಂದರೆ ವೈಯಾಕರಣರು, ಮೀಮಾಂಸಕರು ಮತ್ತು ನೈಯಾಯಿಕರು. ವೈಯಾಕರಣರು ವೇದಾಂತಿಗಳಂತೆ ಶಬ್ದಬ್ರಹ್ಮವಾದವನ್ನು ಮುಂದೆ ಮಾಡಿ ಪದ ವಾಕ್ಯಗಳೆರಡರಲ್ಲೂ ಬ್ರಹ್ಮ-ವಿವರ್ತವಾದ ಒಂದು "ಸ್ಫೋಟ"ವೆಂಬ ತತ್ವವನ್ನು ಅಂಗೀಕರಿಸಿದ್ದರು. ಇದನ್ನು ಉಳಿದ ಶಾಸ್ತ್ರಕಾರರು ಒಪ್ಪಲಿಲ್ಲ. (ಆಲಂಕಾರಿಕರು ಮಾತ್ರ ಇದನ್ನೂ ವಿರೋಧಿಸುವುದಿಲ್ಲ). ಮೀಮಾಂಸಾದರ್ಶನದಲ್ಲಿ ಮುಖ್ಯವಾಗಿ ಎರಡು ವಾದಗಳು—ಅಭಿಹಿತಾನ್ವಯವಾದ ಮತ್ತು ಅನ್ವಿತಾಭಿಧಾನವಾದ—ಹುಟ್ಟುವುದಕ್ಕೆ ಕಾರಣವಾದ ಹಿನ್ನಲೆಯನ್ನು ಮಾತ್ರ ಇಲ್ಲಿ ಬರೆಯುತ್ತೇವೆ ವಾದದ ಪ್ರಕ್ರಿಯೆಯನ್ನು ಮಮ್ಮಟನೇ ಮೂಲದಲ್ಲಿ ವಿಸ್ತಾರವಾಗಿ ಪ್ರತಿಪಾದಿಸಿದ್ದಾನೆ.

ಪ್ರತ್ಯೇಕ ಪದಗಳಿಗೆ ಅರ್ಥವುಂಟೋ ಇಲ್ಲವೋ? ಉಂಟಾದರೆ ಪದಸಮೂಹವಾದ ವಾಕ್ಯಕ್ಕೆ ಪದಾರ್ಥಗಳ ಒಟ್ಟನಷ್ಟೇ ಅರ್ಥವೋ ಅಥವಾ ಹೆಚ್ಚಿನ ಅರ್ಥವುಂಟೋ? ಎಂಬುದು ಮೂಲಭೂತವಾದ ಪ್ರಶ್ನೆ. ಪ್ರಸಿದ್ಧ ಮೀಮಾಂಸಕರಾದ ಕುಮಾರಿಲಭಟ್ಟರು ತಮ್ಮ ಉದ್ಗ್ರಂಥವಾದ 'ಶ್ಲೋಕವಾರ್ತಿಕ'ದಲ್ಲಿ ಈ ಪ್ರಶ್ನೆಗೆ ಉತ್ತರವನ್ನು ಸ್ಪಷ್ಟವಾಗಿ ಹೇಳಿದ್ದಾರೆ: ವಾಕ್ಯಾರ್ಥವು ಪದಾರ್ಥಗಳ ಸಮುದಾಯಕ್ಕಿಂತ ಹೆಚ್ಚಿನದು; ಪದಾರ್ಥಗಳ ಸಮೂಹವೇ ವಾಕ್ಯಾರ್ಥವಲ್ಲ, ಎಂದು. ಹಾಗಾದರೆ ಪದಗಳು ಬೋಧಿಸುವ ಅರ್ಥಸಮುದಾಯಕ್ಕೂ ವಾಕ್ಯಾರ್ಥಕ್ಕೂ ವ್ಯತ್ಯಾಸವಿರುವ ಅಂಶವೇನು? ಎಂಬ ಪ್ರಶ್ನೆಯೇಳುತ್ತದೆ. ಅದಕ್ಕೆ ಅವರ ಉತ್ತರ ಇದು:- ಒಂದೊಂದು ಪದಕ್ಕೂ ಸಂಕೇತಿತವಾದ ಅರ್ಥವನ್ನು ಬೋಧಿಸುವ "ಅಭಿಧಾ" ಎಂಬ ಶಕ್ತಿಯಿದೆ. ಸಂಕೇತಿತವಾದ ಅರ್ಥವೆಂದರೆ ವ್ಯಕ್ತಿ ಅಥವಾ ವಿಶೇಷವಲ್ಲ; ಜಾತಿ ಅಥವಾ ಸಾಮಾನ್ಯ. ಹೀಗೆ ಸಂಕೇತಿತಾರ್ಥವನ್ನು ಬೋಧಿಸಿದೊಡನೆ ಶಬ್ದಶಕ್ತಿಯು ಮುಗಿದುಹೋಗುತ್ತದೆ. ಅನಂತರ ಈ ಪದಾರ್ಥವು ಆಕಾಂಕ್ಷೆ, ಯೋಗ್ಯತೆ, ಸನ್ನಿಧಿಗಳ ಬಲದಿಂದ ವಾಕ್ಯದ ಬೇರೆ ಪದಗಳ ಅರ್ಥಗಳೊಡನೆ ಅನ್ವಯವನ್ನು ಪಡೆಯುತ್ತದೆ. ಹೀಗೆ ಉತ್ತರಕಾಲದಲ್ಲಿ ಜನಿಸುವ ಈ ಪದಾರ್ಥಗಳ ಅನ್ವಯ ಅಥವಾ ಸಂಸರ್ಗಕ್ಕೆ ಶಬ್ದದ ಅಭಿಧಾಶಕ್ತಿ ಕಾರಣವಾಗಲಾರದು. ಅದಕ್ಕಾಗಿ ಬೇರೊಂದು ವ್ಯಾಪಾರವನ್ನೇ ಒಪ್ಪಬೇಕು. ಇದೇ ತಾತ್ಪರ್ಯಶಕ್ತಿ. ಅನ್ವಿತವಾದ ಅರ್ಥಸಮುದಾಯವನ್ನೇ ನಾವು ವಾಕ್ಯಾರ್ಥ ಅಥವಾ ತಾತ್ಪರ್ಯವೆನ್ನುತ್ತೇವೆ.

ಗತಿಯು ಒಂದರ್ಥವನ್ನು ಹೇಳಿದೊಡನೆ ನಿಯಂತ್ರಿತವಾದ ಮೇಲೆ ಅರ್ಥಾಂತರವಾದ ಉಪಮಾದ್ಯಲಂಕಾರವನ್ನು ಬೋಧಿಸಲು ಅದು ಅಸಮರ್ಥ, ಅತ ಏವ ಆಮೇಲೆ ಪ್ರತೀತವಾಗುವ ಅಲಂಕಾರ ಕೂಡ ವ್ಯಂಗ್ಯವೇ ಎಂಬುದು ನಿರ್ವಿವಾದ.

ಅರ್ಥಶಕ್ತಿಮೂಲಧ್ವನಿಯಲ್ಲಿಯೂ ಅಷ್ಟೆ; ವ್ಯಂಜನಾವ್ಯಾಪಾರವಿಲ್ಲದೆ ಅಭಿಧಾ ವ್ಯಾಪಾರವೇ ಸಾಕೆನ್ನುವಂತಿಲ್ಲ. ಪದ-ವಾಕ್ಯ ತತ್ತ್ವಗಳನ್ನು ಪೂರ್ಣವಾಗಿ ಪ್ರತಿಪಾದಿಸುವ ಶಾಸ್ತ್ರಕಾರರೆಂದರೆ ಮೀಮಾಂಸಕರು. ಇವರಲ್ಲಿ ಭಾಟ್ಟರ ಅಭಿಹಿತಾನ್ವಯವಾದದ ಪ್ರಕಾರ ಯಾವ ಪದಕ್ಕೂ ಸಾಮಾನ್ಯ ಅಥವಾ ಜಾತಿರೂಪ (=*Genus*)ವಾದ ಅರ್ಥದಲ್ಲಿ ಮಾತ್ರ ಬೋಧಕಶಕ್ತಿ (='ಸಂಕೇತ')ಯುಂಟೇ ಹೊರತು ವ್ಯಕ್ತಿವಿಶೇಷವನ್ನು ಬೋಧಿಸುವ ಶಕ್ತಿಯಿಲ್ಲ; (ಏಕೆಂದರೆ ವ್ಯಕ್ತಿವಿಶೇಷವನ್ನು ಪದಗಳು ಬೋಧಿಸುವುದಾದರೆ ಆನಂತ್ಯ ದೋಷ ಬರುತ್ತದೆ.) ಹೀಗೆ ಸಾಮಾನ್ಯವಾಚಿಗಳಾದ ಪದಗಳ ಆಕಾಂಕ್ಷೆ, ಯೋಗ್ಯತೆ, ಸನ್ನಿಧಿಗಳ ಫಲವಾಗಿ ಅರ್ಥಗಳಲ್ಲಿ ಪರಸ್ಪರ ಸಂಸರ್ಗ ಅಥವಾ ಅನ್ವಯವು ಹೊಸದಾಗಿ ಉಂಟಾಗಿ ಅದು ವಾಕ್ಯಾರ್ಥವೆನಿಸುತ್ತದೆ. ಹೀಗೆ ಬರುವ ವಿಶಿಷ್ಟ ವಾಕ್ಯಾರ್ಥ ಅಥವಾ ತಾತ್ಪರ್ಯವು ತಾತ್ಪರ್ಯಶಕ್ತಿಯ ಫಲವೇ ಹೊರತು ಅಭಿಧಾಶಕ್ತಿಯ ಫಲವಲ್ಲ. ಹೀಗೆ ಅನ್ವಯವನ್ನು ಬೋಧಿಸುವುದಕ್ಕೇ ವಿಶಿಷ್ಟ ಪದಗಳ ಅಭಿಧಾಶಕ್ತಿಗೆ ಸಾಮರ್ಥ್ಯವಿಲ್ಲವೆನ್ನುವ ಅಭಿಹಿತಾನ್ವಯವಾದದಲ್ಲಿ ವಾಕ್ಯಾರ್ಥದಿಂದಾಚೆಗೆ ವ್ಯಂಗ್ಯವಾಗಿ ತೋರುವ ಅರ್ಥವನ್ನು ಅಭಿಧಾಶಕ್ತಿ ಬೋಧಿಸುವುದೆನ್ನುವ ಪ್ರಸಂಗವೇ ಬರುವಂತಿಲ್ಲ.[12]

ಮೀಮಾಂಸಕರಲ್ಲಿಯೇ 'ಅನ್ವಿತಾಭಿಧಾನವಾದಿ'ಗಳಾದ ಮತ್ತೆ ಕೆಲವರು ಹೇಳುತ್ತಾರೆ:—

"ಶಬ್ದವೃದ್ಧಾಭಿಧೇಯಾಂಶ್ಚ ಪ್ರತ್ಯಕ್ಷೇಣಾತ್ರ ಪಶ್ಯತಿ।
ಶ್ರೋತುಶ್ಚ ಪ್ರತಿಪನ್ನತ್ವಮನುಮಾನೇನ ಚೇಷ್ಟಯಾ ॥
ಅನ್ಯಥಾನುಪಪತ್ತ್ಯಾ ತು ಬೋಧೇಚ್ಛಕ್ತಿಂ ದ್ವಯಾತ್ಮಿಕಾಮ್ ।
ಅರ್ಥಾಪತ್ತ್ಯಾವಬುಧ್ಯನ್ತೇ ಸಂಬಂಧಂ ತ್ರಿಪ್ರಮಾಣಕಮ್ ॥"

ಆದ್ದರಿಂದ ಕೇವಲ ಪದಾರ್ಥಗಳಿಗೂ ವಾಕ್ಯಾರ್ಥಕ್ಕೂ ಹೆಚ್ಚಿನ ಅಂಶವೆಂದರೆ ಅನ್ವಯ ಅಥವಾ ಸಂಸರ್ಗ. ಮೊದಲು ಪದಗಳು ತಮ್ಮ ಸಂಕೇತಿತಾರ್ಥವನ್ನು ಅಭಿಧೆಯಿಂದ ಬೋಧಿಸಿದ ಮೇಲೆ ಆ ಅರ್ಥಗಳಲ್ಲಿ ಅನ್ವಯ ಬಂದು ವಾಕ್ಯವೆನಿಸಿ, ತಾತ್ಪರ್ಯಶಕ್ತಿಯಿಂದ ವಾಕ್ಯಾರ್ಥವು ಪ್ರತೀತವಾಗುತ್ತದೆಯೆಂಬ ಈ ಪ್ರಕ್ರಿಯೆಗೆ ಅಭಿಹಿತಾನ್ವಯ ವಾದವೆಂದು ಹೆಸರು.

'ಶಬ್ದ, ವೃದ್ಧ (ವಕ್ತೃಗಳು), (ಉಕ್ತ) ವಸ್ತುಗಳನ್ನು ಪ್ರತ್ಯಕ್ಷವಾಗಿ ಬಾಲಕನು ತಿಳಿಯುತ್ತಾನೆ. ಅನಂತರ ವೃದ್ಧರ ಕಾರ್ಯಗಳ ಮೇಲಿಂದ ಊಹಿಸುತ್ತಾ ಇದಕ್ಕೆ ಈ ಅರ್ಥವೆಂದು ಅನುಮಾನದ ಮೂಲಕ ನಿರ್ಣಯಿಸುತ್ತಾನೆ. ಬೇರೆ ಹೇಗೂ ಉಪಪನ್ನವಾಗದೆ ಹೋಗುವುದರಿಂದ ಶಬ್ದ-ಅರ್ಥಗಳೆರಡಕ್ಕೂ ಸಂಬಂಧಿಸಿದ ಒಂದೇ ಶಕ್ತಿಯುಂಟೆಂದರಿಯಬೇಕಾಗುತ್ತದೆ. ಹೀಗೆ ಪ್ರತ್ಯಕ್ಷ, ಅನುಮಾನ, ಅರ್ಥಾಪತ್ತಿ— ಈ ಮೂರು ಪ್ರಮಾಣಗಳಿಂದಲೂ ಶಬ್ದಾರ್ಥ ಸಂಬಂಧವು ನಿರ್ಣೀತವಾಗುವುದೆಂದು ವಿದ್ವಾಂಸರ ಅಭಿಪ್ರಾಯ' ಎಂದು ಹೇಳಿರುವ ಪ್ರಕಾರ, "ದೇವದತ್ತನೆ, ಆಕಳನ್ನು ಒಳಗೆ ಹೊಡೆ" ಎಂದು ಮುಂತಾದ ವಾಕ್ಯವನ್ನು ತುಂಬ ವಯಸ್ಸಾದವನೊಬ್ಬನು ಉಚ್ಚರಿಸಿದೊಡನೆ ಮಧ್ಯವಯಸ್ಕನು ಗಂಗೆದೊಗಲುಳ್ಳ ಪ್ರಾಣಿಯೊಂದನ್ನು ನಡೆಸಿಕೊಂಡುಬರುವುದನ್ನು ಬಾಲಕನು ಕಾಣುತ್ತಾನೆ. 'ಈ ವಾಕ್ಯಕ್ಕೆ ಇವನು ಈ ಅರ್ಥ ಮಾಡಿಕೊಂಡ'ನೆಂಬುದು ಇವನ ಕಾರ್ಯದ ಮೇಲಿಂದಲೇ ಬಾಲಕನಿಗೆ ಅನುಮಾನ ಅಥವಾ ಊಹೆಮಾಡಲು ಸಾಧ್ಯವಾಗುತ್ತದೆ. ಅನಂತರ ಆ ಅಖಂಡ ವಾಕ್ಯಕ್ಕೂ ಅಖಂಡ ವಾಕ್ಯಾರ್ಥಕ್ಕೂ ಅರ್ಥಾಪತ್ತಿಯನ್ನಾಶ್ರಯಿಸಿ ವಾಚ್ಯ-ವಾಚಕ ಸಂಬಂಧವುಂಟೆಂಬ ಪರಿಜ್ಞಾನವುಂಟಾಗುತ್ತದೆ. ಈ ಪರಿಜ್ಞಾನವಾದಾಗಲೇ ಬಾಲಕನಿಗೆ ಆ ವಾಕ್ಯದ ವ್ಯುತ್ಪತ್ತಿಯಾಯಿತೆಂದು ಭಾವಿಸುತ್ತೇವೆ. ಮುಂದೆ, "ಚೈತ್ರನೆ, ಆಕಳನ್ನು ಒಳಗೆ ಹೊಡೆ", "ದೇವದತ್ತನೆ, ಕುದುರೆಯನ್ನು ಒಳಗೆ ಹೊಡೆ", "ದೇವದತ್ತನೆ ಆಕಳನ್ನು ಹೊರಗೆ ಹೊಡೆ", ಇವೇ ಮುಂತಾದ ವಾಕ್ಯಗಳನ್ನು ಕೇಳಿದಾಗ ಮಾತ್ರ ಆಯಾ ಶಬ್ದಗಳಿಗೆ ಆಯಾ ಅರ್ಥವು ಬಾಲಕನಿಂದ ಪ್ರತೀತವಾಗುತ್ತವೆ. ಆದುದರಿಂದ ಅನ್ವಯ (=*agreement*), ವ್ಯತಿರೇಕ (*difference*)ಗಳೆರಡರಿಂದಲೂ ಪ್ರವೃತ್ತಿ ಸಾಧಕವಾದುದು ವಾಕ್ಯ ಮಾತ್ರವೆಂದಂತಾಯಿತು; ಪ್ರಯೋಗಕ್ಕೆ ವಾಕ್ಯವೊಂದೇ ಪ್ರಯೋಜಕವೆಂದೂ ಸಿದ್ಧವಾಯಿತು. ಅಲ್ಲದೆ ವಾಕ್ಯದಲ್ಲಿರುವಾಗ ಮಾತ್ರ, ಎಂದರೆ ಅನ್ವಿತವಾದ ಪದಗಳಿಗೆ ಮಾತ್ರ, ಅರ್ಥಾಂತರಗಳೊಡನೆ ಅನ್ವಿತವಾದ ಅರ್ಥಗಳೊಡನೆ ಸಂಕೇತ ಅಥವಾ ಅರ್ಥಬೋಧಕತ್ವಶಕ್ತಿಯು ಕಾಣಬರುತ್ತದೆ. ಎಂದರೆ, ಒಂದರಲ್ಲೊಂದು ಸೇರಿಕೊಂಡೇ ಶಬ್ದಾರ್ಥಗಳು ವಾಕ್ಯಾರ್ಥವೆಂದು ಗೋಚರವಾಗುವುದೇ ವಿನಾ ಪೃಥಕ್‌ಸಿದ್ಧವಾದ ಶಬ್ದಾರ್ಥಗಳು ಅನಂತರ ಕಾಲದಲ್ಲಿ ಕೂಡಿಕೊಳ್ಳುವುದಿಲ್ಲ ಅಥವಾ ಅನ್ವಿತವಾಗುವುದಿಲ್ಲ.

ಯದ್ಯಪಿ, ವಾಕ್ಯಾಂತರಗಳಲ್ಲಿ ಪ್ರಯುಕ್ತವಾದ ಪದಗಳು ಕೂಡ ಪ್ರತ್ಯಭಿಜ್ಞಾನದ ಬಲದಿಂದ 'ಅವೇ ಇವು' ಎಂಬ ನಿಶ್ಚಯಕ್ಕೆ ಆಸ್ಪದವೀಯುತ್ತವೆ. ಎಂದ ಮೇಲೆ ಪದಾರ್ಥಾಂತರಮಾತ್ರದೊಡನೆ ಅನ್ವಿತವಾದುದು ಸಂಕೇತಕ್ಕೆ ವಿಷಯ

ವೆಂದಂತಾಯಿತು. ಆದರೂ ಇದರ ಸಾಮಾನ್ಯಾಂಶವು ಮರೆಯಾಗಿ ಕೇವಲ ವಿಶೇಷ ಸ್ವರೂಪವಷ್ಟೇ ಪ್ರತೀತಿವಿಷಯವಾಗುತ್ತದೆಂಬುದು ತತ್ವ. ಏಕೆಂದರೆ ಸಂಸಕ್ತ ಅಥವಾ ಅನ್ವಿತವಾದ ಪದಾರ್ಥಗಳ ಪ್ರತೀತಿಯಲ್ಲೆಲ್ಲ ಸಾಮಾನ್ಯಾಂಶವು ಗೌಣ ವಾಗಿಯೂ ವಿಶೇಷಾಂಶವೇ ಮುಖ್ಯವಾಗಿಯೂ ಇರುತ್ತದೆ' ಎಂದು ಅನ್ವಿತಾಭಿ ಧಾನವಾದಿಗಳ ಹೇಳಿಕೆ.[53]

ಅವರ ಮತದಲ್ಲಿಯಾದರೂ ಸಾಮಾನ್ಯ-ವಿಶೇಷ ರೂಪದ (=ಅನ್ವಿತ) 'ಪದಾರ್ಥ' (=ಪದದ ಅರ್ಥ) ಮಾತ್ರ ಸಂಕೇತಕ್ಕೆ ವಿಷಯವೆಂದಮೇಲೆ, ವಿಶೇಷದ ವ್ಯಾಪ್ತಿಯಲ್ಲೇ ಬಾರದೆ, ವಾಕ್ಯಾರ್ಥದಲ್ಲಿ ಅಂತರ್ಗತವಾಗಿ, ಸಂಕೇತಕ್ಕೆ ಗೋಚರ ವಲ್ಲದ ಕಾರಣ "ಅವಾಚ್ಯ'ವೆನ್ನಲು ಯೋಗ್ಯವಾಗಿ ಪದದ ಸಾಮಾನ್ಯಾರ್ಥವೇ (=ಅನನ್ವಿತವಾದ ಅರ್ಥ) ಇರುವ ಕಾಲದಲ್ಲಿ, ಇನ್ನು ಬೇರೊಂದರ್ಥವಾದ ಧ್ವನಿಯು— ಉದಾ: ನಿಃಶೇಷಚ್ಯುತ . . . ಎಂಬ ಶ್ಲೋಕದಲ್ಲಿ 'ಸ ಗತಾಸಿ' ಎಂದಿದ್ದರೂ

[53] ಹಿಂದಿನ ವಾದವನ್ನು ಪ್ರಭಾಕರ ಮತಾನುಯಾಯಿಗಳಾದ ಮೀಮಾಂಸಕರು ಒಪ್ಪುವುದಿಲ್ಲ. ಭಾಷೆಯ ವ್ಯುತ್ಪತ್ತಿಯಾಗುವುದು ಹೇಗೆಂದು ವಿಚಾರಿಸಿದರೆ ಮೊದಲು ಒಂದೊಂದು ಪದದ ಅರ್ಥ, ಆಮೇಲೆ ಒಟ್ಟು ವಾಕ್ಯಾರ್ಥ, ಈ ಕ್ರಮವು ಇಲ್ಲವೇ ಇಲ್ಲವೆಂದು ಅವರ ಅಭಿಪ್ರಾಯ. ಒಟ್ಟು ವಾಕ್ಯಗಳ ಉಚ್ಚಾರಣೆಯನ್ನೂ ಅದರ ಅಭಿಪ್ರಾಯಾನುಗುಣವಾಗಿ ಹಿರಿಯರು ಮಾಡುವ ಕೆಲಸ ವನ್ನೂ ಪ್ರತ್ಯಕ್ಷವಾಗಿ ಮತ್ತೆ ಮತ್ತೆ ಅನುಭವಕ್ಕೆ ಬರಿಸಿಕೊಂಡಮೇಲೆಯೇ ಬಾಲಕನಿಗೆ ಭಾಷೆಯ ಅರಿವಾಗುತ್ತದೆ. ಒಂದು ಕಾಡಿನಲ್ಲಿ ಒಬ್ಬ ಹುಡುಗನನ್ನಿಟ್ಟು ಅವನಿಗೆ ಇಡಿಯ ಶಬ್ದಕೋಶವನ್ನೇ ಕಂಠಪಾಠಮಾಡಿಸಿದರೂ ಅರ್ಥಜ್ಞಾನ ಬರಲಾರದು. ಆದುದರಿಂದ ಮೊದಲು ವಾಕ್ಯಾರ್ಥದ ಜ್ಞಾನ, ಆಮೇಲೆ ಕ್ರಮಕ್ರಮವಾಗಿ ಪದಪರ್ಯಂತವಾದ ಜ್ಞಾನ, ಈ ಕ್ರಮವನ್ನು ಸರಿಯೆನ್ನಬೇಕು. ಇದ ನ್ನೊಪ್ಪಿದರೆ ಪದಗಳು ಮೊದಲಿರುವುದೇ ಇಲ್ಲ; ಅವು ಅನ್ವಿತವಾಗುವುದು ಸಾಧ್ಯವೂ ಅಲ್ಲ ಎಂದಾಗು ತ್ತದೆ. ಇರುವುದೆಲ್ಲಾ ವಾಕ್ಯಗಳು ಅಥವಾ ಅನ್ವಿತವಾದ ಪದಗಳು ಮಾತ್ರ. ಎಂದ ಮೇಲೆ ವಾಕ್ಯಾರ್ಥವೇ ಮೊದಲು ಸ್ಫುರಿಸುತ್ತದೆ; ವಾಕ್ಯಾರ್ಥಕ್ಕೆ ಕಾರಣ ಅನ್ವಿತವಾದಪದಗಳು ಎಂದಂಗೀಕರಿಸಲೇ ಬೇಕು. ಈ ವಾಕ್ಯಾರ್ಥ ಬೋಧಕ್ಕೆ ಎರಡು ಶಕ್ತಿಗಳ ಅಗತ್ಯವೂ ಇಲ್ಲ. ಒಂದೇ ಅಭಿಧಾವ್ಯಾಪಾರವು ಸಾಕಾ ಗುತ್ತದೆ. ಎಂದ ಮೇಲೆ ತಾತ್ಪರ್ಯಶಕ್ತಿಯ ಕಲ್ಪನೆ ವ್ಯರ್ಥವಾಗುತ್ತದೆ. ಏವಂಚ ಅನ್ವಿತವಾದ ಪದ ಗಳೇ ಅಭಿಧಾಶಕ್ತಿಯಿಂದ ವಾಕ್ಯಾರ್ಥವನ್ನು ಬೋಧಿಸುತ್ತವೆಂಬ ಈ ವಾದಕ್ಕೆ ಅನ್ವಿತಾಭಿಧಾನ ವೆಂಬ ಹೆಸರು ಉಚಿತವಾಗಿ ಒಪ್ಪುತ್ತದೆ. ಈ ವಾದದಲ್ಲಿ ಅನ್ವಿತಪದಗಳಿಗೆ ವಿಷಯವು ಜಾತಿಯೋ ವ್ಯಕ್ತಿಯೋ ಎಂದರೆ ಮುಖ್ಯವಾಗಿ ವ್ಯಕ್ತಿಯೆಂದೇ ಹೇಳಬೇಕಾಗುತ್ತದೆ; ವಿಶಿಷ್ಟ ಅರ್ಥಗಳು ಮಾತ್ರ ಪ್ರತೀತವಾಗುವುದರಿಂದ. ಆದರೆ ಆನಂತ್ಯಾದಿ ದೋಷಗಳ ನಿವಾರಣೆಗೋಸ್ಕರ ಜಾತಿನಿರಪೇಕ್ಷವಾದ ವಿಶೇಷ ಅಥವಾ ವ್ಯಕ್ತಿಯೆನ್ನುವುದಿಲ್ಲ. ಜಾತಿಸಾಪೇಕ್ಷವಾದ ವ್ಯಕ್ತಿಯೆನ್ನುತ್ತಾರೆ. ವಾಕ್ಯಾರ್ಥ ಬೋಧವು ನೇರವಾಗಿ ವಿಶಿಷ್ಟವ್ಯಕ್ತಿಯನ್ನು ಕುರಿತಿದ್ದರೂ, ಅದರ ಮರೆಯಲ್ಲಿ ಜಾತಿ ಅಥವಾ ಸಾಮಾನ್ಯಾಂಶವೂ ಸೇರಿಕೊಂಡೇ ಇರುತ್ತದೆಂಬುದು ಸಿದ್ಧಾಂತ.

'ಗತಾಸಿ' (=ಹೋಗಿಯೇ ಇರುವೆ) ಎಂಬ ವಿಧಿರೂಪವಾದ ಅರ್ಥ—ವಾಚ್ಯವೇ ಅಲ್ಲವೇ ಎಂಬ ಚರ್ಚೆ ದೂರವೇ ನಿಲ್ಲುತ್ತದೆ.[54]

ಅಭಿಹಿತಾನ್ವಯವಾದದಲ್ಲಿ ಅನನ್ವಿತವಾದ ಪದಾರ್ಥ ಅಭಿಧಾವ್ಯಾಪಾರಕ್ಕೆ ವಿಷಯವಾದರೆ, ಅನ್ವಿತಾಭಿಧಾನವಾದದಲ್ಲಿ ಪದಾರ್ಥಾಂತರದೊಡನೆ ಅನ್ವಿತವಾದ ಪದಾರ್ಥ ಮಾತ್ರ ಅಭಿಧಾವ್ಯಾಪಾರಕ್ಕೆ ವಿಷಯವಾಗುತ್ತದೆ. ಎರಡು ವಾದಗಳಲ್ಲಿಯೂ ವಾಕ್ಯಾರ್ಥ ಮಾತ್ರ ಪದಾರ್ಥವಲ್ಲ, ಎಂದರೆ ಅಭಿಧಾವ್ಯಾಪಾರಗಮ್ಯವಲ್ಲ, ಎಂಬಂಶ ಸಮಾನ. ಏಕೆಂದರೆ ಎರಡು ವಾದಗಳಲ್ಲಿಯೂ ವಾಕ್ಯಾರ್ಥವು ಅನ್ವಿತ ವಿಶೇಷರೂಪವಾದುದು ಎಂದರೆ ತನ್ನದೇ ಆದ ವೈಶಿಷ್ಟ್ಯವನ್ನು ಸಂಪೂರ್ಣವಾಗಿ ಉಳ್ಳಂತಹುದು. ಅನ್ವಿತಾಭಿಧಾನವಾದಿಗಳು ಹೀಗೂ ವಾದಿಸಬಹುದು:— 'ವಾಕ್ಯಾರ್ಥತಾತ್ಪರ್ಯವೇ ಸಕಾರಣವಾಗಿ ವಿವರಿಸಬೇಕಾದ ಅರ್ಥ, ಅಥವಾ 'ನೈಮಿತ್ತಿಕ', ನೈಮಿತ್ತಿಕಾನುಸಾರವಾಗಿ ನಿಮಿತ್ತಗಳನ್ನು ಕಲ್ಪಿಸಬೇಕಾಗುತ್ತದೆ' (ಎಂದರೆ ಶಬ್ದಗಳ ವಾಚಕತ್ವಶಕ್ತಿಯಿಂದಲೇ ವಾಕ್ಯದ ತಾತ್ಪರ್ಯಾರ್ಥವೂ ಬೋಧ್ಯವೆಂದಭಿಪ್ರಾಯ). ಅವರಿಗೆ ಹೇಳಬೇಕಾದ ಉತ್ತರವಿಷ್ಟೆ:—'ನಿಮಿತ್ತತ್ವ'ವೆಂಬುದದು ಎರಡೇ ರೀತಿಯಾಗಿರಬಹುದು:—(೧) 'ಕಾರಕತ್ವ' ಇಲ್ಲವೆ (೨) 'ಜ್ಞಾಪಕತ್ವ'. ಶಬ್ದಗಳಲ್ಲಿ ಈ ಎರಡು ಬಗೆಯ ನಿಮಿತ್ತತ್ವವೂ ಸಿದ್ಧಿಸುವಂತಿಲ್ಲ. ಶಬ್ದವು ಅರ್ಥಕ್ಕೆ ಪ್ರಕಾಶಕಮಾತ್ರವೇ ಆದುದರಿಂದ ಅದನ್ನು 'ಕಾರಕನಿಮಿತ್ತ'ವೆನ್ನುವಂತಿಲ್ಲ. ಪೂರ್ವವಿದಿತವಲ್ಲದ ಅರ್ಥಕ್ಕೆ ಶಬ್ದವು 'ಜ್ಞಾಪಕನಿಮಿತ್ತ'ವೆನ್ನುವುದಾದರೂ ಹೇಗೆ? ಅರ್ಥವು ವಿದಿತವಾಗುವುದು ಸಂಕೇತದಿಂದ. ಸಂಕೇತದ ವ್ಯಾಪ್ತಿಯಿರುವುದು 'ಅನ್ವಿತಮಾತ್ರ'ದಲ್ಲಿ (ಎಂದರೆ ಸಾಮಾನ್ಯಾವಚ್ಛಾದಿತವಾದ ವಿಶೇಷದಲ್ಲಿ ಮಾತ್ರ). ಏವಂ ಚ ನಿಮಿತ್ತದಲ್ಲಿ ನಿಯತನಿಮಿತ್ತತ್ವವೇ ಇಲ್ಲವೆಂದಾಯಿತು. ಹೀಗಾದಮೇಲೆ ಇನ್ನು ನೈಮಿತ್ತಿಕ ಅಥವಾ ಅದರ ಕಾರ್ಯದ (=ವ್ಯಂಗ್ಯಾರ್ಥದ) ಪ್ರತೀತಿ ಬರುವುದೆಂತು? ಆದುದರಿಂದ 'ನೈಮಿತ್ತಿಕಾನುಸಾರವಾಗಿ ನಿಮಿತ್ತಗಳನ್ನು ಕಲ್ಪಿಸಬೇಕಾಗುತ್ತದೆ' ಎಂಬ ಮಾತು ಅವಿಚಾರಿತರಮಣೀಯ.

ಮತ್ತೆ ಅವರು ವಾದಿಸಬಹುದು:—'ಬಾಣದ ಶಕ್ತಿಯಂತೆಯೇ ವಾಕ್ಯದ ವ್ಯಾಪಾರವಾದರೂ ದೀರ್ಘದೀರ್ಘತರವಾದುದು; ಮತ್ತು ಯಾವುದನ್ನು ಕುರಿತು ಶಬ್ದ ಹೊರಟಿತೋ ಅದೇ ಅದರ ಅರ್ಥ. ಆದ್ದರಿಂದ 'ನಿಶ್ಯೇಷಚ್ಯುತ' ಎಂಬ ಶ್ಲೋಕದಲ್ಲಿ ನೀವು ವ್ಯಂಗ್ಯವೆನ್ನುವ ವಿಧಿಯು ವಸ್ತುತಃ ವಾಚ್ಯವೇ, ಎಂದು ತಾತ್ಪರ್ಯ.'

[54] ಯಾವ ವಾದವನ್ನೇ ಆಶ್ರಯಿಸಿದರೂ ವ್ಯಂಜನಾವೃತ್ತಿಯನ್ನೊಪ್ಪದೆ ವಿಧಿಯಿಲ್ಲವೆಂದು ತೋರಿಸುವುದು ಮುಖ್ಯವಾಗಿ ಮಮ್ಮಟನ ಉದ್ದೇಶ.

ತತ್ವದ ತಾತ್ಪರ್ಯ ಕೂಡ ತಿಳಿಯದ ಇವರ ಮೂರ್ಖತನಕ್ಕೇನು ಹೇಳುವುದು! (ಇವರು ಬರೆದಿರುವ ವಾಕ್ಯಗಳ ನಿಜವಾದ ಅರ್ಥವೇ ಬೇರೆ. ಅದಕ್ಕೂ ಶಬ್ದವ್ಯಾಪಾರಕ್ಕೂ ಯಾವ ಸಂಬಂಧವೂ ಇಲ್ಲ). ಹೇಗೆಂದರೆ—'(ವಾಕ್ಯದಲ್ಲಿ) ಪ್ರಮಾಣಾಂತರ ಸಿದ್ಧವಾದ ಅಂಶದೊಡನೆ (ಇನ್ನೂ ಸಿದ್ಧವಲ್ಲದ, ಆದರೆ) ಸಾಧ್ಯವಾದ ಅಂಶವೊಂದನ್ನು ಉಚ್ಚಾರಣೆ ಮಾಡಿದ್ದರೆ, ಸಿದ್ಧಾಂಶವು ಸಾಧ್ಯಾಂಶಕ್ಕೆ ವಿಶೇಷಣ ಮಾತ್ರ' ಎಂಬ ನ್ಯಾಯದಂತೆ ಕಾರಕಪದಾರ್ಥಗಳು (=ಸಿದ್ಧ ಅಂಶ) ಕ್ರಿಯಾಪದಾರ್ಥ (=ಸಾಧ್ಯ ಅಂಶ) ದೊಡನೆ ಅನ್ವಯಿಸುವುದಲ್ಲದೆ ಆ ಪ್ರಧಾನಕ್ರಿಯೆಯನ್ನು ಆಗಿಸುವ ತಮ್ಮ ಕ್ರಿಯೆಯ ಸಂಬಂಧದಿಂದ ತಾವೂ ಕೂಡ ಸಾಧ್ಯಸ್ವರೂಪವನ್ನೇ ತಳೆಯುತ್ತವೆ. ಅನಂತರ, 'ಸುಡುವುದೆಂದರೆ ಸುಡದಿರುವುದನ್ನೇ' ಎಂಬ ನ್ಯಾಯದಂತೆ, ಯಾವುದು ಇದುವರೆಗೂ ವಿಧಿಯಿಂದ ಉಕ್ತವಾಗಿಲ್ಲವೋ ಅದನ್ನು ಮಾತ್ರ ವಾಕ್ಯವು ವಿಧಿಸುತ್ತದೆ. ಉದಾಹರಣೆಗೆ :—ಋತ್ವಿಕ್ಕುಗಳು ನಡೆಯುವುದನ್ನು ಬೇರೆ ವಾಕ್ಯಗಳು ವಿಧಿಸಿಯಾಗಿರುವಾಗ, 'ಲೋಹಿತೋಷ್ಣೀಷರಾಗಿ ಋತ್ವಿಕ್ಕುಗಳು ನಡೆಯುವರು' ಎಂಬ ವಾಕ್ಯದಲ್ಲಿ ಋತ್ವಿಕ್ಕುಗಳು ಕೆಂಪು ರುಮಾಲನ್ನು ಧರಿಸಬೇಕೆಂಬಂಶ ಮಾತ್ರವೇ ವಿಧೇಯವೆಂದು ತಿಳಿಯುತ್ತೇವೆ. ಹಾಗೆಯೇ ಹವನ ಕರ್ಮವನ್ನು ವಾಕ್ಯಾಂತರವು ವಿಧಿಸಿಯಾಗಿರುವಾಗ 'ಮೊಸರಿನಿಂದ ಹವನಮಾಡುತ್ತಾನೆ' ಎಂಬ ವಿಧಿವಾಕ್ಯದಲ್ಲಿ ಹವನಕ್ಕೆ ಮೊಸರು ಉಪಕರಣವೆಂಬಂಶ ಮಾತ್ರ ವಿಧೇಯವೆಂದು ತಿಳಿಯುತ್ತೇವೆ. (ಒಂದು ವಿಧಿವಾಕ್ಯಕ್ಕೆ ಒಂದೇ ವಿಧೇಯವಿರಬೇಕೆಂಬ ನಿಯಮವೇನೂ ಇಲ್ಲ.) ಒಮ್ಮೊಮ್ಮೆ ಎರಡು ವಿಧೇಯಗಳಿರಬಹುದು ; ಒಮ್ಮೊಮ್ಮೆ ಮೂರು ವಿಧೇಯಗಳೂ ಇರಬಹುದು. ಉದಾಹರಣೆಗೆ 'ರಕ್ತಂ ಪಟಂ ವಯ (= ಕೆಂಪು ಬಟ್ಟೆಯನ್ನು ನೇಯ್ದುಕೊಡು) ಎಂಬ ಒಂದೇ ವಾಕ್ಯದಲ್ಲಿ, ಕೆಂಪು ಬಣ್ಣ, ಬಟ್ಟೆ, ನೇಯ್ಯುವ ಕೆಲಸ, ಈ ಮೂರರಲ್ಲಿ ಯಾವುದಾದರೂ ಎರಡು ಮೊದಲೇ ವಿಧ್ಯಂತರಗಳಿಂದ ಪ್ರಾಪ್ತವಾಗಿದ್ದರೆ, ಮಿಕ್ಕ (ಅಪ್ರಾಪ್ತವಾದ) ಒಂದೇ ವಿಧೇಯವೆನಿಸುತ್ತದೆ ; ಯಾವುದಾದರೊಂದು ಮಾತ್ರ ಪ್ರಾಪ್ತವಾಗಿದ್ದರೆ, (ಅಪ್ರಾಪ್ತವಾದ) ಉಳಿದೆರಡು ವಿಧೇಯಗಳೆನಿಸುತ್ತವೆ ; ಯಾವುದೂ ಪ್ರಾಪ್ತವಲ್ಲದಿದ್ದರೆ, ಮೂರೂ ವಿಧೇಯಗಳಾಗುತ್ತವೆ. ಆದ್ದರಿಂದ ಯಾವುದು ವಿಧೇಯವೋ ಅದರ ವಿಷಯದಲ್ಲಿ ಮಾತ್ರ ತಾತ್ಪರ್ಯ ಉಂಟು ; ಎಂದರೆ ಉಕ್ತವಾದ ಶಬ್ದಕ್ಕೆ ವಿಧೇಯವಾದ ಅರ್ಥದಲ್ಲಿ ಮಾತ್ರ ತಾತ್ಪರ್ಯವುಂಟೆಂದು ಮೀಮಾಂಸಾಶಾಸ್ತ್ರದ ಸಿದ್ಧಾಂತವೇ ಹೊರತು ಪ್ರತೀತಿವಿಷಯವಾದ ಅರ್ಥಾಂತರದಲ್ಲಿಯೂ (= ವ್ಯಂಗ್ಯಾರ್ಥದಲ್ಲಿಯೂ) ತಾತ್ಪರ್ಯವುಂಟೆಂದಲ್ಲ. ಹಾಗಾಗುವ ಪಕ್ಷಕ್ಕೆ, 'ಪೂರ್ವೋ ಧಾವತಿ' (= ಮೊದಲನೆಯವನು ಓಡುತ್ತಾನೆ) ಇತ್ಯಾದಿಗಳಿಗೆ 'ಎರಡನೆಯವನು ಓಡುತ್ತಾನೆ' ಎಂಬರ್ಥದಲ್ಲಿಯೂ ತಾತ್ಪರ್ಯವುಂಟೆಂದು ಸಾಧಿಸಿಬಿಡಬಹುದು.

"ವಿಷವನ್ನು ತಿನ್ನು; ಆದರೆ ಇವನ ಮನೆಯಲ್ಲಿ ಊಟಮಾಡಬೇಡ" ಎಂಬ ವಾಕ್ಯಕ್ಕೆ 'ಇವನ ಮನೆಯಲ್ಲಿ ಊಟಮಾಡಬೇಡ'ವೆಂದಷ್ಟೇ ತಾತ್ಪರ್ಯವಾದ ಕಾರಣ, ಅದಷ್ಟನ್ನೇ ವಾಕ್ಯಾರ್ಥವೆಂದು ತಿಳಿಯಬೇಕಲ್ಲವೆ? ಎಂದು ಹೇಳಬಹುದು. ಅದಕ್ಕೆ ಉತ್ತರವಿಷ್ಟೆ:—ಅಲ್ಲಿ 'ಆದರೆ' ಎಂಬ ಸಮುಚ್ಚಯವು ಎರಡೂ ಕೂಡಿ ಒಂದೇ ವಾಕ್ಯವೆಂಬುದನ್ನು ಸೂಚಿಸುತ್ತಿದೆ. ಎರಡು ಭಿನ್ನಕ್ರಿಯೆಗಳುಳ್ಳ ವಾಕ್ಯಗಳಿಗೆ ಅಂಗಾಂಗಿಭಾವವೇ ಸಾಧ್ಯವಿಲ್ಲದ ಕಾರಣ ಮತ್ತು ಇಲ್ಲಿ ವಿಷಭಕ್ಷಣ ವಾಕ್ಯವನ್ನು ಮಿತ್ರನು ಹೇಳುತ್ತಿರುವುದನ್ನನುಲಕ್ಷಿಸಿ ಅದನ್ನು ಅಂಗ (=ಅಪ್ರಧಾನ) ವೆಂದೇ ಭಾವಿಸಬೇಕಾಗಿರುವುದರಿಂದ— 'ವಿಷಭಕ್ಷಣಕ್ಕಿಂತಲೂ ಇವನ ಮನೆಯಲ್ಲಿ ಊಟ ಮಾಡುವುದು ಕೆಟ್ಟದ್ದು; ಸರ್ವಥಾ ಇವನ ಮನೆಯಲ್ಲಿ ಊಟಮಾಡಬೇಡ' ಎಂಬ ತಾತ್ಪರ್ಯವು ಪ್ರಯುಕ್ತಶಬ್ದಗಳ ನೇರವಾದ ಅರ್ಥವಾಗಿಯೇ ಬರುತ್ತದೆ.

ಒಂದು ವೇಳೆ, ಶಬ್ದವನ್ನು ಕೇಳಿದನಂತರ ಎಷ್ಟೆಷ್ಟು ಅರ್ಥಗಳು ಲಭಿಸುವುವೋ ಅಷ್ಟರ ಬೋಧೆಗೂ ಅಭಿಧೆಯೊಂದೇ ಶಬ್ದವ್ಯಾಪಾರವೆಂಬ ಮಾತು ನಿಜವಾದರೆ, ಆಗ 'ವಿಪ್ರನೆ, ನಿನಗೆ ಪುತ್ರನು ಜನಿಸಿದ್ದಾನೆ', 'ವಿಪ್ರನೆ, ನಿನ್ನ (ಅವಿವಾಹಿತ) ಕನ್ಯೆ ಗರ್ಭಿಣಿಯಾಗಿದ್ದಾಳೆ' ಎಂಬ ವಾಕ್ಯಗಳಿಂದ ಕ್ರಮವಾಗಿ ಹುಟ್ಟುವ ಹರ್ಷ, ಶೋಕ ಗಳ ಪ್ರತೀತಿಗೂ ಅಭಿಧಾವ್ಯಾಪಾರವೇ ಏಕೆ ಸಮರ್ಥವೆನ್ನಬಾರದು? ಲಕ್ಷಣೆಯೆಂಬ ಎರಡನೆ ವ್ಯಾಪಾರವನ್ನು ತಾನೆ ಒಪ್ಪುವುದೇತಕ್ಕೆ? ಲಕ್ಷಣಾಗಮ್ಯವಾದ ಅರ್ಥಗಳೆಲ್ಲ ವನ್ನೂ ದೀರ್ಘದೀರ್ಘತರವಾದ ಅಭಿಧಾವ್ಯಾಪಾರವೊಂದೇ ಬೋಧಿಸಬಹುದಲ್ಲವೆ? 'ಶ್ರುತಿ', 'ಲಿಂಗ', 'ವಾಕ್ಯ', 'ಪ್ರಕರಣ', 'ಸ್ಥಾನ', 'ಸಮಾಖ್ಯೆ', ಇವುಗಳಲ್ಲಿ ಪೂರ್ವತರವಾದುದು ಉತ್ತರೋತ್ತರಕ್ಕಿಂತ ಪ್ರಬಲವೆನ್ನುವುದು ತಾನೆ ಏಕೆ?[55]

ಹೀಗೆ ಅನ್ವಿತಾಭಿಧಾನವಾದವನ್ನಾಶ್ರಯಿಸಿದರೂ (ನಿಃಶೇಷಚ್ಯುತ . . . ಎಂಬ ಶ್ಲೋಕದಲ್ಲಿ ಪ್ರತೀತವಾಗುವ) ವಿಧಿ ವ್ಯಂಗ್ಯವೇ (ಹೊರತು ವಾಚ್ಯವಲ್ಲ) ಎಂದು ಸಿದ್ಧವಾಗುತ್ತದೆ.

---

[55] ಯಾವುದು ವಾಚ್ಯಾರ್ಥಕ್ಕೆ ಸಮೀಪವೋ ಅದು ಪ್ರಬಲ; ಯಾವುದು ದೂರವೋ ಅದು ದುರ್ಬಲವೆಂಬ ತತ್ತ್ವವನ್ನು ಮೀಮಾಂಸಕರೇ ಈ ಪ್ರಕ್ರಿಯೆಯಲ್ಲಿ ಒಪ್ಪಿದ್ದಾರೆ. ಅಭಿಧೆಗೆ ಹತ್ತಿರವಾದುದು, ದೂರವಾದುದು ಎಂಬಂಶವು ಅಭಿಧಾಗಮ್ಯವಲ್ಲ; ವ್ಯಂಜನಾಗಮ್ಯ. ಆದ್ದರಿಂದ ವ್ಯಂಜನಾ ವೃತ್ತಿಯನ್ನು ಇಲ್ಲವೆಂದರೆ ಇನ್ನು ಶ್ರುತ್ಯಾದಿಗಳಲ್ಲಿ ಬಲಾಬಲವನ್ನು ನಿರ್ಧರಿಸ ಹೊರಡುವುದೇ ಶಕ್ಯವಾಗುವುದಿಲ್ಲ. ಯಾವುದನ್ನು ನೇರವಾಗಿ ಶಬ್ದದಿಂದ ಹೇಳಿದೆಯೋ ಅದು 'ಶ್ರುತಿ'. 'ಲಿಂಗ'ವೆಂದರೆ 'ಪುಲ್ಲಿಂಗ', 'ಸ್ತ್ರೀಲಿಂಗ' ಇತ್ಯಾದಿ ನಿರ್ದೇಶ, ಸಮುದಾಯಾರ್ಥವನ್ನು ಹೇಳುವ ಪದವೃಂದವೇ 'ವಾಕ್ಯ', 'ಪ್ರಕರಣ'ವೆಂದರೆ ಸಂದರ್ಭ, 'ಸ್ಥಾನ'ವೆಂದರೆ ಒಂದೇ ಕಡೆ ಇರುವಿಕೆ, 'ಸಮಾಖ್ಯೆ' ಯೆಂದರೆ ಯೌಗಿಕ ಶಬ್ದಾರ್ಥ

ಇದೂ ಅಲ್ಲದೆ ನಿಮ್ಮ ವಾದವನ್ನೊಪ್ಪಿದರೆ ಕಾವ್ಯದಲ್ಲಿ "ಕುರು ರುಚಿಂ" ಎಂಬುದರ ಪದಗಳನ್ನು ಬದಲಿಸಿ "ರುಚಿಂ ಕುರು" ಎಂದರೆ (ಅಶ್ಲೀಲ) ದೋಷ ತಾನೆ ಹೇಗೆ ಬಂದೀತು?[56] ಇಲ್ಲಿ ಅಸಭ್ಯಾರ್ಥವೇನೂ ಪದಾರ್ಥಾಂತರಗಳೊಡನೆ ಅನ್ವಿತವಾಗಿಲ್ಲವಲ್ಲ! ಎಂದ ಮೇಲೆ ಅಸಭ್ಯಾರ್ಥವು ಇಲ್ಲಿ ವಾಚ್ಯವಲ್ಲವೇ ಅಲ್ಲವೆಂದು ತಿಳಿಯಬೇಕಾಗುತ್ತದೆ. ಇಂತಹ ಪ್ರಯೋಗಗಳನ್ನು ತ್ಯಾಜ್ಯಮಾಡಬೇಕಾದ ಪ್ರಸಕ್ತಿಯೇ ಇಲ್ಲವಾಗುತ್ತದೆ.

ಮತ್ತೇನೆಂದರೆ, ವಾಚ್ಯ-ವಾಚಕತ್ವ (=ಅಭಿಧಾ) ವ್ಯಾಪಾರಕ್ಕಿಂತ ಬೇರೆಯಾದ ವ್ಯಂಗ್ಯ-ವ್ಯಂಜಕ ಭಾವವನ್ನು ಅಂಗೀಕರಿಸದಿದ್ದರೆ, ಅಸಾಧುಪ್ರಯೋಗಗಳು ನಿತ್ಯದೋಷವೆಂದೂ 'ಶ್ರುತಿಕಷ್ಟ' ಮುಂತಾದುವು ಅನಿತ್ಯದೋಷವೆಂದೂ ವಿಭಾಗ ಮಾಡುವುದೇ ತಪ್ಪಾದೀತು. ವಸ್ತುತಃ ವಿಭಾಗವು ತಪ್ಪಲ್ಲ, ಏಕೆಂದರೆ ಅವುಗಳ ಸ್ವರೂಪಭೇದವು ಸುಸ್ಪಷ್ಟವಾಗಿಯೇ ಕಾಣಬರುತ್ತದೆ. ವಾಚ್ಯ-ವಾಚಕಭಾವಕ್ಕಿಂತ ವಿಲಕ್ಷಣವಾದ ವ್ಯಂಗ್ಯ-ವ್ಯಂಜಕಭಾವವನ್ನು ಅಂಗೀಕರಿಸುವುದರಿಂದ ಮಾತ್ರ ಇದು ಸಿದ್ಧವಾಗುತ್ತದೆ. ವ್ಯಂಗ್ಯವು ಬಹುವಿಧವಾಗಿರುವುದರಿಂದ, ಕೆಲವೆಡೆಗಳಲ್ಲಿ ಮಾತ್ರ ಅನೌಚಿತ್ಯದ ಕಾರಣ ದೋಷವೆನಿಸುತ್ತವೆಂದೂ, ಮತ್ತೆ ಕೆಲವೆಡೆಗಳಲ್ಲಿ ಔಚಿತ್ಯವನ್ನೇ ಹೆಚ್ಚಿಸುವುವೆಂದೂ ಹೇಳಲು ಅವಕಾಶವಿರುತ್ತದೆ; ಉಕ್ತ ವಿಭಾಗವ್ಯವಸ್ಥೆಯನ್ನು ಸಮರ್ಥಿಸಲು ಸಾಧ್ಯವಾಗುತ್ತದೆ.

ದ್ವಯಂ ಗತಂ ಸಂಪ್ರತಿ ಶೋಚನೀಯತಾಂ
ಸಮಾಗಮಪ್ರಾರ್ಥನಯಾ ಕಪಾಲಿನಃ। (ಕಾಳಿದಾಸನ ಕುಮಾರಸಂಭವ)

ಕೂಡಲ್ಕೆಳಸಿ ಕಪಾಲಿಯ
ನೀಡುಂ ತಾನೆರಡುಮಿಂದು ಮರುಕಕ್ಕೆಡೆಗಳ್ ।

ಇತ್ಯಾದಿ ಪ್ರಯೋಗಗಳಲ್ಲಿ 'ಪಿನಾಕಿ' ಎಂಬ ಸಮಾನಾರ್ಥಕ ಪದಕ್ಕಿಂತ 'ಕಪಾಲಿ' ಎಂಬುದು ಹೆಚ್ಚು ಕಾವ್ಯಾನುಗುಣವೆಂದು ಹೇಳಲು ಕಾರಣವೇನುಳಿದೀತು? (ಎಲ್ಲ ಶಬ್ದಗಳ ವಾಚ್ಯಾರ್ಥವೂ ಒಂದೇ ಆಗಿಬಿಟ್ಟ ಕಾಲದಲ್ಲಿ).

ಮತ್ತೇನೆಂದರೆ, ವಾಚ್ಯಾರ್ಥವು ಎಲ್ಲ ಗ್ರಾಹಕಜನರಿಗೂ ಏಕರೂಪವಾಗಿ ನಿಯತವಾಗಿರುತ್ತದೆ. 'ಸೂರ್ಯನು ಅಸ್ತಂಗತನಾದನು' ಎಂಬ ವಾಕ್ಯದಲ್ಲಿ ವಾಚ್ಯಾರ್ಥವು ಒಬ್ಬೊಬ್ಬರಿಗೂ ಬೇರೆಯಾಗುವುದು ಸಾಧ್ಯವೇ ಇಲ್ಲ. ಆದರೆ

---

[56] 'ಚಿಂಕು' ಎಂದರೆ ಯೋನಿಯೊಳಗಿನ ಮಣಿ (=Clitoris) ಎಂಬ ಅರ್ಥವುಂಟೆಂದು ಮಾಣಿಕ್ಯಚಂದ್ರನು ಬರೆದಿದ್ದಾನೆ.

ವ್ಯಂಗ್ಯಾರ್ಥವು ಮಾತ್ರ ಆಯಾ ಸಂದರ್ಭ, ಹೇಳುವ ಮತ್ತು ಕೇಳುವ ಜನರ ವೈಶಿಷ್ಟ್ಯ, ಮುಂತಾದುವುಗಳನ್ನವಲಂಬಿಸಿ ಬೇರೆ ಬೇರೆಯಾಗುವುದು ಸಾಧ್ಯವಿದೆ. 'ಸೂರ್ಯನು ಅಸ್ತಂಗತನಾದನು' ಎಂಬ ವಾಕ್ಯವೊಂದರಿಂದಲೇ 'ಶತ್ರುವಿನ ಮೇಲೆ ಬೀಳಲು ಇದೇ ಸಮಯ', 'ಪ್ರಿಯತಮನನ್ನು ಅಭಿಸರಣಮಾಡಲು ಇದೇ ಕಾಲ', 'ಇನ್ನೇನು, ನಿನ್ನ ಪ್ರಿಯನು ಬಂದಂತೆಯೇ', 'ಕೆಲಸವನ್ನೀಗ ನಿಲ್ಲಿಸಬೇಕು', 'ಇನ್ನು ಸಂಧ್ಯಾವಂದನೆ ಮಾಡಬೇಕು', 'ದೂರ ಹೋಗಬೇಡ', 'ಹಸುಗಳನ್ನು ಮನೆಗೆ ಹೊಡೆಯಿರಿ', 'ಇನ್ನು ಸೆಖೆಯಿರುವುದಿಲ್ಲ', 'ಮಾರುವ ಸಾಮಾನುಗಳನ್ನು ಕಟ್ಟಿಡಬೇಕು', 'ಇನ್ನೂ ಪ್ರಿಯತಮನು ಬರಲಿಲ್ಲ', ಇತ್ಯಾದಿ ಅಸಂಖ್ಯ ವ್ಯಂಗ್ಯಾರ್ಥಗಳು ಸಂದರ್ಭೋಚಿತವಾಗಿ ಪ್ರತೀತಿಗೆ ಬರಬಹುದು.

ವಾಚ್ಯ ಮತ್ತು ವ್ಯಂಗ್ಯಾರ್ಥಗಳಿಗೆ 'ನಿಃಶೇಷ . . .' ಇತ್ಯಾದಿ ಲಕ್ಷ್ಯಗಳಲ್ಲಿ ನಿಷೇಧ-ವಿಧಿ ರೂಪವಾದ ವ್ಯತ್ಯಾಸವಿರುವಂತೆ,

ಮಾತ್ಸರ್ಯಮುತ್ಸಾರ್ಯ ವಿಚಾರ್ಯ ಕಾರ್ಯ-
ಮಾರ್ಯಾಃ ಸಮರ್ಯಾದಮುದಾಹರನ್ತು ।
ಸೇವ್ಯಾ ನಿತಂಬಾಃ ಕಿಮು ಭೂಧರಾಣಾ
ಮುತ ಸ್ಮರಸ್ಮೇರವಿಲಾಸಿನೀನಾಮ್ ॥

ಜರೆಯದೆ ಪರಿಕಿಸಿ ನುಡಿವುದು
ವರವಿಬುಧರ್ ಯೋಗ್ಯಮಾವುದೆಂಬುದನೇಂ ಭೂ-।
ಧರಗಳ ನಿತಂಬಮಧಿಕಮೊ
ಧರಣಿಯೊಳನುರಾಗಮುಕ್ಕುವಂಗನೆಯರದೋ ॥

ಎಂಬಲ್ಲಿ ಒಂದು (=ವಾಚ್ಯ) ಸಂಶಯವನ್ನು ಹೇಳಿದರೆ, ಇನ್ನೊಂದು (=ವ್ಯಂಗ್ಯ) ಶಾಂತ-ಶೃಂಗಾರಗಳೆರಡರಲ್ಲಿ ಒಂದನ್ನಾದರೂ ಸಾಧಿಸಲೇಬೇಕೆಂಬ ನಿಶ್ಚಯವನ್ನೇ ಹೇಳುತ್ತದೆ.

ಕಥಮವನಿಪ ದರ್ಪೋ ಯನ್ನಿಶಾತಾಸಿಧಾರಾ-
ದಲನಗಲಿತಮೂರ್ಧ್ನಾ ವಿದ್ವಿಷಾಂ ಸ್ವೀಕೃತಾ ಶ್ರೀಃ ।
ನನು ತವ ನಿಹತಾರೇರಪ್ಯಸೌ ಕಿಂ ನ ನೀತಾ
ತ್ರಿದಿವಮುಪಗತಾಂಗ್ಯೈರ್ವಲ್ಲಭಾ ಕೀರ್ತಿರೇಭಿಃ ॥

ತರಿಯುತ್ತಿನ್ನಸಿಧಾರೆಯಿಂದೆ ರಿಪುಮೂರ್ಧಾನಂಗಳಂ ಕೊಂಡೆ ನಾಂ
ಸಿರಿಯಂ ಬೀರದಿನೆಂಬ ಗರ್ವಮಿದೆ ಕೇಳ್ ವ್ಯರ್ಥಂ ಮಹಾರಾಜನೇ |
ಮರಣಂಗೊಂಡರಿಯುಂ ಗಡಾ ನಿನತು ಪೇಳೂನಾಂಗದಿಂದುಯ್ಯನೇ
ವರಕೀರ್ತ್ಯಂಗನೆಯಂ ಸಮಂತು ದಿವಕಂ ತಾಂ ಪೋಗುವಾಗಳ್ ದಿಟಂ ||

ಎಂಬಲ್ಲಿ ವಾಚ್ಯವು ನಿಂದೆಯಾದರೆ ವ್ಯಂಗ್ಯವು ಸ್ತುತಿರೂಪವಾಗಿದೆ. ಅಲ್ಲದೆ ಇವೆರಡಕ್ಕೂ ಪ್ರತೀತಿಕಾಲದಲ್ಲಿ ಪೂರ್ವ-ಅಪರವೆಂಬ ಭೇದವಿದೆ; ವಾಚ್ಯದ ಆಶ್ರಯವು ಶಬ್ದವಾದರೆ ವ್ಯಂಗ್ಯದ ಆಶ್ರಯವು ಶಬ್ದ, ಶಬ್ದೈಕದೇಶ, ಅರ್ಥ, ವರ್ಣ, ಸಂಘಟನೆ, ಯಾವುದಾದರೂ ಆಗಬಹುದಾದ್ದರಿಂದ ಆಶ್ರಯಭೇದವಿದೆ; ವಾಚ್ಯವ್ಯುತ್ಪತ್ತಿಗೆ ವ್ಯಾಕರಣ, ಕೋಶ, ಮುಂತಾದುವು ನಿಮಿತ್ತಗಳಾದರೆ ವ್ಯಂಗ್ಯಪ್ರತೀತಿಗೆ ಸಂದರ್ಭಾದಿ ವೈಶಿಷ್ಟ್ಯ ಪರಾಮರ್ಶವೂ ಪ್ರತಿಭಾನೈರ್ಮಲ್ಯವೂ ಹೆಚ್ಚಿನ ನಿಮಿತ್ತಗಳಾಗಿರುವುದರಿಂದ ನಿಮಿತ್ತಭೇದವಿದೆ; ವಾಚ್ಯವನ್ನು ಗ್ರಹಿಸಿದವನನ್ನು ತಿಳಿದವನೆಂದಷ್ಟೇ ಭಾವಿಸುತ್ತೇವೆ, ಆದರೆ ವ್ಯಂಗ್ಯವನ್ನು ಗ್ರಹಿಸಿದವನನ್ನು ಬುದ್ಧಿವಂತ (=ರಸಿಕ) ನೆನ್ನುತ್ತೇವೆ, ಮತ್ತು ವಾಚ್ಯದ ಪರಿಣಾಮ ಬರಿಯ ಪ್ರತೀತಿಯಾದರೆ ವ್ಯಂಗ್ಯದ ಪರಿಣಾಮ ಚಮತ್ಕೃತಿಯಾಗುವುದರಿಂದ ವಾಚ್ಯ-ವ್ಯಂಗ್ಯಗಳಿಗೆ ಕಾರ್ಯಭೇದವೂ ಉಂಟೆಂದಾಯಿತು. 'ಸೂರ್ಯನು ಅಸ್ತಂಗತನಾದನು' ಎಂಬ ಉದಾಹರಣೆಯಲ್ಲಿ ತೋರಿಸಿದಂತೆ ವಾಚ್ಯವು ನಿಯಮಿತವಾಗಿ ಒಂದೇ ಆಗಿರುತ್ತಿದ್ದರೆ ವ್ಯಂಗ್ಯವು ಲೆಕ್ಕವಿಲ್ಲದಷ್ಟು ಬಗೆಗಳಾಗಿ ಕಂಗೊಳಿಸಬಲ್ಲುದಾದ್ದರಿಂದ ಸಂಖ್ಯಾಭೇದವೂ ಸ್ಪಷ್ಟವಾಗಿದೆ.

ಕಸ್ಸ ವಾ ಣ ಹೋಇ ರೋಸೋ ದಟ್ಠೂಣ ಪಿಆಇ ಸವ್ವಣಂ ಅಹರಮ್ |
ಸಭಮರಪಡಮಗ್ಘಾಇಣಿ ವಾರಿಅವಾಮೇ ಸಹಸು ಏಣ್ಹಿಮ್ ||

ಸಲ್ಲೆಯ ಚೆಂದುಟಿ ಗಾಸಿಯದಾಗಿರೆ
ನೋಡುವ ಕಾಂತಗೆ ಕಡುಮುಳಿಸು
ಬಾರದೆ ಪೋಪುದೆ? ಯಾರೇನೆನ್ನಲಿ
ಒಂದನು ಒಮ್ಮೆಯು ಕೇಳದೆಯೆ
ದುಂಬಿಯು ಕೂಡಿದ ಪೂವನೆ ಮೂಸಿದೆ
ಫಲವನ್ನೀಗಿದೊ ನೀಂ ಸಹಿಸೌ.

ಎಂಬಲ್ಲಿ ವಾಚ್ಯವು ಸಖಿಯನ್ನು ಕುರಿತಿದ್ದರೆ ವ್ಯಂಗ್ಯವು ಕಾಂತನನ್ನು ಕುರಿತಿರುವುದರಿಂದ ವಿಷಯಭೇದವೂ ಇದೆ. ಇಷ್ಟೆಲ್ಲ ಭೇದಗಳಿದ್ದರೂ ವಾಚ್ಯ-ವ್ಯಂಗ್ಯಗಳೆರಡೂ ಒಂದೇ ಎನ್ನುವುದಾದರೆ ಕಪ್ಪು ಮತ್ತು ಬಿಳುಪುಗಳಲ್ಲಿಯೂ ಭೇದವಿಲ್ಲವೆನ್ನಬೇಕಾ

ದೀತು! ಪ್ರಾಚೀನರು ಹೇಳಿರುವಂತೆ—"ಎರಡು ವಸ್ತುಗಳಲ್ಲಿ ವಿರುದ್ಧಧರ್ಮಗಳು ಕಾಣಬರುವುದೇ ಭೇದ ಅಥವಾ ಭೇದನಿಮಿತ್ತ." ವಾಚಕಗಳಿಗೆ ಅರ್ಥಗಳ (=ಸಂಕೇತಿತಾರ್ಥಗಳ) ಅಪೇಕ್ಷೆಯುಂಟೇ ಉಂಟು; ಆದರೆ ವ್ಯಂಜಕಗಳಿಗೆ ಅರ್ಥ ಸಾಪೇಕ್ಷತ್ವವೂ ಇಲ್ಲ. ಆದ್ದರಿಂದ ವಾಚಕತ್ವವೇ ವ್ಯಂಜಕತ್ವವೆಂದು ಹೇಳಬರುವಂತಿಲ್ಲ.

ಇದೂ ಅಲ್ಲದೆ "ವಾಣೀರ . . ." ಮುಂತಾದ ಲಕ್ಷ್ಯಗಳಲ್ಲಿ ವಾಚ್ಯವು ವ್ಯಂಗ್ಯಾರ್ಥವನ್ನು ಅಭಿವ್ಯಕ್ತಗೊಳಿಸಿಯಾದಮೇಲೆ ಪುನಃ ತನ್ನಲ್ಲಿಯೇ ವಿಶ್ರಾಂತವಾಗಿಬಿಡುತ್ತದೆ (ವಾಚ್ಯವೇ ರಮಣೀಯತರವಾದ್ದರಿಂದ). ಅಂತಹ ಗುಣೀಭೂತ ವ್ಯಂಗ್ಯದ ಲಕ್ಷ್ಯದಲ್ಲಿ ಕವಿಯ ಮುಖ್ಯ ತಾತ್ಪರ್ಯವೇ ಅಲ್ಲದ ವ್ಯಂಗ್ಯಾರ್ಥವು ಶಬ್ದದಿಂದ ವಾಚ್ಯವೂ ಅಲ್ಲವೆಂದಾದಮೇಲೆ, ಅದರ ಪ್ರತೀತಿಯನ್ನು ಸಮರ್ಥಿಸಬೇಕಾದರೆ ಮತ್ತಾವ ವ್ಯಾಪಾರಕ್ಕೆ ಅದನ್ನು ವಿಷಯವೆನ್ನಬೇಕು, (ವ್ಯಂಜನಾ ವ್ಯಾಪಾರದ ವಿನಾ!)?

ಪೂರ್ವಪಕ್ಷದವರು ಮತ್ತೂ ಹೀಗೆ ವಾದಿಸಬಹುದು:—'**ರಾಮೋಽಸ್ಮಿ** ಸರ್ವಂ ಸಹೇ' (ನಾನು ರಾಮನೇ ಆದ್ದರಿಂದ ಎಲ್ಲವನ್ನೂ ಸಹಿಸುತ್ತೇನೆ), '**ರಾಮೇಣ** ಪ್ರಿಯಜೀವಿತೇನ ತು ಕೃತಂ ಪ್ರೇಮ್ಣಃ ಪ್ರಿಯೇ ನೋಚಿತಮ್' ('ಪ್ರಿಯೆ, ಜೀವಗಳ್ಳನಾದ ರಾಮನಿಂದ ಪ್ರೇಮೋಚಿತವಾದ ಕಾರ್ಯವೇನೂ ಮಾಡಲ್ಪಡಲಿಲ್ಲ'), '**ರಾಮೋಽಸೌ** ಭುವನೇಷು ವಿಕ್ರಮಗುಣೈಃ ಪ್ರಾಪ್ತಃ ಪ್ರಸಿದ್ಧಿಂ ಪರಾಂ' ('ಈ ರಾಮನು ತನ್ನ ಪರಾಕ್ರಮಗುಣಕ್ಕೆ ಲೋಕದಲ್ಲೆಲ್ಲ ವಿಖ್ಯಾತನಾಗಿದ್ದಾನೆ') ಇತ್ಯಾದಿ ಉದಾಹರಣೆಗಳಲ್ಲಿ, ಲಕ್ಷಣಾವ್ಯಾಪಾರಗಮ್ಯವಾದ ಅರ್ಥವೇ ನಾನಾ ಬಗೆಗಳನ್ನು ತಾಳುತ್ತದೆ; ವಿಶೇಷವ್ಯಪದೇಶಕ್ಕೆ (ಬುದ್ಧಿವಂತ, ರಸಿಕ, ಇತ್ಯಾದಿ ಶಬ್ದಗಳಿಂದ ಅರ್ಥಜ್ಞನನ್ನು ಕರೆಯಲು) ನಿಮಿತ್ತವೂ ಆಗುತ್ತದೆ; ಅದರ ಪ್ರತೀತಿಯಾದರೂ ಶಬ್ದ, ಅರ್ಥ, ಎರಡನ್ನೂ ಅವಲಂಬಿಸಿರುವಂತಹುದು; ಸಂದರ್ಭ ಮುಂತಾದುವುಗಳ ಪರಾಮರ್ಶವನ್ನಾಶ್ರಯಿಸಿರುವಂತಹುದು, ಎಂದ ಮೇಲೆ ಲಕ್ಷ್ಯಾರ್ಥವೆನ್ನದೆ ಹೊಸದಾಗಿ ವ್ಯಂಗ್ಯಾರ್ಥವೆನ್ನುವುದು ಯಾವುದು?'

ಉತ್ತರವಿಷ್ಟೆ:—ಲಕ್ಷ್ಯಾರ್ಥಗಳು ಅನೇಕವಾಗಿದ್ದರೂ ನಾನಾರ್ಥಕಶಬ್ದದ ವಾಚ್ಯಾರ್ಥಗಳು ಹೇಗೋ ಹಾಗೆ, ಆ ಅರ್ಥಗಳೂ ನಿಯತವಾದಂಥವು. ಮುಖ್ಯಾರ್ಥದೊಡನೆ ನಿಯತಸಂಬಂಧವಿಲ್ಲದ ಅರ್ಥವೊಂದನ್ನು ಲಕ್ಷಣಾವ್ಯಾಪಾರದಿಂದ ಬೋಧಿಸುವುದು ಅಶಕ್ಯ. ಆದರೆ ವ್ಯಂಗ್ಯಾರ್ಥವು ಸಂದರ್ಭಾದಿಗಳ ವೈಶಿಷ್ಟ್ಯದ ಬಲದಿಂದ, ನಿಯತಸಂಬಂಧವಿರುವಾಗಲೂ, ನಿಯತಸಂಬಂಧವಿಲ್ಲದಿರುವಾಗಲೂ ಅಭಿವ್ಯಕ್ತ

ವಾಗುತ್ತದೆ; ಬೇರೆಬೇರೆ ಸಂಬಂಧಗಳ ಪರಂಪರೆಯನ್ನಾಶ್ರಯಿಸಿಯೂ ಅಭಿವ್ಯಕ್ತ ವಾಗುತ್ತದೆ.

ಅತ್ತಾ ಏತ್ಥ ಣಿಮಜ್ಜಇ ಏತ್ಥ ಅಹಂ ದಿಅಸಏ ಪಲೋಏಹಿ।
ಮಾ ಪಹಿಅ ರತ್ತಿಅಂಧಅ ಸೇಜ್ಜಾಏ ಮಹ ಣಿಮಜ್ಜಿಹಿಸಿ ॥

ಅತ್ತೆಯಿಲ್ಲಿ ನಿದ್ದೆಗೈವಳಿಲ್ಲಿ ನಾನು ಎಂಬುದನ್ನು
ಹಗಲಿನಲ್ಲೆ ಕಣ್ಣತುಂಬ ಪಥಿಕ, ನೋಡಿರು;
ಕತ್ತಲಲ್ಲಿ ಕುರುಡನಾಗಿ ನಮ್ಮ ಸೆಜ್ಜೆಗಳಲಿ ಬಂದು
ಬಿದ್ದುಬಿಡುವ ಭಂಗ ನಿನಗೆ ಬಾರದಂತಿರು.

ಎಂಬ ವಿವಕ್ಷಿತಾನ್ಯಪರವಾಚ್ಯ-ಧ್ವನಿಯಲ್ಲಿ ಮುಖ್ಯಾರ್ಥಬಾಧೆಯೇ ಇಲ್ಲ; ಇಲ್ಲಿ ಲಕ್ಷಣಾವ್ಯಾಪಾರಕ್ಕೆ ಪ್ರಸಕ್ತಿ ತಾನೆ ಎಲ್ಲಿ? ಲಕ್ಷಣಾವ್ಯಾಪಾರದಲ್ಲಿಯೂ ವ್ಯಂಜನಾ ವ್ಯಾಪಾರವನ್ನು ಆಶ್ರಯಿಸಬೇಕಾಗುತ್ತದೆಂಬುದನ್ನು ಆಗಲೇ ಪ್ರತಿಪಾದಿಸಲಾಯಿತು. ಅಭಿಧಾವ್ಯಾಪಾರವು ಹೇಗೆ ಸಂಕೇತಸಾಪೇಕ್ಷವೋ ಹಾಗೆಯೇ ಲಕ್ಷಣಾವ್ಯಾಪಾರವೂ ಮುಖ್ಯಾರ್ಥಬಾಧೆ, ಮುಖ್ಯಾರ್ಥಯೋಗ, ಮತ್ತು ರೂಢಿ ಅಥವಾ ಪ್ರಯೋಜನಗಳೆಂಬ ಮೂರರ ನಿಯಮಸಾಪೇಕ್ಷ. ಆದ್ದರಿಂದಲೇ ಲಕ್ಷಣೆಯನ್ನು ಅಭಿಧೆಯ ಬಾಲವೆಂದೂ ಹೇಳುತ್ತಾರೆ.

ವ್ಯಂಜಕತ್ವವು ಲಕ್ಷಣಾವ್ಯಾಪಾರವೇ ಆಗಲಾರದು; ಏಕೆಂದರೆ ಲಕ್ಷಣೆಯನ್ನು ಹಿಂಬಾಲಿಸಿಕೊಂಡು ಅದು ಬರುತ್ತದೆ. ಬರಿಯ ಲಕ್ಷಣೆಯನ್ನು ಮಾತ್ರವೇ ಅದು ಹಿಂಬಾಲಿಸುವುದಿಲ್ಲ; ಅಭಿಧೆಯನ್ನು ಹಿಂಬಾಲಿಸಿಯೂ ಅದು ಇರುವುದುಂಟು. ಇವೆರಡನ್ನೇ ಹಿಂಬಾಲಿಸಬೇಕೆಂಬ ನಿಯಮ ವೊದಲೇ ಇಲ್ಲ; ವಾಚಕತ್ವಶಕ್ತಿಯೇ ಇಲ್ಲದ ಅಕ್ಷರಾದಿಗಳನ್ನೂ ಅದು ಹಿಂಬಾಲಿಸುವುದರಿಂದ. ಅದು ಶಬ್ದಾರ್ಥಗಳನ್ನು ಮಾತ್ರವೇ ಹಿಂಬಾಲಿಸಬೇಕಾಗಿಲ್ಲ; ಶಬ್ದಾತ್ಮಕವೇ ಅಲ್ಲದ ಕಟಾಕ್ಷವಿನ್ಯಾಸಾದಿಗಳಿಂದಲೂ ಅದು ಜನಿಸುವುದು ಸುಪ್ರಸಿದ್ಧವಾಗಿರುವುದರಿಂದ. ಹೀಗೆ ಅಭಿಧಾ, ತಾತ್ಪರ್ಯ, ಲಕ್ಷಣಾ, ಎಂಬ ಮೂರು ವ್ಯಾಪಾರಗಳಿಗಿಂತಲೂ ವಿಲಕ್ಷಣವಾದ, 'ವ್ಯಂಜಕತ್ವ', 'ಧ್ವನನ', ಮುಂತಾದ ಶಬ್ದಗಳಿಂದ ಹೆಸರಿಸಲ್ಪಡುವ, ನಾಲ್ಕನೆಯ ವ್ಯಾಪಾರವುಂಟೆಂಬುದನ್ನು ಯಾರೂ ಇಲ್ಲವೆನ್ನುವಂತಿಲ್ಲ.

ಪೂರ್ವೋಕ್ತ ಉದಾಹರಣೆಗಳನ್ನೇ ನೋಡೋಣ: 'ಅತ್ತಾ ಏತ್ಥ . . .' ಎಂಬಲ್ಲಿ ವಾಚ್ಯ-ವ್ಯಂಗ್ಯಗಳಿಗೆ ನಿಯತವಾದ ಸಂಬಂಧವಿದೆ. 'ಕಸ್ಸಣ ಹೋಇ . .' ಎಂಬಲ್ಲಿ ಅನಿಯತವಾದ ಸಂಬಂಧವಿದೆ.

ವಿವರೀಅರಏ ಲಚ್ಛೀ ಬಹ್ಮಂ ದಟ್ಠೂಣ ಣಾಹಿಕಮಲಟ್ಠಮ್ |
ಹರಿಣೋ ದಾಹಿಅಣಅಣಂ ರಸಾಉಲಾ ಝತ್ತಿ ಢಕ್ಕೇಇ ||

ಸುರತ ವಿಪರೀತ ಪದದೊಳ್
ಪರಮೇಷ್ಠಿಯ ಕಂಡು ನಾಭಿಕಮಲದೆ ರಮೆ ತಾಂ |
ಭರದಿಂ ರಸಲಾಲಸೆಯಿಂ
ಹರಿಯಾ ಬಲಗಣ್ಣಸೊತ್ತಿ ಮೆರೆವಳಾ ಜಯಮಂ ||

ಎಂಬಲ್ಲಿ ಸಂಬದ್ಧಸಂಬಂಧ (=ಪರಂಪರಿತಸಂಬಂಧ) ಏದೆ. ಇಲ್ಲಿ ಹರಿಯ ಬಲ ಗಣ್ಣೆಂದರೆ ಸೂರ್ಯನೆಂದು, ಅದನ್ನು ಮುಚ್ಚುವುದೆಂದರೆ ಸೂರ್ಯಾಸ್ತಮಯವೆಂದು, ತತ್ಫಲವಾಗಿ ಪದ್ಮವು ಮೊಗ್ಗಾಗುವುದು, ತತ್ಪರಿಣಾಮವಾಗಿ ಬ್ರಹ್ಮನು ಮರೆ ಯಾಗುವನು, ಅನಂತರ ಗೋಪ್ಯವಾದ ಅಂಗದ ದರ್ಶನವು ನಿವಾರಿತವಾದ್ದರಿಂದ ನಿರಾತಂಕವಾಗಿ ಸುರತಕ್ರೀಡೆಯು ನಡೆಯಿತೆಂದು ವ್ಯಂಗ್ಯಪರಂಪರೆಯೇ ಇದೆ.

ಶಬ್ದಬ್ರಹ್ಮವಾದಿಗಳು ಪಾರಮಾರ್ಥಿಕ ದೃಷ್ಟಿಯಿಂದ ವಿಚಾರಿಸಿದಾಗ, ಕೇವಲ ಅಖಂಡರೂಪದಲ್ಲಿ ಪ್ರತೀತವಾಗುವ (ಸ್ಫೋಟರೂಪ) ವಾಕ್ಯಾರ್ಥವನ್ನೇ ವಾಚ್ಯ ವೆಂದೂ ವಾಕ್ಯವನ್ನೇ ವಾಚಕವೆಂದೂ ಒಂದು ವೇಳೆ ಹೇಳಬಹುದು ; ಆದರೆ ಅವರು ಕೂಡ ವ್ಯಾವಹಾರಿಕ ಸ್ಥಿತಿಯಲ್ಲಿರುವಾಗ, ಎಂದರೆ ಅವಿದ್ಯಾಕಲ್ಪಿತವಾದ ನಾಮರೂಪ ಪ್ರಪಂಚದಲ್ಲಿ ವ್ಯವಹರಿಸುವಾಗ, ಪದ-ಪದಾರ್ಥ ಮುಂತಾದ ಭೇದಗಳನ್ನೆಲ್ಲ ಅಂಗೀ ಕರಿಸಲೇಬೇಕಾಗುತ್ತದೆ. ಆದುದರಿಂದ ಅವರ ಪಕ್ಷವನ್ನು ಹಿಡಿದವರು ಕೂಡ 'ನಿಃಶೇಷ . . .' ಇತ್ಯಾದಿ ಉದಾಹರಣೆಗಳಲ್ಲಿ ವಿಧಿ ಇತ್ಯಾದಿಗಳು ವ್ಯಂಗ್ಯವೆಂದೇ ಒಪ್ಪಬೇಕಾಗುತ್ತದೆ.

ತಾರ್ಕಿಕರು ಹೀಗೆ ವಾದಿಸಬಹುದು :—'ವ್ಯಂಗ್ಯವು ಕೂಡ ವಾಚ್ಯದೊಡನೆ ಅಸಂಬದ್ಧವಾಗಿರಲಾರದು (ಒಂದಿಲ್ಲೊಂದು ಸಂಬಂಧವೆರಡಕ್ಕೂ ಉಂಟೆನ್ನಲೇ ಬೇಕು) ; ಇಲ್ಲವಾದರೆ ಯಾವುದರಿಂದ ಯಾವ ಅರ್ಥ ಬೇಕಾದರೂ ಪ್ರತೀತವಾಗಿ ಬಿಡಬೇಕಾಗುತ್ತದೆ. ಏವಂಚ ನಿಯತವಾದ ಒಂದು ಸಂಬಂಧವುಂಟೆಂದಮೇಲೆ, ಆ ಸಂಬಂಧವು ತಪ್ಪಿದಾಗ ವ್ಯಂಗ್ಯವ್ಯಂಜಕಭಾವವು ಗೋಚರಿಸಲಾರದೆಂಬುದೂ ಸಿದ್ಧವಾಗುತ್ತದೆ. ಇಂತಹ ಅನ್ವಯ-ವ್ಯತಿರೇಕ ಸಾಹಚರ್ಯವನ್ನೇ ನಾವು 'ವ್ಯಾಪ್ತಿ' ಯೆನ್ನುತ್ತೇವೆ. ಹೀಗೆ ಇಲ್ಲಿ ವ್ಯಾಪ್ತಿಯಿರುವುದರ ಜತೆಗೆ 'ಪಕ್ಷಧರ್ಮತೆ'ಯೂ ಇರುವುದರಿಂದ 'ವ್ಯಂಜಕ'ವೆನ್ನುವ ಬದಲು ಅದನ್ನು ಸಪಕ್ಷಸತ್ತ್ವ, ವಿಪಕ್ಷವ್ಯಾವೃತ್ತತ್ವ, ಪಕ್ಷವೃತ್ತಿತ್ವವೆಂಬ ಮೂರೂ ಲಕ್ಷಣಗಳನ್ನುಳ್ಳ ಸಾಧನವೆಂದೇ ಪರಿಗಣಿಸು

ವುದುಚಿತ. ಸಾಧನದಿಂದ ಸಾಧಿಸುವ ಸಾಧ್ಯದ ಪ್ರತೀತಿಯನ್ನು "ಅನುಮಾನ" ವೆನ್ನಬೇಕು. ಆದುದರಿಂದ ವ್ಯಂಜನಾವೃತ್ತಿಯು ಅನುಮಿತಿಯಲ್ಲಿಯೇ ಐಕ್ಯವಾಗುತ್ತದೆ. ಉದಾಹರಣೆಗೆ—

ಭಮ ಧಮ್ಮಿಅ ವೀಸದ್ಧೋ ಸೋ ಸುಣಓ ಅಜ್ಜ ಮಾರಿಓ ದೇಣ।
ಗೋಲಾಣಈಕಚ್ಛಕುಡಂಗವಾಸಿಣಾ ದರಿಅಸೀಹೇಣ ॥

ನಡೆದಾಡು ಧಾರ್ಮಿಕನೆ ನಿಶ್ಶಂಕೆಯಿಂದಿನ್ನು
ಹತಮಾದುದಾ ನೀಚ ಶುನಕವಿಂದೆ।
ಗೋದಾವರೀನದಿಯ ತಡಿಯ ಹೊದರುಗಳಲ್ಲಿ
ವಾಸಿಸುವ ಪಿರಿದಪ್ಪ ಸಿಂಹದಿಂದೆ ॥

ಎಂಬಲ್ಲಿ ಮನೆಯ ಹತ್ತಿರ ನಾಯಿ ತೊಲಗಿದ್ದರಿಂದ ನಡೆದಾಡಬಹುದೆಂಬ ವಿಧಿಯಿದ್ದರೂ ಗೋದಾವರೀತೀರದಲ್ಲಿ ಸಿಂಹವಿರುವುದರಿಂದ ನಡೆದಾಡಬಾರದೆಂಬ ನಿಷೇಧವನ್ನು ಅನುಮಾನ ಮಾಡಲು ಸಹಾಯಕವಾಗಿದೆ. (ವ್ಯಾಪ್ತಿವಾಕ್ಯವನ್ನು ಹೀಗೆ ಹೇಳಬಹುದು:—) ಎಲ್ಲೆಲ್ಲಿ ಭೀರುಗಳ ಸಂಚಾರವುಂಟೋ ಅಲ್ಲೆಲ್ಲ ಭಯಕಾರಣನಿವೃತ್ತಿ ಪರಿಜ್ಞಾನವೂ ಉಂಟೇ ಉಂಟು. ಗೋದಾವರೀತೀರದಲ್ಲಾದರೋ ಸಿಂಹದ ಜ್ಞಾನ ಬರುವುದರಿಂದ ವ್ಯಾಪ್ತಿಗೆ ಬಾಧಕವಾದ ಜ್ಞಾನ ಬಂದಂತಾಯಿತು. (ಆದ್ದರಿಂದ ಅದು ಸಂಚಾರಯೋಗ್ಯವಲ್ಲವೆಂಬ ಸಾಧ್ಯವನ್ನೇ ಸಾಧಿಸುವ ಸಾಧನವಾಗುತ್ತದೆ).

ಇದಕ್ಕೀಗ ಸಮಾಧಾನ ಹೇಳುತ್ತೇವೆ:—ಭೀರುವಾದರೂ, ಗುರುವಿನ ಇಲ್ಲವೆ ಪ್ರಭುವಿನ ಅಪ್ಪಣೆಗೆ ಕಟ್ಟುಬಿದ್ದು ಅಥವಾ ಪ್ರಿಯೆಯ ಅನುರಾಗದಿಂದ ಪರವಶನಾಗಿ ಅಥವಾ ಮತ್ತಾವುದಾದರೂ ಇಂಥದೇ ಕಾರಣದಿಂದ, ಭಯಕಾರಣವಿದ್ದರೂ ಸಹ ಸಂಚರಿಸುವುದು ಸಾಧ್ಯವಿದೆಯಾದ್ದರಿಂದ ಮೇಲೆ ಸೂಚಿಸಿದ ಅನುಮಾನದಲ್ಲಿ 'ಅನೈಕಾಂತಿಕ' (*=inconclusive*) ಅಥವಾ 'ಸವ್ಯಭಿಚಾರ'ವೆಂಬ ಹೇತ್ವಾಭಾಸ (*Fallacy*) ವಿದೆ. ನಾಯಿಗೆ (ಮೈಲಿಗೆಯ ಭಯದಿಂದ) ಒಬ್ಬನು ಬೆದರಿದರೂ, ವೀರನಾಗಿರುವುದರಿಂದ ಸಿಂಹಕ್ಕೆ ಹೆದರದೆ ಹೋಗುವುದೂ ಶಕ್ಯವಾದ ಪ್ರಯುಕ್ತ ಅದರಲ್ಲಿ 'ವಿರುದ್ಧ'ವೆಂಬ ಹೇತ್ವಾಭಾಸವೂ ಇದೆ. ಗೋದಾವರೀತೀರದಲ್ಲಿ ಸಿಂಹವಿರುವುದು ಪ್ರತ್ಯಕ್ಷಪ್ರಮಾಣದಿಂದಾಗಲಿ ಅನುಮಾನಪ್ರಮಾಣದಿಂದಾಗಲಿ ನಿಶ್ಚಿತವಾಗಿಲ್ಲ; ಕೇವಲ ಶಬ್ದಪ್ರಮಾಣದಿಂದ ಅದನ್ನೊಪ್ಪಬೇಕಾಗಿದೆ. ಆದರೆ ಕುಲಟೆಯ ಮಾತು ಸುಳ್ಳಾಗಿರಬಹುದಾದ್ದರಿಂದ ಅದಕ್ಕೆ ಪ್ರಾಮಾಣ್ಯವೆಲ್ಲಿಬಂತು? ಆದುದರಿಂದ ಉಕ್ತ

ಅನುಮಾನದಲ್ಲಿ 'ಅಸಿದ್ಧ'ವೆಂಬ ಹೇತ್ವಾಭಾಸವೂ ಇದೆ. ಇಷ್ಟು ಆಭಾಸಗಳಿಂದ ದೂಷಿತವಾದ ಸಾಧನವು ಎಂದಾದರೂ ಸಾಧ್ಯವನ್ನು ಸರಿಯಾಗಿ ಸಾಧಿಸೀತೆ?

ಹಾಗೆಯೇ 'ನಿಃಶೇಷ . . .' ಎಂಬ ಲಕ್ಷ್ಯದಲ್ಲಿ ಅನುಮಿತಿವಾದಿಗಳು ಗಮಕ (=ಸಾಧನ)ಗಳೆಂದು ಯಾವ ಚಂದನಚ್ಯುತಿ ಮುಂತಾದುವನ್ನು ತೋರಿಸುತ್ತಾರೆಯೋ ಅವೇ ಕಾರಣಾಂತರಗಳಿಂದಲೂ ಉಂಟಾಗುವುದು ಶಕ್ಯವಿದೆ. ಅಲ್ಲದೆ ಇಲ್ಲಿಯೇ ಅವನ್ನು ಸ್ನಾನಕಾರ್ಯಗಳೆಂದೂ ಹೇಳಿರುವುದರಿಂದ ನಿಯತವಾಗಿ ಅವು ಉಪ ಭೋಗದ ಕಾರ್ಯಗಳೇ ಎಂದು ಸಾಧಿಸುವಂತಿಲ್ಲ. ಆದುದರಿಂದ ಉಕ್ತ ಹೇತುವಿನಲ್ಲಿ 'ಅನೈಕಾಂತಿಕ'ವೆಂಬ ದೋಷವೇ ಸಿದ್ಧವಾಗುತ್ತದೆ. ಆದರೆ ವ್ಯಕ್ತಿವಾದಿಯು ಹೇಳುವ ಪ್ರಕಾರ 'ಅಧಮ'ಪದದ ಸಹಾಯವನ್ನು ಪಡೆದ ಈ ಕಾರ್ಯಗಳು ವ್ಯಂಜಕವಾಗುತ್ತವೆ. ನಾಯಕನ ಅಧಮತ್ವವು ಪ್ರಮಾಣಸಿದ್ಧವೆಂದೂ ಹೇಳು ವಂತಿಲ್ಲ; ಎಂದ ಮೇಲೆ ಅದನ್ನಾಶ್ರಯಿಸಿ ಅನುಮಿತಿ ಹೇಗೆ ತಾನೆ ಸರಿಯಾದೀತು? ಇಂತಹ ಕಡೆಗಳಲ್ಲಿ ಇಂತಹ ಅಭಿಪ್ರಾಯಗಳು ಪ್ರಮಾಣನಿರಪೇಕ್ಷವಾಗಿಯೇ ಧ್ವನಿತ ವಾಗುವುದೆಂದು ವ್ಯಕ್ತಿವಾದಿಯು ಹೇಳುವುದರಿಂದ ಅವನಲ್ಲಿ ಅದು ದೋಷವಾಗು ವುದಿಲ್ಲ.[57]

ಇಲ್ಲಿಗೆ ಕಾವ್ಯಪ್ರಕಾಶದಲ್ಲಿ 'ಧ್ವನಿ-ಗುಣೀಭೂತವ್ಯಂಗ್ಯ-ಸಂಕೀರ್ಣಭೇದ-ನಿರ್ಣಯ'ವೆಂಬ ಐದನೆಯ ಉಲ್ಲಾಸ ಮುಗಿದುದು.

ಧ್ವನಿಗೆ ಗುಣೀಭೂತ-ವ್ಯಂ
ಜನೆಗಂ ದೊರೆಕೊಳ್ವ ಭೇದಸೂಕ್ಷ್ಮಮನಿದರೊಳ್ ।
ಮನಕಿಂಬಾಗಿರೆ ಮಮ್ಮಟ
ನನುವಿಸಿದಂ ಕಾವ್ಯಶಾಸ್ತ್ರಪರಿಣತ ತತ್ತ್ವಂ ॥

ಧ್ವನಿ-ವಾಚ್ಯ-ವಿವೇಕಮುಮಂ
ಮನೋಜ್ಞ-ಕವಿಸೂಕ್ತಿಸಾರಮರ್ಮಮನೆಂತುಂ ।
ವಿನುತಸುಶಾಸ್ತ್ರಸ್ಥಿತಿಯುಂ
ಮನದೊಳ್ ಪರಿಚಿಂತಿಸಲ್ಕೆ ಗಣೆಯಿದು ನಿರುತಂ ॥

---

[57] ಈ ಎಲ್ಲ ಖಂಡನೆಗಳಲ್ಲಿಯೂ ಮಮ್ಮಟನು ಆನಂದವರ್ಧನನ ಧ್ವನ್ಯಾಲೋಕವನ್ನೇ ಅನು ಸರಿಸಿದ್ದಾನೆ. ಕುತೂಹಲವುಳ್ಳವರು ಲೇಖಕನ ಕನ್ನಡ ಧ್ವನ್ಯಾಲೋಕ, ಮೂರನೆಯ ಉದ್ಯೋತ ವನ್ನು ಓದಬೇಕು.

# ಆರನೆಯ ಉಲ್ಲಾಸ

ಶಬ್ದಾರ್ಥಚಿತ್ರಂ ಯತ್ಪೂರ್ವಂ ಕಾವ್ಯದ್ವಯಮುದಾಹೃತಮ್ ।
ಗುಣಪ್ರಾಧಾನ್ಯತಸ್ತತ್ರ ಸ್ಥಿತಿಶ್ಚಿತ್ರಾರ್ಥಶಬ್ದಯೋಃ ॥೧॥

'ಶಬ್ದಚಿತ್ರ' ಮತ್ತು 'ಅರ್ಥಚಿತ್ರ' ಎಂಬ ಎರಡು ಬಗೆಯ ಕಾವ್ಯಗಳನ್ನು ಆಗಲೇ ಹೇಳಲಾಯಿತಷ್ಟೆ.[1] ಒಂದೊಂದರಲ್ಲೂ, ಒಂದರ ವೈಚಿತ್ರ್ಯವು ಪ್ರಧಾನ ಮತ್ತು ಇನ್ನೊಂದರ ವೈಚಿತ್ರ್ಯವು ಗೌಣವಾಗಿ ಶಬ್ದಾರ್ಥಗಳೆರಡರ ವೈಚಿತ್ರ್ಯವೂ ಇದ್ದೇ ಇರುತ್ತದೆ.

ಶಬ್ದಚಿತ್ರದಲ್ಲಿ ಅರ್ಥವು ಅಚಿತ್ರ (=ಅಸುಂದರ) ವಾಗಿರುವುದಿಲ್ಲ; ಅರ್ಥಚಿತ್ರದಲ್ಲಿಯಾದರೂ ಶಬ್ದವು ಅಚಿತ್ರವಾಗಿರುವುದಿಲ್ಲವೆಂದು ತಾತ್ಪರ್ಯ. ಆದ್ದರಿಂದಲೇ ಪ್ರಾಚೀನರು[2]—

ರೂಪಕಾದಿರಲಂಕಾರಸ್ತಸ್ಯಾನ್ಯೈರ್ಬಹುಧೋದಿತಃ ।
ನ ಕಾಂತಮಪಿ ನಿರ್ಭೂಷಂ ವಿಭಾತಿ ವನಿತಾನನಮ್ ॥

ರೂಪಕಾದಿಮಲಂಕಾರಂ ಬಾಹ್ಯಮಾಚಕ್ಷತೇ ಪರೇ ।
ಸುಪಾಂ ತಿಙಾಂ ಚ ವ್ಯುತ್ಪತ್ತಿಂ ವಾಚಾಂ ವಾಂಛಂತ್ಯಲಂಕೃತಿಮ್ ॥

ತದೇತದಾಹುಃ ಸೌಶಬ್ದ್ಯಂ ನಾರ್ಥವ್ಯುತ್ಪತ್ತಿರೀದೃಶೀ ।
ಶಬ್ದಾಭಿಧೇಯಾಲಂಕಾರಭೇದಾದಿಷ್ಟಂ ದ್ವಯಂ ತು ನಃ ॥

'ಕಾವ್ಯಕ್ಕೆ 'ರೂಪಕ'ವೇ ಮೊದಲಾದುವು ಅಲಂಕಾರಗಳೆಂದು ಕೆಲವರು ಹಲವಾರು ಪರಿಗಳಿಂದ ಹೇಳಿದ್ದಾರೆ. ಹೆಣ್ಣಿನ ಮುಖವು ಚೆನ್ನಾಗಿದ್ದರೂ ಒಡವೆಗಳೊಂದೂ ಇಲ್ಲದಿದ್ದರೆ ಶೋಭಿಸುವುದಿಲ್ಲ.

'ರೂಪಕ'ವೇ ಮೊದಲಾದ ಅಲಂಕಾರಗಳು ಕಾವ್ಯದ ಹೊರಮೈಯನ್ನು ಕುರಿತವೆಂದು ಇತರರು ಹೇಳುತ್ತಾರೆ. ಇವರು ನಾಮವಿಭಕ್ತಿಗಳ ಮತ್ತು ಧಾತುರೂಪಗಳ ವ್ಯಾಕರಣಶುದ್ಧಿಯನ್ನೇ ಮಾತುಗಳಿಗೆ ಅಲಂಕಾರವೆಂದು ಬಗೆಯುತ್ತಾರೆ.

ಇದನ್ನು (=ವ್ಯಾಕರಣಶುದ್ಧಿಯನ್ನು) 'ತಪ್ಪುಗಳಿಲ್ಲದ ಪದಪ್ರಯೋಗ'ವೆಂದು ಹೇಳುತ್ತಾರೆ. ಅರ್ಥದ ಸೊಗಸು ಇಂತಹುದಲ್ಲ. ನಮಗೆ ಒಪ್ಪಿಗೆಯಾದ ಅಲಂಕಾ

[1] ಮೊದಲನೆಯ ಉಲ್ಲಾಸದಲ್ಲಿ.

[2] ಇವು ಭಾಮಹನ ಕಾವ್ಯಾಲಂಕಾರದಲ್ಲಿ ಬರುತ್ತವೆ.

ರವು 'ಶಬ್ದಾಲಂಕಾರ' ಮತ್ತು 'ಅರ್ಥಾಲಂಕಾರ' ಎಂದು ಎರಡು ಬಗೆಯಾಗಿದೆ' ಎಂದು ಹೇಳಿದ್ದಾರೆ.[3]

ಶಬ್ದಚಿತ್ರಕ್ಕೆ ಉದಾಹರಣೆ :—

ಪ್ರಥಮಮರುಣಚ್ಛಾಯಸ್ತಾವತ್ತತಃ ಕನಕಪ್ರಭಃ
ತದನು ವಿರಹೋತ್ತಾಮ್ಯತ್ತನ್ವೀಕಪೋಲತಲದ್ಯುತಿಃ ।
ಉದಯತಿ ತತೋ ಧ್ವಾಂತಧ್ವಂಸಕ್ಷಮಃ ಕ್ಷಣದಾಮುಖೇ
ಸರಸಬಿಸಿನೀಕಂದಚ್ಛೇದಚ್ಛವಿರ್ಮೃಗಲಾಂಛನಃ ॥[4]

ಮೊದಲೊಳ್ ತಾನರುಣಾಂಗನಂತೆ ಬಳಿಕಂ ಸ್ವರ್ಣಾಭನಲ್ಲಿಂದಮಾ
ವಿರಹೋದ್ರಿಕ್ತಸತೀಕಪೋಲಕೆಣೆಯಾ ಶ್ವೇತತ್ವಮಂ ತಾಳ್ದಿ ತಾಂ ।
ಉದಿಪಂ ಮೇಣ್ ಮೃಗಲಾಂಛನಂ ರಜನಿಯಾ ಪ್ರಾರಂಭದೊಳ್ ಕತ್ತಲಂ
ಸದೆಯಲ್ ಶಕ್ತನೆನಲ್ ಸಮಂತು ನಳಿನೀಕಂದಂಗಳಾ ಖಂಡದೊಲ್ ॥[5]

ಅರ್ಥಚಿತ್ರಕ್ಕೆ ಉದಾಹರಣೆ :—

ತೇ ದೃಷ್ಟಿಮಾತ್ರಪತಿತಾ ಅಪಿ ಕಸ್ಯ ನಾತ್ರ
ಕ್ಷೋಭಾಯ ಪಕ್ಷ್ಮಲದೃಶಾಮಲಕಾಃ ಖಲಾಶ್ಚ ।
ನೀಚಾಃ ಸದೈವ ಸವಿಲಾಸಮಲೀಕಲಗ್ನಾ
ಯೇ ಕಾಲತಾಂ ಕುಟಿಲತಾಮಿವ ನ ತ್ಯಜನ್ತಿ ॥

ಕಿಡಿಸವದಾರಂ ಕಾಣ-
ಲ್ಕೊಡನೆಯೆ ಚೆನ್ನೆಯರ ಕುರುಳ್ಗಳುಂ ಖಳಜನರುಂ ।
ನಿಡಿದುಂ ನೀಚರ್ ಗಾಡಿಯಿ
ನೆಡೆಯಾಡುವರಘದೆ ಲಗ್ನರಸಿತರ್ ಕುಟಿಲರ್ ॥[6]

---

[3] ನೋಡಿ ಇದೇ ಲೇಖಕನ ಕನ್ನಡ ಕಾವ್ಯಾಲಂಕಾರ, ಪುಟ ೭-೮.

[4] ಮಾಲತೀಮಾಧವದಲ್ಲಿ ಬರುವ ಚಂದ್ರೋದಯವರ್ಣನೆಯೆಂದು ಚಂದ್ರಿಕಾಕಾರನು ಬರೆಯುತ್ತಾನೆ. ಮುದ್ರಿತ ಪುಸ್ತಕಗಳಲ್ಲಿ ಉಪಲಬ್ಧವಿಲ್ಲ.

[5] ಇಲ್ಲಿ ಸ್ವಭಾವೋಕ್ತಿ ಮತ್ತು ಉಪಮಾದಿ ಅರ್ಥಾಲಂಕಾರಗಳಿದ್ದರೂ ಗೌಣ.

[6] ಇಲ್ಲಿ ಅನುಪ್ರಾಸವೆಂಬ ಶಬ್ದಾಲಂಕಾರವಿದ್ದರೂ ಸಮುಚ್ಚಯವೆಂಬ ಅರ್ಥಾಲಂಕಾರವೇ ಪ್ರಧಾನ.

ಯದ್ಯಪಿ, ಎಲ್ಲ ಕಾವ್ಯವೂ ಕಟ್ಟಕಡೆಗೆ ವಿಭಾವಾದಿ ಸ್ವರೂಪದಲ್ಲೇ ಪರ್ಯವಸಾನವಾಗುವುದು ನಿಜವಾದರೂ ಸ್ಫುಟವಾದ ರಸವು ಕಾಣುತ್ತಿಲ್ಲವೆಂಬ ಕಾರಣದಿಂದ ಈ ಎರಡು ಬಗೆಯ ಕಾವ್ಯಗಳನ್ನೂ 'ಅವ್ಯಂಗ್ಯ'ವೆಂದು ಹೇಳಿದೆ. ಇಲ್ಲಿಯೂ ಸಹ ಶಬ್ದಾರ್ಥಾಲಂಕಾರಗಳ ಭೇದವನ್ನು ಗಮನಿಸಿದರೆ ಅನೇಕ ಭೇದಗಳಾಗುತ್ತವೆ. ಅವನ್ನೆಲ್ಲ ಅಲಂಕಾರ ನಿರ್ಣಯಮಾಡುವಾಗ ನಿರ್ಣಯಿಸಲಾಗುತ್ತದೆ.

ಇಲ್ಲಿಗೆ ಕಾವ್ಯಪ್ರಕಾಶದಲ್ಲಿ 'ಶಬ್ದಾರ್ಥ-ಚಿತ್ರ-ನಿರೂಪಣ'ವೆಂಬ
ಆರನೆಯ ಉಲ್ಲಾಸ ಮುಗಿದುದು

**ಚಿತ್ರಂ ಶಬ್ದಾರ್ಥಗತಂ**
**ಚಿತ್ರದವೋಲ್ ರಸಿಕಚಿತ್ತರಂಜನಚತುರಂ ।**
**ಸುತ್ರಾಮಂಗಂ ತಿಳಿಪಲ್**
**ಚಿತ್ರಮೆನಲ್ ಧಾತ್ರನಂತೆ ಮಮ್ಮಟನೊರೆದಂ ॥**

**ಸರಸಾಲಂಕೃತಿರಚನೆಯ**
**ನರಿಯಲ್ ಕವಿಭಾವಭಂಗಿಯೊಳ್ ವೈಮುರೆಯಲ್ ।**
**ವರಮಮ್ಮಟದರ್ಶನಮಂ**
**ಪರವಾದರದಿಂದೆ ಪಡೆಗೆ ಕನ್ನಡರಸಿಕರ್ ॥**